# MARULASIDDHA KAVYA

A large section of Virasaivas owe allegiance to five pontifical thrones established at Rambhapuri, Ujjaini, Benares, Srisaila and Kedar. Maruleradhya or Marulasiddha is one of the five who found the Pitha at Ujjaini. The History of these Acharyas is enshrouded in myth and miracle. Bommarasa, Parwatheswara, Siddhananjesa have written profusely on Revanasiddha, Guru of Marulasiddha and founder of the Rambhapuri Pitha. Little has been recorded about Marulasiddha.

Marulasiddha appears to be a remarkable man. Scholars are of opinion that he flourished in the 12th century. It is interesting to note that he came from an humble Harijan (Madiga) home, a highly evolved being. Deva, a poet of the 16th Century is the only person to write a full-length work on him and he attributes Harijan birth to Marulasiddha. Marula lived an eventful life. A great reformer, social rebel and thinker as he was, he endeavoured to fight animal-slaughter for sacrifical purposes and strove to remove the discard prevalent amongst the various casts and classes of India by bringing them together under one religious banner. He waged war against Brahmins, the traditional repositories of learning and also against the unlettered classes who believed in vulgarised forms of worship. He worked incessantly among the Harijans and strove to 'raise them from dust.'

This work by Deva Kavi contains 435 verses in Shatpadi metre. Shri A, N, Krishna Rao has carefully Edited the work and contributes a lengthly Preface. It is believed that this work will be a welcome addition to the much needed history of the Virasaiva Acharyas.

The Editor respectfully dedicates this work to Mahat Gandhi whose service to the Harijan cause is too well kn to need reiteration.

ದೇವ ಕವಿಯ

# ಮರುಳಸಿದ್ಧ ಕಾವ್ಯ

ಸಂಪಾದಕ

---

ಪ್ರಕಾಶಕರು

**ವಿಶ್ವವಾಣಿ ಪ್ರಕಟನ ಮಂದಿರ**

"ಅನ್ನಪೂರ್ಣ" ವಿಶ್ವೇಶ್ವರಪುರಂ

ಬೆಂಗಳೂರು ನಗರ

ಹರಿಜನ ಪ್ರಾಣರಾದ

**ಪೂಜ್ಯ ಬಾಪೂಜಿಯವರ**

ಚರಣಗಳಲ್ಲಿ

ಹರಿಜನೋದ್ಧಾರಕನಾದ ಮರುಳಸಿದ್ಧನ

ಚರಿತ್ರೆಯನ್ನು

ಅರ್ಪಿಸಿದೆ.

ಹರುಸದಿಂದ ನೋಳ್ಪ ಬುಂಜಿಪಾಘ್ರಾಣಿಸುವ
ಪರುಸನಂಗೆಯ್ವು ಕೇಳುವ ಪರಮಸುಖವ ನೋ
ಸರಿಸದರ್ಪಿಸುವ ಲಿಂಗಾಂಗದ ಬೆಡಂಗಿಂತೆಂದು ಶಿಷ್ಯಪ್ರತತಿಗೆ ||
ಕರತಳಾಮಳಕಮಂ ಮಾಡಿದ ಸಮುನ್ನತಂ
ಕರುಣಿಸುಗೆ ಸಂತತಂ ಮರುಳಸಿದ್ಧೇಶ ಸ
ದ್ಗುರು ಶಿವಾದ್ವೈತಕೆ ಕರು ಭವಮಹೀಧರಸ್ವರು ವೆಮಗಭೀಷ್ಟಫಲಮಂ ||

—ಬೊಮ್ಮರಸ 'ರೇವಣಸಿದ್ಧೇಶ್ವರ ಪುರಾಣ'

# ಮುನ್ನುಡಿ

ವೀರಶೈವ ಆಚಾರ್ಯ ಪಂಚಕರ ಬಗ್ಗೆ ಸಾಕಷ್ಟು ವಿಷಯಗಳು ಹೊರ ಬಿದ್ದಿಲ್ಲ. ಹೊರಬಿದ್ದಿರುವ ಕೆಲವು ಗ್ರಂಥಗಳಲ್ಲಿ ಐತಿಹಾಸಿಕ ದೃಷ್ಟಿ ಕಡಿಮೆ. ಅವುಗಳಲ್ಲಿ ಕೆಲವು ಪಕ್ಷಪ್ರತಿಷ್ಠೆಯನ್ನು ಸ್ಥಾಪಿಸುವ ದೃಷ್ಟಿಯಿಂದ ಬರೆಯಲ್ಪಟ್ಟಿರುವುದರಿಂದ ವಿಶ್ವಾಸಾರ್ಹವಾದುವಲ್ಲ. ಹೀಗಾಗಿ ಅವರ ಬಗ್ಗೆ ಯಾವ ವಿಷಯವನ್ನೂ ಖಚಿತವಾಗಿ ಹೇಳುವುದು ದುಸ್ಸಾಧ್ಯವಾಗಿದೆ.

ಸಂಶೋಧನೆಯ ಪ್ರಪಂಚದಲ್ಲಿರುವ ಅನಾನುಕೂಲತೆ, ಸಾಮಗ್ರಿಗಳ ಅಭಾವದ ಜತೆಗೆ ಕೋಮುವಾರು ಭಾವನೆ ತುಂಬ ಹಾವಳಿಮಾಡುತ್ತಿದೆ. ಶೋಧನ ಪ್ರಪಂಚದಲ್ಲಿ ಆಸಕ್ತರಾದ ನಾಲ್ಕು ಜನ ವಿದ್ವಾಂಸರಲ್ಲಿಯೇ ಉಳಿಯಬೇಕಾದ ಮಾತು ಜನಜೀವನದಲ್ಲಿ ಹರಡಿ ಅನವಶ್ಯಕವಾದ ರೋಷಕೋಪಗಳಿಗೆ ಕಾರಣವಾಗುತ್ತಿದೆ. ವಿದ್ಯಾಪ್ರಸಾರ, ಸಂಶೋಧನೆಗಳ ಹೆಸರಿನಲ್ಲಿ ಕೆಲವು ಸ್ವಕಾರ್ಯಧುರಂಧರರು ವಿಷಬೀಜವನ್ನು ಬಿತ್ತಿ ಬೆಳೆಸುತ್ತಲೂ ಇದ್ದಾರೆ.

ವೀರಶೈವ ಸಾಹಿತ್ಯ ಪ್ರಪಂಚದಲ್ಲಿ ಸರಿಯಾದ ಕೆಲಸಮಾಡಲು ವೀರಶೈವ ವಿದ್ವಾಂಸರಿಗೇ ಹಲವು ಪ್ರಮೇಯಗಳು ಒದಗುವಾಗ ವೀರಶೈವೇತರ ವಿದ್ವಾಂಸರ ಕಷ್ಟಗಳೆಷ್ಟೆಂಬುದನ್ನು ವರ್ಣಿಸಬೇಕಾಗಿಲ್ಲ. ಪ್ರತಿಯೊಂದು ಹೆಜ್ಜೆಗೂ ಹತ್ತುವ ಜಾತಿವಿದ್ವೇಷದ ಕಳಂಕವನ್ನೂ, ಸ್ವಾರ್ಥಸಾಧನೆಯ ಆರೋಪವನ್ನೂ ಎದುರಿಸಿಕೊಂಡೇ ನಾವು ದುಡಿಯಬೇಕಾಗಿದೆ.

ಕನ್ನಡದಲ್ಲಿ ಇದುವರೆಗೆ ಅಚ್ಚಾಗಿ ಹೊರಬೀಳದಿರುವ ಕಾವ್ಯ ಪುರಾಣಗಳು ಒಮ್ಮೆಯಾದರೂ ಅಚ್ಚಾಗಿ ಹೊರಬೀಳಬೇಕೆಂದು ವಿದ್ಯಾ ಪಕ್ಷಪಾತಿಗಳ ಇಚ್ಛೆ. ನಮ್ಮ ಪ್ರಾಚೀನ ವಾಙ್ಮಯ ಸಂಪತ್ತು ಎಷ್ಟು, ಎಂಥದು ಎಂಬ ಕಲ್ಪನೆ ಬಂದಹೊರತೂ ಸಂಶೋಧನೆ, ವಿಮರ್ಶೆಗಳಲ್ಲಿ ನಾವು ಮುಂದಡಿಯಿಡಲಾಗುವುದಿಲ್ಲ. ಈ ದೃಷ್ಟಿಯಿಂದಲೇ 'ಮರುಳಸಿದ್ಧ ಕಾವ್ಯ'ದ ಪರಿ

ಷ್ಕರಣ, ಪ್ರಕಟನೆಗಳನ್ನು ನಾವು ಕೈಗೊಂಡದ್ದು. ಮುರುಳಸಿದ್ಧನ ಬಗ್ಗೆ ಈವರೆಗೆ ದೊರೆತಿರುವ ಈ ಏಕಮಾತ್ರ ಗ್ರಂಥ ಹೊರಬಿದ್ದರೆ ಸಂಶೋಧಕರಿಗೆ ನೆರವಾಗಬಹುದೆಂದು ಬಗೆದು ನಾವು ಈ ಕೆಲಸಕ್ಕೆ ಕೈಹಾಕಿದುದು. ಮುರುಳ ಸಿದ್ಧ ಮಾದಿಗರಲ್ಲಿ ಜನನ ಪಡೆದರೂ, ಜಾತಿಯ ಶೃಂಖಲೆಯನ್ನು ಕಳಚಿ ತನ್ನ ತಪಃಪ್ರಭಾವದಿಂದ ಆಚಾರ್ಯಪದವಿಗೇರಿದ ಎನ್ನುವುದು ನಮ್ಮ ಮನಸ್ಸಿಗೆ ಹಿಡಿದ ವಿಷಯ. ಅಸ್ಪೃಶ್ಯ ಸಮಾಜದ ಉದ್ಧಾರಕ್ಕೆ ದುಡಿದು ಅವರಿಗೆ ಒಂದು ಅಸ್ತಿತ್ವವನ್ನು, ಆತ್ಮಗೌರವವನ್ನುಂಟುಮಾಡಿಕೊಟ್ಟ ಮಹಾಪುರುಷನ ಜೀವನಾದರ್ಶ ಕನ್ನಡಿಗರಿಗೆ ಅತ್ಯಗತ್ಯವೆಂದು ನಮ್ಮ ಭಾವನೆ. ಜಾತಿಮತಗಳ ಗೊಂದಲಕ್ಕೆ ಬೇಸತ್ತವರೂ, ಅಸ್ಪೃಶ್ಯತೆಯ ರಾಕ್ಷಸೀವರ್ತನಕ್ಕೆ ಸಿಡಿಮಿಡಿಗೊಳ್ಳುವವರೂ ಆದ ನಮಗೆ ಈ ಕಾವ್ಯದ ಧೋರಣೆ ಮನಸ್ಸಿಗೆ ಬಂದು, ಅದರ ಕೆಲಸವನ್ನು ಕೈಗೊಳ್ಳಲು ಪ್ರೇರಿಸಿತು. ವೀರಶೈವ ಸಮಾಜದ ಒಳಜಗಳಗಳಲ್ಲಾಗಲಿ, ಮತಪೀಠಗಳ ಅಸ್ತಿತ್ವದಲ್ಲಾಗಲಿ ನಮಗೆ ಸ್ವಲ್ಪವೂ ಆಸಕ್ತಿಯಿಲ್ಲ. ಕನ್ನಡ ಸಮಾಜಗಳಲ್ಲಿ ಒಂದಾದ ವೀರಶೈವ ಸಮಾಜವನ್ನು ನಮ್ಮದೆಂದು ಭಾವಿಸಿ ನಾವು ದುಡಿಯುತ್ತ ಬಂದಿದ್ದೇವೆ. ಪರಿಶುದ್ಧ ಮನಸ್ಸಿನಿಂದ ಕೈಗೊಂಡ ಕೆಲಸಕ್ಕೆ ಯಾರೂ ಪಕ್ಷ ಅಥವಾ ಜಾತಿಯ ವಿದ್ವೇಷವನ್ನು ಅಂಟಿಸದಿದ್ದರೇ ಅದೇ ಒಂದು ಮಹದುಪಕಾರ. ಪಂಡಿತರು ನಿರ್ಮತ್ಸರದಿಂದ ದೇವಕವಿಯ ಕಾವ್ಯವಸ್ತುವನ್ನು ಚರ್ಚಿಸಿ ಅವನ ಸಿದ್ಧಾಂತಗಳನ್ನು ವಿಚಾರದ ಹಾಗೂ ಸಂಶೋಧನೆಯ ಕಸೋಟಿಯ ಮೇಲೆ ತಿಕ್ಕಿಕೊಡಬೇಕು. ವಿದ್ಯೆಯ ಜಗತ್ತಿನಲ್ಲಿ ವಾದ ಗಂಧ ತೇದಂತಿರಬೇಕಲ್ಲದೆ, ಬಿದಿರನ್ನು ತಿಕ್ಕಿ ಬೆಂಕಿಯನ್ನು ಹುಟ್ಟಿಸಿದಂತಿರಬಾರದು.

ಈ ಗ್ರಂಥವನ್ನು ಸಿದ್ಧಪಡಿಸುವುದಕ್ಕೆ ಉಪಯೋಗಿಸಿದ ಮಾತೃಕೆಗಳು.

**ಕ** : ತಾಳೇಗರಿಯ ಪ್ರತಿ.

**ಖ** : ತಾಳೇಗರಿಯ ಪ್ರತಿ.

ಶ್ರೀ ಎಸ್. ಆರ್. ಮಲ್ಲಪ್ಪನವರ ವಿಶ್ವಾಸದಿಂದ ದೊರೆತವು.

**ಗ**: ಕಾಗದದ ಪ್ರತಿ : ಶ್ರೀ ಚೆನ್ನಮಲ್ಲಿಕಾರ್ಜುನರವರು ಕೊಟ್ಟದ್ದು. ಓರಿಯಂಟಲ್ ಲೈಬ್ರರಿಯಲ್ಲಿರುವ ಪ್ರತಿಯಿಂದ ಎತ್ತಿಬರೆದುಕೊಂಡದ್ದು. ಓರಿ

ಯಂಟಲ್ ಲೈಬ್ರರಿಯ ಪ್ರತಿ ನಾವು ಉಪಯೋಗಿಸಿರುವ ಕ ಪ್ರತಿಯಿಂದ ಎತ್ತಿ ಬರೆದುದಾಗಿದೆ.

ಇವುಗಳಲ್ಲಿ ಕ ಪ್ರತಿಯೊಂದೇ ಸಂಪೂರ್ಣವಾಗಿರುವುದು. ಈ ಒಂದು ಪ್ರತಿಯ ಆಧಾರದ ಮೇಲೇ ಕಾವ್ಯವನ್ನು ಪರಿಷ್ಕರಿಸಲಾಗಿದೆ. ಹೆಚ್ಚು ಪ್ರತಿಗಳನ್ನು ದೊರಕಿಸಲು ನಾವು ಮಾಡಿದ ಪ್ರಯತ್ನ ಸಾರ್ಥಕವಾಗಲಿಲ್ಲ. ಖ ಪ್ರತಿ ಅಪೂರ್ಣವಾಗಿರುವುದು ಮಾತ್ರವಲ್ಲದೆ ಪ್ರತಿಕಾರನ ಆಲಸ್ಯದಿಂದ ಬಹಳ ದೋಷಗಳಿವೆ.

ನಾವು ಆದಷ್ಟು ಮೂಲಪ್ರತಿಯ ಪಾಠಗಳನ್ನೇ ಇಟ್ಟುಕೊಂಡು ಬಂದಿದ್ದೇವೆ. ಅನೇಕ ಸಲ ಪ್ರತಿಕಾರರ ದೋಷಗಳನ್ನು ಕವಿಯ ದೋಷಗಳೆಂದು ಭಾವಿಸಿ ಸಂಶೋಧಕರು ತಿದ್ದುತ್ತಾರೆ. ಇದು ನ್ಯಾಯವಾದುದಲ್ಲ. ಪಾಠಗಳು ತಪ್ಪಾಗಿದ್ದರೂ ನಮಗೆ ದೊರೆತಂತೆಯೇ ಇಡುವುದು ಒಳ್ಳೆಯದು. ಮುಂದೆ ಹೆಚ್ಚು ಹಸ್ತಪ್ರತಿಗಳು ದೊರೆತಾಗ ಖಚಿತವಾದ ಪಾಠವನ್ನು ನಿರ್ಣಯಿಸುವುದಕ್ಕೆ ಅನುಕೂಲವಾಗುತ್ತದೆ. ಕೆಲವು ಕಡೆ ಮಾತ್ರ ಕೆಲವು ವ್ಯಾಕರಣ ಛಂದಸ್ಸುಗಳ ಸ್ವತಸ್ಸಿದ್ಧ ದೋಷಗಳನ್ನು ತಿದ್ದಿದ್ದೇವೆ. ಆದರೆ ಎಲ್ಲಿಯೂ ಕಾವ್ಯದಲ್ಲಿದ್ದ ಪಾಠಗಳಲ್ಲಿ ತಿದ್ದುಪಡಿಗಳನ್ನು ಮಾಡಿಲ್ಲ.

ನಮ್ಮ ಪ್ರಯತ್ನಕ್ಕೆ ವಿಶೇಷ ನೆರವು ನೀಡಿ ಹಸ್ತಪ್ರತಿಗಳನ್ನೂ, ಇತರ ಸಾಹಿತ್ಯ ಸಾಮಗ್ರಿಗಳನ್ನೂ ಒದಗಿಸಿದ ಶ್ರೀ ತಿಪಟೂರಿನ ಎಸ್. ಆರ್. ಮಲ್ಲಪ್ಪನವರ ಉಪಕಾರವನ್ನು ಸ್ಮರಿಸುತ್ತೇವೆ. ಮರುಳಸಿದ್ಧನ ಬಗ್ಗೆ ತಮ್ಮ ಸಂಶೋಧನೆಗಳನ್ನು ಟಿಪ್ಪಣಿ ಮಾಡಿ ಕಳುಹಿಸಿದ ಪ್ರಸಿದ್ಧ ವಿದ್ವಾಂಸರಾದ ಮಂಜೇಶ್ವರದ ಶ್ರೀ ಗೋವಿಂದಪೈಗಳವರೂ, ಶ್ರೀ ಟಿ. ಎಚ್. ಎಂ. ಸದಾಶಿವಯ್ಯನವರೂ ನಮ್ಮ ಚಿರಕೃತಜ್ಞತೆಗೆ ಪಾತ್ರರು. ಶ್ರೀ ಜೀರಿಗೆ ಬಸವಪ್ಪನವರು ಮರುಳಸಿದ್ಧನ ಕ್ಷೇತ್ರಗಳನ್ನು ಸಂದರ್ಶಿಸಿ ಸಂಗ್ರಹಿಸಿದ ಟಿಪ್ಪಣಿಗಳನ್ನು ನಮ್ಮ ಉಪಯೋಗಕ್ಕಿತ್ತು ಉಪಕಾರ ಮಾಡಿದ್ದಾರೆ. ಗೆಳೆಯರಾದ ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯರೂ ಅರ್ಚಿಕ ವೆಂಕಟೇಶರವರೂ ಪ್ರತಿ ತೆಗೆಯುವುದರಲ್ಲಿ ತಪ್ಪೋಲೆ ನೋಡುವುದರಲ್ಲಿ ಶಬ್ದಕೋಶ ಸಂಗ್ರಹದಲ್ಲಿ ಸಹಕರಿಸಿದ್ದಾರೆ. ಅರ್ಚಿಕ ವೆಂಕಟೇಶರು ಕಥಾಸಾರಾಂಶವನ್ನು ಬರೆದುಕೊಟ್ಟಿದ್ದಾರೆ.

ಗೆಳೆಯ ಎಸ್. ಎನ್. ಸ್ವಾಮಿಯವರು ಮಹಾತ್ಮಾ ಗಾಂಧಿಯವರ ರೂಪಚಿತ್ರ ವನ್ನು ರಚಿಸಿಕೊಟ್ಟಿದ್ದಾರೆ. ಇವರೆಲ್ಲರಿಗೂ ನಾವು ಅಲ್ಲಲ್ಲಿ ಉದ್ಧರಿಸಿರುವ ವಿದ್ವಾಂಸರ ಕೃತಿಗಳಿಗೂ ನಾವು ಋಣಿಗಳಾಗಿದ್ದೇವೆ.

ಹರಿಜನೋದ್ಧಾರಕನಾದ ಮರುಳಸಿದ್ಧನ ದಿವ್ಯಚರಿತ್ರೆಯನ್ನು ಹರಿಜನ ಪ್ರಾಣರಾದ ಪೂಜ್ಯ ಬಾಪೂಜಿಯವರಿಗೆ ಅರ್ಪಿಸಿದ್ದೇವೆ. ಇದಕ್ಕೆ ಅವರಿಗಿಂತಲೂ ಅರ್ಹರಾದವರು ಯಾರು ?

" ಅನ್ನಪೂರ್ಣ "
ವಿಶ್ವೇಶ್ವರಪುರಂ,
ಬೆಂಗಳೂರು ನಗರ

**ಅ. ನ. ಕೃಷ್ಣರಾಯ.**

# ವಿಷಯಾನುಕ್ರಮಣಿಕೆ

---



## ಮುಖಚಿತ್ರ



———:———

# ಪೀಠಿಕೆ

**ಮರುಳಸಿದ್ಧ :** ಪಂಚಾಚಾರ್ಯರಲ್ಲಿ ಒಬ್ಬನೂ ಪ್ರಭಾವಶಾಲಿಯೂ ಆದ ಮರುಳಸಿದ್ಧ ಐತಿಹಾಸಿಕ ವ್ಯಕ್ತಿ. ಕಾಲಕಾಲಕ್ಕೆ ಅವನ ಉಲ್ಲೇಖನವನ್ನು ಕವಿಗಳೂ, ವಚನಕಾರರೂ ಮಾಡಿದ್ದರೂ ಅವನ ಜೀವನ ಚರಿತ್ರೆಯನ್ನು ವಿವರಿಸುವ ಗ್ರಂಥ ಉಪಲಬ್ಧವಾಗಿರಲಿಲ್ಲ. ಈಗ ದೊರೆತಿರುವ ದೇಶಕವಿಯ 'ಮರುಳಸಿದ್ಧಕಾವ್ಯ' ಈ ದೃಷ್ಟಿಯಿಂದ ತುಂಬ ಬೆಲೆಯುಳ್ಳದ್ದಾಗಿದೆ.

ಪ್ರಾಚೀನ ಮಹಾವ್ಯಕ್ತಿಗಳ ಜೀವನದ ಐತಿಹಾಸಿಕಾಂಶಗಳನ್ನು ನಾಲ್ಕು ಆಧಾರಗಳ ಮೇಲೆ ಕಟ್ಟಬೇಕಾಗುತ್ತದೆ. ೧. ಕಾವ್ಯ ಪುರಾಣಗಳಲ್ಲಿ ಬರುವ ಉಲ್ಲೇಖ. ೨. ಅಪರ ಕೃತಿಗಳಲ್ಲಿ ದೊರೆಯಬಹುದಾದ ಇತಿಹಾಸ. ೩. ಶಾಸನಾಧಾರ. ೪. ಪ್ರತೀತಿ. ಸ್ಥಳಪುರಾಣ.

## ಕಾವ್ಯ ಪುರಾಣಗಳಲ್ಲಿ ಬರುವ ಉಲ್ಲೇಖಗಳು

೧. **ಶ್ರೀಕರ ಭಾಷ್ಯ :** ಶ್ರೀಪತಿ ಪಂಡಿತ (೧೧೬೦)*

**ಸಮ್ಯಗ್ರೇವಣದೇಶಿಕೇಂದ್ರ ಧೃತಷಡ್ಲಿಂಗೋಜ್ವಲಂ ।**
**ಸಿದ್ಧಾರ್ಯಂ ಮರುಳಪ್ರಭುಂ ಬುಧನುತಂ ತಂಮನ್ಮಹೇ ಶ್ರೇಯಸೇ ॥**

೨. **ಗುರುರಾಜಚಾರಿತ್ರ :** ಸಿದ್ಧನಂಜೇಶ (೧೬೫೦) 'ಪರಮವೈರಾಗ್ಯ ಸಂಪನ್ನ ಸರ್ವಾತ್ಮಕಂ ನಿರುಪಾಧಿಕಂ ನಿರಾತಂಕ ನಿರ್ಲೇಪಂ' ಎಂದು ವರ್ಣಿಸಲ್ಪಟ್ಟಿದ್ದಾನೆ. ಮರುಳಸಿದ್ಧನ ಪ್ರವಾಸಸ್ಥಳಗಳು, ಕೊಲ್ಲಾಪುರದ ಮಾಯಿ ವೃತ್ತಾಂತವೂ ಇದರಲ್ಲಿವೆ.

೩. **ಚತುರಾಚಾರ್ಯ ಪುರಾಣ :** ಸಂಪಾದನೆಯ ಪರ್ವತೇಶ್ವರ (೧೬೯೮) ಇದರಲ್ಲಿ 'ವೀರಶೈವಾಚಾರ್ಯ'ನೆಂದು ವರ್ಣಿಸಲ್ಪಟ್ಟಿದ್ದಾನೆ.

---

* ಕವಿಚರಿತ್ರೆ ಭಾಗ ೧. ಪುಟ ೨೧೨.

೪. **ಮಹಾದೇವಿಯಕ್ಕನ ರಗಳೆ:** ಚಿಕ್ಕರಾಚಯ್ಯ.

"ಶ್ರೀಗುರು ಮರುಳಸಿದ್ಧೇಶ್ವರ ಶಿವಯೋಗಿ
ಆಗಮ ದೀಕ್ಷಾಚಾರ್ಯ
ಆಗಳೆ ಓಂಕಾರಶೆಟ್ಟಿ ಗೃಹಕೆ ದೀ
ಕ್ಷೆ ಗುರುವಾಗಿ ಚಿತ್ತೈಸೆ
ರೇಣುಕ ಗಣಾಧೀಶ್ವರ ಶಿವಭಕ್ತ ದೀಕ್ಷಾಚಾರ್ಯ
ನಾಮವೇಳ್ಕುಮೆಂದು ಅಷ್ಟಷಷ್ಟಿ ರುದ್ರಗಣಂಗಳ
ಸಮುದ್ಭವಲಿಂಗದಲ್ಲಿ ಕೊಲ್ಲಿಪಾಕದ
ಸೋಮೇಶ್ವರನಲ್ಲಿಯುದ್ಭವನಾಗಿ
ಆತಂಗೆ ಶಿಷ್ಯನಾಗಲ್ಪಡುವ ಮರುಳಸಿದ್ಧೇಶ್ವರ ದೇವರು
ಕೈಲಾಸದಲ್ಲಿ ಗುಪ್ತಗಣೇಶ್ವರನಾಗಿರಲಿಕ್ಕೆ
ಅಮ್ಮನವರ ಸೀರೆಯ ಸೆರಗು ಸೋಕಿನಿಂದ
ಉಜ್ಜನಿಯಲ್ಲಿ ಕುಡವಕ್ಕಲಿಗರ
ಗರ್ಭಾವತಾರ ಕರುಗಳಂ ಕಾಯ್ದು ಉಜ್ಜನಿಯ
ಮಲ್ಲಿಕಾರ್ಜುನನಿಂದ ಪ್ರಸನ್ನವಡದು
ರೇವಣಸಿದ್ಧೇಶ್ವರನಿಂದ ಪುನರ್ಜಾತನಾಗಿ ಉಪದೇಶಿಯಾಗಿ
ಮರುಳಸಿದ್ಧೇಶ್ವರನೆಂಬ ನಾಮ ಬಿತ್ತು ಮಹಾದೇವಿಯಕ್ಕಗೆ
ಗುರುದೀಕ್ಷಾಧಾರನೆಂಬದಿರವ ತಾತ್ಪರ್ಯಾರ್ಥ"

೫. **ಚತುರಾಚಾರ್ಯ ಪ್ರಬಂಧ:** ಸೋಮ.

೬. **ಗುರುಬೋಧೆ:** ಗದ್ದುಗೆಯ ರಾಮಿತಂದೆ.
ಈ ಗ್ರಂಥ ಉಪಲಬ್ಧವಿಲ್ಲ.

೭. **ಆದಯ್ಯನ ವಚನಗಳು:** ಆದಯ್ಯ.

"ಮರುಳ ಸಿದ್ದಯ್ಯದೇವರ ಅದೃಷ್ಟ ಪ್ರಸಾದ ನಿಷ್ಠೆ" (ವಚನ ೭೯)
"ಮರುಳಸಿದ್ಧೇಶ್ವರದೇವರೆನ್ನಶ್ರೋತ್ರ" (ವಚನ ೪೦)

೮. **ಸಿದ್ಧರಾಮೇಶ್ವರನ ವಚನಗಳು:** ಸಿದ್ಧರಾಮ.

"ಮರುಳಸಿದ್ದಯ್ಯ ಮನವಕೊಟ್ಟ ಗಣಪ್ರಸಾದವ ತಡೆದ"
(ವಚನ ೪೫)
"ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ" (ವಚನ ೪೫೯)

೯. **ಮುರುಳಸಿದ್ಧಕಾವ್ಯ :** ದೇವಕವಿ (೧೫೮೭)

೧೦. **ಮುರುಳಸಿದ್ಧೇಶ್ವರ ಸಾಂಗತ್ಯ :** ನಾಗಭೂಷಣ (ಸು. ೧೬೫೦)

೧೧. **ಮುರುಳಸಿದ್ಧ ಚಾರಿತ್ರ್ಯ.** ಸಾಂಗತ್ಯ

೧೨. **ಸೋಮನಾಥಭಾಷ್ಯ:** ಪಾಲ್ಕುರಿಕೆ ಸೋಮ (೧೩ನೆಯ ಶತಮಾನದ ಆದಿಭಾಗ)

೧೩. **ಕೊಲನುಪಾಕ ಮಹಾತ್ಮ್ಯಮು:** ಚಿತಾರು ಗಂಗಾಧರ ಕವಿ (ಕ್ರಿ. ಶ. ೧೬೦೦)

## ಶಾಸನಗಳು

೧. ಶಿರಿವಾಳ ಶಾಸನ : ಕಾಲ ೧೧೮೭.

*೨. ಉಜ್ಜಯಿನಿ ಸಿದ್ಧೇಶ್ವರ ದೇವಾಲಯದ ಹೊರ ಆವರಣದಲ್ಲಿ ಬಿದ್ದಿರುವ ಶಾಸನ : ಕಾಲ : ೧೧೧೫ (?) ಶಾ. ಶ. ಪರೀಧಾವಿ ಆಶ್ವಯುಜ. ಕದಂಬಕುಲದ ಜಗದ್ದಳ ಪಾಂಡ್ಯನನ್ನು ಸ್ತುತಿಸುತ್ತದೆ. ಅವನು ಕಲಿದೇವರಿಗೆ ೪೦೦ ಕಂಬ ಭೂಮಿಯನ್ನು ಕೋಗಳ್ಳಿಯಲ್ಲಿ ದತ್ತಿಕೊಟ್ಟ ವಿಷಯವಿದೆ. ಶಾಸನ ಬರೆದವನು ಬಸವೋಜನ ಮಗ ಅಕ್ಕಸಾಲೆ ಕೇತೋಜ.

*೩. ಅದೇ ದೇವಸ್ಥಾನದ ಗರ್ಭಗುಡಿಯ ಬಳಿ ಬಿದ್ದಿರುವ ಕಲ್ಲು : ಕಾಲ : ೧೪೬೧ ಶಾ. ಶ. ವಿಕೃತಿ ಭಾದ್ರಪದ ಶುದ್ಧ ೧೨, ಮಂಗಳವಾರ. ವಿಜಯನಗರದ ದೊರೆ ಅಚ್ಯುತರಾಯ ಬ್ರಾಹ್ಮಣರಿಗೆ ಕೊಟ್ಟ ಆನಂದನಿಧಿಯ ಉಲ್ಲೇಖವಿದೆ.

*೪. ಅದೇ ದೇವಸ್ಥಾನದ ಗರ್ಭಗುಡಿಯ ಮುಂದಿರುವ ಮಂಟಪದ ಒಂದು ಕಂಬದ ಮೇಲೆ : ಯಾದವರ ವಂಶಕ್ಕೆ ಸಂಬಂಧಪಟ್ಟದ್ದು. ಜೀರ್ಣವಾಗಿ ಹೋಗಿದೆ. ಕನ್ನಡಲಿಪಿ ೧೩ನೆಯ ಶತಮಾನದ್ದು.

*೫. ಅದೇ ಹಳ್ಳಿಯ ಒಂದು ಹೊಲದಲ್ಲಿ ನೆಟ್ಟಿರುವ ಕಲ್ಲಿನ ಮೇಲೆ : ಕಾಲ ೧೪೯೨, ರೌದ್ರಿ. ಆಷಾಢ ಶುದ್ಧ ಪಂಚಮಿ. ಲಿಂಗಣ್ಣೊಡೆಯರ

* ಈ ನಾಲ್ಕು ಶಾಸನಗಳನ್ನು ಸೂಚಿಸಿದವರು ಮದರಾಸಿನ ಶಾಸನಾಧಿಕಾರಿಗಳು. (ಸಂಖ್ಯೆ ೩೦೭, ೩೦೮, ೩೦೯, ೩೧೦)

ಶಿಷ್ಯನಿಗೆ ಭೂಮಿ ಮತ್ತು ಎರಡು ಹುಣಿಸೇಮರಗಳನ್ನು ಮಾರ್ಗಸಹಾಯ ನಾಯಕನು ತನ್ನ ತಂದೆಯ ಹೆಸರಿನಲ್ಲಿ ದಾನಕೊಟ್ಟ ಶಾಸನ.

†೬. ಆನುಗೋಡು ಹೋಬಳಿ ಆನುಗೋಡು ಹಳ್ಳಿಯಲ್ಲಿ ದೊರೆತಿರುವ ಶಾಸನ: ಕಾಲ ೧೮ನೆಯ ಶತಮಾನದ ಅಂತ್ಯ ಅಥವಾ ೧೯ನೆಯ ಶತಮಾನದ ಆದಿ. 'ಆ ತರುಳವಾಳ ಚರ ಮೂರ್ತಿ ಸಿದ್ದಪ್ಪದೇವರ ಮಠ' ಎಂದಿದೆ.

**೭. ಉಜ್ಜಪ್ಪನಡೇರಹಳ್ಳಿಯ ಪಾಳುಗ್ರಾಮದ ನಿವೇಶನದಲ್ಲಿ ನಟ್ಟ ಕಲ್ಲು: ಕಾಲ ೧೬೫೮ (?) ಉಜ್ಜಯಿನಿಯ ತೆಲುಗುಬಾಳ ಉಜ್ಜಪ್ಪ ದೇವನ ಮೊಮ್ಮಗ ಸಿದ್ದಪ್ಪ ಭಾವಿ ತೆಗೆಸಲು ಅರ್ಧಮಾನ್ಯ ಕೊಟ್ಟದ್ದು.

## ಕಾಲ ನಿರ್ಣಯ

'ಮಠಸ್ಥಲ ನಿರ್ಣಯ' ಆಚಾರ್ಯರ ಕಾಲವನ್ನು ಒಂದೊಂದು ಯುಗಕ್ಕೆ ಗಂಟುಹಾಕಿದೆ. ರೇವಣಸಿದ್ಧ ಕೃತಯುಗ, ಮರುಳಸಿದ್ಧ ತ್ರೇತಾಯುಗ, ಏಕೋರಾಮ ದ್ವಾಪರಯುಗ, ಪಂಡಿತಾರಾಧ್ಯ ಕಲಿಯುಗದ ಆಚಾರ್ಯರಾದರೆಂದು ಹೇಳಿದೆ. ಇದು ವಿಚಾರಕ್ಕೆ ಒಪ್ಪದ ಮಾತು. ಆಚಾರ್ಯರ ಕಾಲವನ್ನು ಪಂಡಿತರು ಸಂಶೋಧಿಸಲೆತ್ನಿಸಿದ್ದಾರೆ.

ಮರುಳಸಿದ್ಧ ಮತ್ತು ರೇವಣಸಿದ್ಧ ಸಮಕಾಲೀನರಾಮದರಿಂದ ರೇವಣಸಿದ್ಧನ ಕಾಲನಿರ್ಣಯವನ್ನೇ ಮರುಳಸಿದ್ಧನ ಕಾಲವೂ ಅವಲಂಬಿಸಿದೆ. ಈ ವಿಚಾರವಾಗಿ ಶ್ರೀಮಾನ್ ಮಂಜೇಶ್ವರದ ಗೋವಿಂದಪೈಗಳವರು ಹೀಗೆ ಬರೆಯುತ್ತಾರೆ:— †

"ರೇವಣನಿಂದ ಮರುಳಸಿದ್ಧನಿಗೆ ದೀಕ್ಷೆಯಾಯಿತೆಂದು ತಿಳಿದು ಬರುತ್ತದೆ. ಅನಂತರ ಅವನು ಕೊಲ್ಲಾಪುರಕ್ಕೆ ಹೊರಟ. ದಾರಿಯಲ್ಲಿ 'ಓರ

† Annual Report of the Mysore Archaeological Department: 1939. Page 129.

** Epigraphica Carnatica : vol xi-(1903). Pages 86–230.

† ನನಗೆ ಬರೆದಿರುವ ಪತ್ರ ೧೦ ನವೆಂಬರ್ ೧೯೪೪.

ಗಲ್ಲಿನ ರುದ್ರರಾಯನ ಪಿತನು ಗಣಪತಿಯು ದೇಶ' ದಲ್ಲಿ ಗುಂಡಯ್ಯನನ್ನು ಸಂಧಿಸಿದನು. ಕಾಕತೀಯ ವಂಶದ ಗಣಪತಿ ಓರಗಲ್ಲಿನಲ್ಲಿ ಕ್ರಿ.ಶ. ೧೧೯೯ ರಿಂದ ೧೨೬೦ರವರೆಗೆ ಆಳಿದ. ಅವನಾನಂತರ ಅವನ ಮಗಳು ರುದ್ರಮ್ಮ-ರುದ್ರ ಮಹಾರಾಜಯೆಂಬ ಪುರುಷಾಭಿಧಾನದಿಂದ ೧೨೬೦-೧೨೯೧ರವರೆಗೆ ಆಳಿದಳು. ದೇಪ ಹೇಳಿರುವುದು ಸರಿಯಾದರೆ ರುದ್ರರಾಯನೇ ರುದ್ರಮ್ಮ ಮತ್ತು ಅವನು ವಾರಂಗಲ್ಲಿಗೆ ಹೋದ ಕಾಲ ೧೧೯೯-೧೨೬೦ (ಆಕೆಯ ತಂದೆಯ ಆಳಿಕೆಯಲ್ಲಿ) ಎಂದು ತಿಳಿದು ಬರುತ್ತದೆ.

ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟವಾಗಿರುವ ಆದಯ್ಯನ ವಚನಗಳಲ್ಲಿ ಮರುಳಸಿದ್ಧ ಉಲ್ಲೇಖಿಸಲ್ಪಟ್ಟಿದ್ದಾನೆ. ಆದಯ್ಯನ ಮೇಲೆ ಹರಿಹರ ಕವಿ ಒಂದು ರಗಳೆಯನ್ನು ಬರೆದಿದ್ದಾನೆ. ಹರಿಹರ ೧೧೫೦-೧೨೨೦ರಲ್ಲಿ ಇದ್ದಿರಬೇಕೆಂದು ನಾನು ಬೇರೆ ಕಡೆ ಬರೆದಿದ್ದೇನೆ. ಬಸವಣ್ಣನ ಹೆಸರನ್ನು ತನ್ನ ವಚನದಲ್ಲಿ ಹೇಳಿರುವ ಆದಯ್ಯ ೧೨೧೦ರಲ್ಲಿ ತೀರಿಕೊಂಡಿರಬೇಕು.

ತನ್ನ 'ಶ್ರೀಕರಭಾಷ್ಯ'ದಲ್ಲಿ ಶ್ರೀಪತಿ ಪಂಡಿತ ರೇವಣನ ಜತೆಯಲ್ಲಿ ಮರುಳಸಿದ್ಧನ ಹೆಸರನ್ನು ಹೇಳಿದ್ದಾನೆ. ನಾಲ್ಕನೆಯ ಆಚಾರ್ಯನಾದ ಬಸವಣ್ಣನ ಸಮಕಾಲೀನ ಮಲ್ಲಿಕಾರ್ಜುನ ಪಂಡಿತಾರಾಧ್ಯ ತನ್ನ ತೆಲುಗು 'ಶಿವತತ್ತ್ವಸಾರ' ದಲ್ಲಿ ಶ್ರೀಪತಿ ಪಂಡಿತನ ಹೆಸರು ಹೇಳುತ್ತಾನೆ. ಹರಿಹರ ತನ್ನ 'ಲಿಂಗಾರ್ಚನೆಯ ರಗಳೆ'ಯಲ್ಲಿ ಪಂಡಿತಾರಾಧ್ಯನ ಹೆಸರು ಹೇಳುತ್ತಾನೆ.

ಈ ಎಲ್ಲ ಅಂಶಗಳನ್ನು ಗಮನಕ್ಕೆ ತಂದುಕೊಂಡರೆ ಮರುಳಸಿದ್ಧನ ಕಾಲ ಕ್ರಿ. ಶ. ೧೧೨೦-೨೫ ಅಥವಾ ೧೨೦೫-೧೦ ಇರಬಹುದೆಂದು ತೋರುತ್ತದೆ."

ಶ್ರೀಮಾನ್ ಟಿ. ಎಚ್. ಎಂ. ಸದಾಶಿವಯ್ಯನವರು ಹೀಗೆ ಬರೆಯುತ್ತಾರೆ * :—

"ರೇವಣಸಿದ್ಧನಿಗೂ ಮರುಳಸಿದ್ಧನಿಗೂ ನಿಕಟ ಸಂಬಂಧವಿರುವುದರಿಂದ ಮರುಳಸಿದ್ಧನ ಕಾಲನಿರ್ಣಯವು ರೇವಣಸಿದ್ಧನ ಕಾಲನಿರ್ಣಯವನ್ನು ಅವಲಂಬಿಸಿರುತ್ತದೆ. ರೇವಣಸಿದ್ಧನು ೧೨ನೆಯ ಶತಮಾನದಲ್ಲಿದ್ದನೆಂದು

* ನನಗೆ ಕಳುಹಿಸಿಕೊಟ್ಟಿರುವ ಟಿಪ್ಪಣಿಯಿಂದ ಉದ್ಧೃತ.

ಶಾಸನಗಳ, ವಚನಗಳ ಮತ್ತು ಹರಿಹರನ ಕಾವ್ಯಗಳ ಆಧಾರದ ಮೇಲೆ ಸ್ಥೂಲವಾಗಿ ನಿರ್ಧರಿಸಬಹುದು. ಕ್ರಿ.ಶ. ೧೧೮೭ರಲ್ಲಿ ಹುಟ್ಟಿದ ಶಿರಿವಾಳ ಶಾಸನದಲ್ಲಿ "ಮೂರ್ಲೋಕ ಸಿದ್ಧಪ್ರಸಿದ್ಧರಪ್ಪ ಸಿದ್ಧರೇವಣಯ್ಯಂಗಳ" ಉಲ್ಲೇಖವಿದ್ದು ಆ ಶಾಸನದಲ್ಲಿ ಹೇಳಿರುವ ಪವಾಡಗಳು ಹರಿಹರನ ರಗಳೆ, ಬೊಮ್ಮರಸನ ರೇವಣಸಿದ್ಧಪುರಾಣ, ಬಸವಾಂಕನ ರೇವಣಸಿದ್ಧ ಸಾಂಗತ್ಯ ಮುಂತಾದವುಗಳಲ್ಲಿರುವ ಕಥೆಗಳನ್ನು ಹೋಲುತ್ತವೆ. ಕಾರಣ ಈ ಶಾಸನವು ರೇವಣಸಿದ್ಧನಿಗೇನೆ ಸಂಬಂಧಿಸಿದುದೆಂದು ಹೇಳಬಹುದು. ಇದರಲ್ಲಿ ರೇಣುಕಾಚಾರ್ಯನು ಶಿವಯೋಗಿ ಶಾಂತಿಮಯ್ಯಗಳ ಪುತ್ರನೆಂದು ಹೇಳಿದೆ. ಕ್ರಿ. ಶ. ೧೬೦೦ ಆ ಪ್ರಾಂತ್ಯದಲ್ಲಿ ಬರೆಯಲ್ಪಟ್ಟ 'ಸಂಗಮೇಶ್ವರನ ವಚನಗಳು' ಎಂಬ ಗ್ರಂಥದಲ್ಲಿ 'ಅನುಭವಮಂಟಪದ ಶೂನ್ಯಸಿಂಹಾಸನದಲ್ಲಿ ಮಹಾಪ್ರಭುವು ವೀರಶೈವ ಶರಣನ ನಿಜಾಚರಣೆಯ ನಿಲುಕಡೆಯನರುಹಿದನು ನೋಡಾ'........ ಅದೇ ಪ್ರಸಾದವನ್ನೇ ನಿರ್ಲಜ್ಜಶಾಂತಯ್ಯನೆಂಬ ದೇಶಿಕೇಂದ್ರನು ಚಂಗಣಗಲ ಮಂಟಪದ ರೇವಣಸಿದ್ಧೇಶ್ವರಂಗೆ ಬೋಧಿಸಿದರು ನೋಡಾ. ಅದೇ ಪ್ರಸಾದವನ್ನೇ ರೇವಣಸಿದ್ಧೇಶ್ವರನೆಂಬ ದೇಶಿಕೇಂದ್ರನು ಜ್ಞಾನೋದಯವಾಗಿ ತಮ್ಮಡಿಗೆರಗಿ ಬಂದ ಶಿಷ್ಯೋತ್ತಮ ಶಿವಶರಣರ್ಗೆ ಸ್ವಾನುಭವ ಸೂತ್ರವ ಬೋಧಿಸುತಿರ್ದರು ನೋಡಾ" ಎಂದು ಬರೆದಿರುವುದು ನೋಡಿದರೆ ರೇವಣಸಿದ್ಧನು ಶಾಸನೋಕ್ತ ಶಿವಯೋಗಿ ಶಾಂತಿಮಯ್ಯಗಳ ಕರಕಮಲಸಂಜಾತನಾಗಿರಬೇಕೆಂದು ಕಾಣುತ್ತದೆ. ಈ ಸಂದರ್ಭದಲ್ಲಿ ಸ್ವಯಂಭುವಾಗಮದಲ್ಲಿ ರೇಣುಕನಿಗೆ 'ಶಾಂತಮಲ್ಲಿಕಾರ್ಜುನಲಿಂಗ'ವೆಂಬ ಪ್ರಾಣಲಿಂಗವಿದ್ದಿತೆಂದು ಹೇಳಿರುವ ಅಂಶವು ಗಮನಾರ್ಹವಾಗಿರುವುದು."

ಶ್ರೀಮಾನ್ ಕರ್ಲಮಂಗಲಂ ಶ್ರೀಕಂಠಯ್ಯನವರು ಹೀಗೆ ಅಭಿಪ್ರಾಯಪಡುತ್ತಾರೆ *:—

"ನಾವು ನಮಗೆ ದೊರೆಯಬಹುದಾದ ಚಾರಿತ್ರಿಕ, ಐತಿಹಾಸಿಕ, ಪೌರಾಣಿಕ ಆಧಾರಗಳ ಮೇಲೆ ಇದುವರೆಗೆ ದೊರೆತ ಸಾಧನಗಳನ್ನೆಲ್ಲಾ ಉಪಯೋಗಿಸಿಕೊಂಡು ಒಟ್ಟಿನಲ್ಲಿ 'ರೇಣುಕ ಅಥವಾ ರೇವಣಸಿದ್ಧನ' ಕಾಲವು

* ವೀರಶೈವ ಮಠಾಚಾರ್ಯರ ಕಾಲ ನಿರ್ಣಯ—ಪುಟ ೫೫.

ಸರಿಸುಮಾರು ೧೧೨೬ರಿಂದ ೧೨೧೦ರ ವರೆಗಿದ್ದಿರಲೇಬೇಕೆಂದು ನಂಬುವುದಕ್ಕೆ ಈಗ ಯಾವ ಅಡ್ಡಿಯೂ ಇಲ್ಲ............ಮರುಳಸಿದ್ಧನು ದಾರುಕನ ಅವತಾರ ವೆಂದು ಹೇಳುತ್ತಾರೆ. ಈತನು ರೇವಣಸಿದ್ಧನ ಕಾಲದಲ್ಲಿದ್ದನೆಂದು ಸಿದ್ಧನಾಥ ಶಿವಾಚಾರ್ಯನು ರೇಣುಕ ವಿಜಯದಲ್ಲಿ ಬರೆದಿರುವುದರಿಂದಲೂ ಇತರ ಕನ್ನಡ ಕವಿಗಳು ಈ ವಿಷಯವಾಗಿ ದನಿಗೂಡಿಸಿರುವುದರಿಂದಲೂ ಈತನು ರೇವ ಣನ ಕಾಲದಲ್ಲಿದ್ದನೆಂದು ಊಹಿಸಬಹುದು. ಈತನು ಕಗ್ಗಲ್ಲಗೌಡನಿಗೆ ಮಗು ವಾಗಿ ಸಿಕ್ಕಿದನೆಂದು ಪುರಾಣಗಳಲ್ಲಿ ಹೇಳಿರುವುದರಿಂದ ಈತನೂ ಕ್ರಿ. ಶ. ೧೧೮೭ರಲ್ಲಿರಬಹುದು."

ಹಾವೇರಿಯ ಶ್ರೀ ಚನ್ನಮಲ್ಲಿಕಾರ್ಜುನರು "ರೇವಣಸಿದ್ಧರು ಇಮ್ಮಡಿ ವೀರರಾಜೇಂದ್ರನ ಕಾಲದವರೆವಿಗೂ ಎಂದರೆ ಸುಮಾರು ಕ್ರಿ.ಶ. ೧೨೧೮ರ ವರೆವಿಗೂ ಇದ್ದರೆಂದು ಗೊತ್ತುಮಾಡಲಿಕ್ಕೆ ಬರುವಂತಿದೆ" ಎಂದು ಅಭಿ ಪ್ರಾಯಪಟ್ಟಿದ್ದಾರೆ. *

ಚಿತ್ರದುರ್ಗದ ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ತಮ್ಮ 'ಶ್ರೀ ರೇವಣಸಿದ್ಧೇಶ್ವರರೂ ಅವರ ಸಮಕಾಲೀನರೂ' ಲೇಖನಮಾಲೆಯಲ್ಲಿ ಪಡುವ ಅಭಿಪ್ರಾಯವಿದು. †

"ಕ್ರಿ. ಶ. ೧೧೦೦ರಲ್ಲಿ ಜನ್ಮತಾಳಿ ೨೫ ವರ್ಷಗಳವರೆಗೂ ವಿದ್ಯಾಭ್ಯಾಸ ಪೂರೈಸಿಕೊಂಡು ಅಗಸ್ತ್ಯರೊಡನೆ ಗೋಷ್ಠಿ ನಡೆಸಿ ಜಟ್ಟಂಗಿ ರಾಮನಾಥ ನನ್ನು ದರ್ಶನಮಾಡಿ ಅಲ್ಲಿಂದ ಮುಂದೆ ಪ್ರಯಾಣಮಾಡುತ್ತಾ ಚಿದಂಬರ ದಲ್ಲಿನ ನಟೇಶ್ವರನನ್ನು ಪೂಜೆಮಾಡಿ ಕಂಚಿಗೆ ಹೋಗಿ ಏಕಾಮ್ರನಾಥನ ಗುಡಿ ಯಲ್ಲಿ ಕೆಲವು ಕಾಲ ಸೇವೆ ಮಾಡಿದರು. ಕ್ರಿ.ಶ. ೧೧೨೭ ಅಥವಾ ಆ ಸುಮಾರಿನಲ್ಲಿ ವಿಕ್ರಮಚೋಳನಿಂದ ವಿಷ್ಣುವಿಗ್ರಹಗಳನ್ನು ಪ್ರತಿಷ್ಠಿಸಿ ಆ ರಾಜನಿಗೆ ಶಿವಮಹಾತ್ಮ್ಯವನ್ನು ವಿವರಿಸಿದರು.

ಅಲ್ಲಿಂದ ಉತ್ತರ ದೇಶಕ್ಕೆ ಅಂದರೆ ಕನ್ನಡನಾಡಿನ ಮೈಸೂರಿಗೆ ಬಂದು ಕುಹಕ ರಸತಂತ್ರವಾದಿಗಳಾದ ಯಕ್ಷದಂಪತಿಗಳಿಗೆ ಮೋಕ್ಷಮಾರ್ಗವನ್ನು

---

* ಲಿಂ. ವಿ. ಸಂ. ಸಾಹಿತ್ಯ ಸಮಿತಿ ಪತ್ರಿಕೆ. ಸಂ. ೨, ಸಂಚಿಕೆ ೨, ಪುಟ ೬೧.

† ಶರಣಸಾಹಿತ್ಯ-ಸಂ. ೭. ಸಂಚಿಕೆ ೧೧-೧೨, ಪುಟ ೫೪೪.

ತೋರಿಸಿ ಅವರಲ್ಲಿದ್ದ ರಸಾಯನ ಸಾಮುಗ್ರಿಗಳಿಂದ ಎರಡು ಸುರಗಿಗಳನ್ನು ಮಾಡಿಸಿ ಒಂದನ್ನು ಭೀಮಾನದಿಯ ಮಡುವಿನಲ್ಲಿ ಬಿಟ್ಟು ಇನ್ನೊಂದನ್ನು ಕ್ರಿ. ಶ. ೧೧೩೨ ಸುಮಾರಿನಲ್ಲಿ ಜಯಂತೀ ರಾಜಧಾನಿಯಲ್ಲಿದ್ದ ಮಹಾಮಂಡಲೇಶ್ವರನೂ ಯುವರಾಜನೂ ಆದ ಚಾಳುಕ್ಯ ವಿಕ್ರಮಾರ್ಕ ತ್ರೈಲಪನಿಗೆ ಕರುಣಿಸಿ ಕೊಟ್ಟರು. ಅಲ್ಲಿಂದ ಪ್ರಯಾಣಮಾಡಿ ಚಾಳುಕ್ಯ ರಾಜಧಾನಿಯಾದ ಕಲ್ಯಾಣವನ್ನು ಸೇರಿ ಏಕಾಕ್ಷಿಯಾಗಿದ್ದ ಕಲ್ಲಿಸೆಟ್ಟಿಯ ಕಣ್ಣನ್ನು ಬರಸಿ, ತವನಿಧಿಯನ್ನು ಕೊಟ್ಟು ಮಂಗಳವಾಡಕ್ಕೆ ಬಂದರು' ಅಲ್ಲಿಯ ಬಡವೆಯಾದರೂ ರೂಪು ಗುಣಗಳಲ್ಲಿ ಸಿರಿವಂತೆಯಾದ ಮಾಯಿದೇವಿಗೆ ಧರ್ಮೋಪದೇಶ ಮಾಡಿ ಶಿವಲಿಂಗ ಹೊನ್ನುರಾಸಿಯನ್ನು ಕೊಟ್ಟು ಉಂಕೆಮಲೆಯ ದುರ್ಗಾಧಿಪತಿ ಬಿಬ್ಬಿ ಬಾಚಯ್ಯನೆಂಬ ಮಾಹೇಶ್ವರನ ಇಷ್ಟಪ್ರಕಾರ ಲಿಂಗಾಲುಬಂಡೆಯಲ್ಲಿ ನೂರಾರು ಲಿಂಗ ಪ್ರತಿಷ್ಠೆಮಾಡಿದರು. ಈ ಘಟನೆಗಳು ಕ್ರಿ. ಶ. ೧೧೩೨ರಿಂದ ೧೧೪೦ರ ವಳಗೆ ನಡೆದಿರಬೇಕು.

ಪುನಃ ಮಂಗಳವಾಡವನ್ನು ಪೊಕ್ಕು ಬಿಜ್ಜಳನ ಗರ್ವಭಂಗ ಮಾಡಿ ರಾಜ ಕಟಕಕ್ಕೆ ಉಣಿಸಿ ತಣಿಸಿದನು. ಇದು ಬಿಜ್ಜಳನು ಮಂಡಲೇಶ್ವರನಾದ ಹೊಸದರಲ್ಲಿ ಸುಮಾರು ಕ್ರಿ.ಶ. ೧೧೪೦ರಲ್ಲಿ ನಡೆದಿರಬೇಕು. ಅಲ್ಲಿಂದ ಕೊಲ್ಲಾಪುರಕ್ಕೆ ಬಂದು ಕ್ಷುಲ್ಲ ವಿದ್ಯಾಪರಿಣತನಾದ ಗೋರಕ್ಷನೆಂಬ ಸಿದ್ಧನನ್ನು ರಸವಿದ್ಯೆಯಲ್ಲಿ ಸೋಲಿಸಿ ಧರ್ಮಬೋಧೆ ಮಾಡಿದರು. ತೀರ್ಥಯಾತ್ರೆ ಹೊರಟು ಕಾಶೀ ಮುಂತಾದ ಕ್ಷೇತ್ರಗಳನ್ನು ಸಂದರ್ಶಿಸಿ ಮಂಗಳವಾಡಕ್ಕೆ ಬಂದು ಕುಹಕನಾದ ಉುಂಕೆಮಲೆ ಪೀಠಾಧಿಪತಿ ಕಪ್ಪರನೆಂಬ ಜೋಗಿಯ ಮಾತಿಗೆ ಮರುಳಾಗಿ ಅನೇಕ ಕನ್ಯಾರತ್ನಗಳನ್ನು ಆಹುತಿ ಕೊಡಬೇಕೆಂದಿದ್ದ ಬಿಜ್ಜಳನನ್ನು ಕಂಡು ಮಾತನಾಡಿ, ಕನ್ಯೆಯರನ್ನು ರಕ್ಷಿಸಿ ಕಪ್ಪರನ ಗರ್ವಭಂಗ ಮಾಡಿ, ಬಿಜ್ಜಳನಿಗೆ ಭಯಂಕರವಾಗಿ ಸುರಗಿಯನ್ನು ಮಾಸನೂರು ಮಡುವಿನಿಂದ ತೆಗೆದು ತೋರಿಸಿದನು. ಸಂತುಷ್ಟನಾದ ಬಿಜ್ಜಳನು ಕನ್ಯೆಯರನ್ನು ರಕ್ಷಿಸಿದ ಶ್ರೀ ರೇವಣಸಿದ್ಧರಿಗೆ ಸುಲಕ್ಷಣಾದೇವಿ ಎಂಬ ತನ್ನ ಕುವರಿಯನ್ನು ಕನ್ಯಾದಾನ ಮಾಡಿದನು. ಈ ವಿವಾಹವು ಸುಮಾರು ಕ್ರಿ.ಶ. ೧೧೪೫ರಲ್ಲಿ ನಡೆದಿರಬೇಕು. ಅಲ್ಲಿಂದ ಕಂಚಿಗೆ ಹೋಗಿ ಆಗತಾನೆ ಪಟ್ಟಾಭಿಷಿಕ್ತನಾದ ರಾಜ ರಾಜಚೋಳ ಅಥವ ರಾಜೇಂದ್ರ ಚೋಳನ ಮಗಳಾದ ಸುಂದರನಾಚಿ

ಎಂಬ ಕನ್ಯಾರತ್ನವನ್ನು ಕ್ರಿ.ಶ. ೧೧೪೬ರಲ್ಲಿ ಸ್ವೀಕರಿಸಿ, ಅನಂತರ ದೇಶ ದೇಶದ ರಾಜರನ್ನು ಸಂದರ್ಶಿಸಿ ಸೋಮಲಾಂಬೆ ಎಂಬ ರಾಜಪುತ್ರಿಯನ್ನೂ ಇನ್ನೂ ಅನೇಕ ರಾಜಪುತ್ರಿಯರನ್ನೂ ವಿವಾಹವಾಗಿ ಸುಂದರನಾಚಿಯಲ್ಲಿ ರುದ್ರಮುನಿದೇವನೂ, ಸೋಮಲಾಂಬೆಯಲ್ಲಿ ಕೋಟಿ ಪಲ್ಲಾರಾಧ್ಯನೂ ಜನಿಸಿದರು.

ಎಂಟು ವರ್ಷ ವಯಸ್ಕನಾದ ರುದ್ರಮುನಿಗೆ ಶಿವಗಂಗೆಯಲ್ಲಿ ತಾವೇ ಸೃಷ್ಟಿಸಿದ ಮೇಗಣಗವಿ ಮಠದಲ್ಲಿ ಶಿವದೀಕ್ಷೆಯನ್ನು ಕೊಟ್ಟು, ಉತ್ತರಾಭಿ ಮುಖವಾಗಿ ಪ್ರಯಾಣ ಮಾಡುತ್ತಾ ಹಾವಿನಹಾಳ ಕಲ್ಲಯ್ಯನೆಂಬ ಶಿವಭಕ್ತ ನಿಗೆ ರುದ್ರಮುನಿಯಿಂದ ಶಿವದೀಕ್ಷೆಯನ್ನು ಕೊಡಿಸಿ, ಸೊನ್ನಲಾಪುರಕ್ಕೆ ಹೋಗಿ ಸುಮಾರು ಕ್ರಿ.ಶ. ೧೧೫೫ರಲ್ಲಿ ಚಾಮಲಾದೇವಿ, ಮುದ್ದಗೌಡ, ಸುಗ್ಗವ್ವೆಯರನ್ನು ಕಂಡು ಶಿವಯೋಗಿಯಾಗುವ ಸಿದ್ಧರಾಮನ ಜನನದ ವೃತ್ತಾಂತವನ್ನು ಭವಿಷ್ಯ ನುಡಿದರು.

ಸುಮಾರು ಕ್ರಿ.ಶ. ೧೧೬೫ರಲ್ಲಿ ಕುರುಬ ವಂಶದ ಪದ್ಮಣ್ಣನೊಡನೆ ಕಲ್ಯಾಣವನ್ನು ಪ್ರವೇಶಿಸಿದರು. ಕ್ರಿ.ಶ. ೧೧೮೨ರಲ್ಲಿ ವೀರರಾಜೇಂದ್ರ ಅಥವ ಮುಮ್ಮಡಿ ಕುಲೋತ್ತುಂಗನಿಗೆ ಬ್ರಹ್ಮಹತ್ಯಾ ದೋಷದಿಂದುಂಟಾಗಿದ್ದ ನಡುಕ ವನ್ನು ನಿಲ್ಲಿಸಿ ಪಂಪ ಹರೇಶ್ವರನನ್ನು ಪ್ರತಿಷ್ಠೆ ಮಾಡಿಸಿದರು. ಆ ರಾಜನ ಮಾಂಡಲಿಕನಾದ ನೀಲಚಕ್ರವರ್ತಿಗೆ ಶೈವೋಪದೇಶ ಮಾಡಿದರು. ಚಿನ್ಮೂಲ ಗಿರಿಯ ಸಿದ್ಧರ ಗವಿಯಲ್ಲಿ ಕೆಲವು ದಿವಸ ವಾಸವಾಗಿದ್ದು, ಅಲ್ಲಿಗೆ ಬಂದ ಶ್ರೀ ಮರುಳಸಿದ್ಧರಿಗೆ ಉಪದೇಶ ಮಾಡಿದರು. ಕ್ರಿ.ಶ. ೧೧೮೭ರಲ್ಲಿ ಸಿರಿವೊಳಲ ದಾನವನ್ನು ಪಡೆದರು. ಕೆಲವು ವರ್ಷಗಳು ಶಿವಧ್ಯಾನದಲ್ಲಿ ಕಾಲವನ್ನು ಕಳೆಯುತ್ತಾ ಕ್ರಿ.ಶ. ೧೨೦೦ಕ್ಕೆ ಮುಂಚೆ ಲಿಂಗೈಕ್ಯರಾದರು.''

ಗುಲ್ಬರ್ಗದ ಶ್ರೀ ಕಪಟರಾಳ ಕೃಷ್ಣರಾಯರು ತಮ್ಮ ಅಭಿಪ್ರಾಯವನ್ನು ಹೀಗೆ ಸೂಚಿಸುತ್ತಾರೆ * :—

''.......ರೇವಣಸಿದ್ಧನು ಪ್ರಸಿದ್ಧ ಕಾಲಚೂರ್ಯ ಚಕ್ರವರ್ತಿಯಾದ ಬಿಜ್ಜಳನಿಗಿಂತ ನೂರು ವರ್ಷಗಳ ಹಿಂದಿನವನೆಂದೂ ಸುಮಾರು ಕ್ರಿ.ಶ.

* ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ. ೨೭. ಸಂಚಿಕೆ ೨.

ಹನ್ನೊಂದನೆಯ ಶತಮಾನದ ಮಧ್ಯದ ಕಾಲದವನೆಂದೂ ಹೇಳಬಹುದಾಗಿದೆ.”

ಶ್ರೀ ವಿ. ಬಿ. ಹಾಲಭಾವಿಯವರು* “ರೇವಣಸಿದ್ಧನು ೧೦೨೫-೧೧೫೦ ರಲ್ಲಿ ಇದ್ದನೆಂದು ಹೇಳಬಹುದು” ಎಂದು ಅಭಿಪ್ರಾಯಪಟ್ಟಿದ್ದಾರೆ. ಡಾ. ನಂದೀಮಠರವರೂ+ ಇದೇ ಕಾಲವನ್ನು ಸೂಚಿಸುತ್ತಾರೆ.

ನಿಡುಮಾಮಿಡಿ ಸಂಸ್ಥಾನದ ಜಗದ್ಗುರುಗಳಾದ ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರಸ್ವಾಮಿಗಳು x “ಸಿದ್ಧರಾಮಯೋಗಿಯ ಜನನಕ್ಕೆ ಮೊದಲೆ ರೇವಣಸಿದ್ಧನು ತನ್ನ ಭೌತಿಕಲೀಲೆಗಳನ್ನು ಮುಗಿಸಿದ್ದರಿಂದ ಸುಮಾರು ಕ್ರಿ.ಶ. ೧೧೦೦-೧೧೧೦ ಆತನ ಅಂತ್ಯಕಾಲವೆಂದು ಊಹಿಸಬಹುದಾಗಿದೆ” ಎಂದು ಹೇಳಿದ್ದಾರೆ.

ಈಯೆಲ್ಲ ವಿದ್ವಾಂಸರ ಅಭಿಮತದಂತೆ ರೇವಣನ ಕಾಲ ೧೧ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ತೂಗಾಡುತ್ತಿದೆ. ಇವರು ೧೨ನೆಯ ಶತಮಾನಕ್ಕೆ ಸೇರಿದವರೆನ್ನಲಿಕ್ಕೆ ಪ್ರಬಲ ಪ್ರಮಾಣಗಳು ದೊರೆತಿರುವುದರಿಂದ ಆ ಕಾಲವನ್ನು ಈಗ ಒಪ್ಪಿಕೊಳ್ಳಬಹುದು. ಮರುಳಸಿದ್ಧ ರೇವಣನ ಕಿರಿಯ ಸಮಕಾಲೀನನೆಂದು ಸ್ವತಸ್ಸಿದ್ಧವಾಗುತ್ತದೆ.

## ಸ್ಥಳ ನಿರ್ದೇಶ

ಕಾಲನಿರ್ಣಯದಷ್ಟೇ ಕ್ಲಿಷ್ಟವಾಗಿರುವ ಇನ್ನೊಂದು ಸಮಸ್ಯೆ ಮರುಳಸಿದ್ಧನ ಜೀವನಕ್ಕೆ ಸಂಬಂಧಿಸಿದ ಸ್ಥಳಗಳ ನಿರ್ದೇಶ. ಒಂದೇ ಹೆಸರಿನ ಹಲವು ಊರುಗಳು ಕರ್ನಾಟಕದಲ್ಲಿವೆ. ಮರುಳಸಿದ್ಧನ ಕಾವ್ಯದಲ್ಲಿ ದೇವಕವಿ ನಿರ್ದೇಶಿಸುವ ಸ್ಥಳಗಳನ್ನೂ ಸ್ಥಳ ಐತಿಹ್ಯವನ್ನೂ ಲಕ್ಷ್ಯದಲ್ಲಿಟ್ಟುಕೊಂಡು ನಿರ್ದೇಶಿಸಬೇಕಾಗುತ್ತದೆ.

ಶ್ರೀ ಮಲ್ಲಿಕಾರ್ಜುನ ದೇಶಿಕರು ಮರುಳಸಿದ್ಧನ ಜನ್ಮಭೂಮಿ ಉದಯಪುರವೆಂದು ಹೇಳುತ್ತಾ ಹೀಗೆ ಅಭಿಪ್ರಾಯಪಡುತ್ತಾರೆ.

---

* J.O.L.L.E. Association, Dharwar. Vol 2. No 1,
\+ Handbook of Virasaivism–P. 15
x ಲಿಂ. ವಿ. ಸಂ. ಸಾಹಿತ್ಯಸಮಿತಿಯ ಪತ್ರಿಕೆ - ಸಂಪುಟ ೨ - ಸಂಚಿಕೆ ೩.

" ಶ್ರೀ ಮರುಳಸಿದ್ಧನ ಜನ್ಮಭೂಮಿ ಉದಯಪುರ. (ಅಂದರೆ ಧಾರವಾಡ ಜಿಲ್ಲೆಯ ಹಾನಗಲ್ಲತಾಲ್ಲೂಕ ಪೈಕಿ ಅಕ್ಕಿ ಆಲೂರ ಹತ್ತಿರ ಮೂಡೂರು) ...............ಕಗ್ಗಲ್ಲಗೌಡನಿಗೆ ಮಗುವಾಗಿ ಸಿಕ್ಕಿದನೆಂದು ಗುರುರಾಜ ಚರಿತ್ರೆಯಲ್ಲಿ ಹೇಳಿದೆ. ಆದರೆ ಕಗ್ಗಲ್ಲವೆಂಬುದು ಗ್ರಾಮದ ಹೆಸರೇ ವಿನಾ ಕಗ್ಗಲ್ಲವೆಂಬುದು ಸಾದರಲ್ಲಿಯ ಬೆಡಗಲ್ಲ. ಬೆಡಗಿದ್ದರೂ ಇದ್ದುಕೊಳ್ಳಲಿ, ಮರುಳಸಿದ್ಧರ ಪುರಾಣದಲ್ಲಿ ಕಗ್ಗಲ್ಲಪುರಗೌಡನೆಂದು ಹೇಳಿದೆ. ಕಗ್ಗಲ್ಲವೆಂದರೆ ಕತ್ತಲೆ ಎಂಬ ಅರ್ಥವು. ಮರುಳಸಿದ್ಧರು ಆ ಊರಲ್ಲಿ ಹುಟ್ಟಿ ಪ್ರಸಿದ್ಧಿಗೆ ಬಂದನಂತರ ಅವರಿಂದ ಊರಿಗೆ ಒಂದು ಬೆಳಕು ಉದಯವಾದ್ದರಿಂದಲೇ ಕಗ್ಗಲ್ಲಪುರಕ್ಕೆ ಉದಯಪುರವೆಂದು ಬಂದಿರಬೇಕು. ಸಂಸ್ಕೃತದ ಉದಯಪುರವು ಇಂದು ಕನ್ನಡದಲ್ಲಿ ಮೂಡೂರಾಗಿದೆ. ಈ ಮೂಡೂರು ಗ್ರಾಮದಲ್ಲಿ ಮರುಳಸಿದ್ಧರ ಹೆಸರಿನ ದೇವಾಲಯವಿದೆ. ಇದು ಅಕ್ಕಿ ಆಲೂರ ಸಮಾಪವಿದ್ದು ಪೂರ್ವದಲ್ಲಿ ವಟಕ್ಷೇತ್ರ (ಅಂದರೆ ಆಲೂರಿಗೆ) ಸೇರಿರಬೇಕು. ಆದ್ದರಿಂದ ಮರುಳುಸಿದ್ಧರ ಮೂಲ ಮಠವು ವಟಕ್ಷೇತ್ರವೆಂದು ಮಠಸ್ಥಲ ಗ್ರಂಥಗಳಲ್ಲಿ ಹೇಳುತ್ತದೆ." *

ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು "ಮರುಳಸಿದ್ಧರ ಜನ್ಮಸ್ಥಳವು ಹಾನಗಲ್ಲು ತಾಲ್ಲೂಕಿನಲ್ಲಿರುವ ಮೂಡೂರು ಅಥವಾ ಉದಯಪುರ ಎಂದೂ ಆ ಗ್ರಾಮದಲ್ಲಿ ಮರುಳಸಿದ್ಧರ ದೇವಾಲಯವಿದೆಯೆಂದೂ ತಿಳಿದು ಬರುತ್ತದೆ" ಎಂದು ಅಭಿಪ್ರಾಯಪಡುತ್ತಾರೆ. †

ಶ್ರೀ ಟಿ ಎಚ್. ಎಂ. ಸದಾಶಿವಯ್ಯನವರ ಅಭಿಪ್ರಾಯವಿದು :— "ಜನನವು ಉದಯಪುರ (ಅಂದರೆ ಅಕ್ಕಿ ಆಲೂರು ಹತ್ತಿರವಿರುವ ಮೂಡೂರು (?) ಬಾಲ್ಯಾವಸ್ಥೆಯು ಕಗ್ಗಲ್ಲು. ಇಲ್ಲಿ ಮರುಳಸಿದ್ಧರ ಹೆಸರಿನ ದೇವಾಲಯವಿದೆ. ಬಾಲ್ಯಾವಸ್ಥೆಯಲ್ಲಿ ಮಾಡಿರುವ ಪವಾಡಗಳು ದಾವಣಗೆರೆ ಪ್ರಾಂತದ ಬಾತಿಗುಡ್ಡ, ಬೇತೂರು, ಆನೆಗೋಡು, ಬನ್ನಿಗೋಡು ವಗೈರೆ. ಹಳೇಬೀಡು, ಓರಂಗಲ್ಲು, ಕಲ್ಯಾಣ ಮುಂತಾದ ಆಗಿನ ಕಾಲದ ರಾಜಧಾನಿ

---

* ಶ್ರೀ ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯ, ಪುಟ ೩, ೭.

† ಶ್ರೀ ರೇವಣಸಿದ್ಧೇಶ್ವರರೂ ಅವರ ಸಮಕಾಲೀನರೂ—
ಶರಣಸಾಹಿತ್ಯ ಸಂ. ೭, ಸಂಚಿಕೆ ೧೧-೧೨, ಪುಟ ೫೪೭.

ಗಳಲ್ಲಿ ಸಂಚಾರ. ಸಿದ್ಧಗಿರಿಯಲ್ಲಿ ರೇವಣಸಿದ್ಧನಿಂದ ಉಪದೇಶ, ಕೊಲ್ಲಾಪುರದ ಮಾಯಿಯ ಜಯಿಸಿದ್ದು. ಸೊಲ್ಲಾಪುರದಲ್ಲಿ ಸಿದ್ಧರಾಮನ ದರ್ಶನ. ಮೊಗಲಾಯಿ ಪ್ರಾಂತದ ಮುದನೂರಿನಲ್ಲಿದ್ದ ಏಕೋರಾಮನಿಗೆ ಅನುಗ್ರಹ ಮಾಡಿದ್ದು. ಕೊನೆಗೆ ಉಜ್ಜನಿಯಲ್ಲಿ ಅವತಾರವನ್ನು ಸಮಾಪ್ತಗೊಳಿಸಿದ್ದು."*

ಶ್ರೀ ಜೀರಿಗೆ ಕಟ್ಟಿಬಸಪ್ಪನವರು** ಸಂಗ್ರಹಿಸಿರುವ ಮರುಳಸಿದ್ಧನ ಕೆಲವು ಪುಣ್ಯಕ್ಷೇತ್ರಗಳ ಟಿಪ್ಪಣಿಯಿಂದ ಈ ಬಗ್ಗೆ ಬೆಳಕು ದೊರೆಯುತ್ತದೆ:—

I **ತೆಲುಗುಬಾಳು**: ಇದು ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿಗೆ ಸೇರಿದೆ. ಹಾಳೂರಿನ ಅವಶೇಷಗಳು ಈಗಲೂ ಕಾಣುತ್ತವೆ. ಮರಳುಸಿದ್ಧನ ಕಾರುಣ್ಯವನ್ನು ಗಳಿಸಿ ಅವನ ಉತ್ತರಾಧಿಕಾರಿಯಾದ 'ತರಳಬಾಳು' ಸಂತತಿಯ ಮೂಲಪುರುಷನಾದ ಸಿದ್ಧನು ಈ ಗ್ರಾಮದವನೆಂದು ಐತಿಹ್ಯವಿದೆ. ಈ ಗ್ರಾಮಕ್ಕೆ ಈಗಲೂ ತರಳಬಾಳು ವಂಶದವರೇ ಪಟೇಲರಾಗಿರುತ್ತಾರೆ.

II **ಉಜ್ಜಯಿನಿ**: ಬಳ್ಳಾರಿ ಜಿಲ್ಲೆಯ ಕೂಡ್ಲಿ ತಾಲ್ಲೂಕಿನಲ್ಲಿ ತೆಲುಗುಬಾಳಿಗೆ ಸುಮಾರು ೩೦ ಮೈಲಿ ದೂರದಲ್ಲಿದೆ. ಈ ಊರಿಗೆ ಮೊದಲು **ಕೇತನಹಳ್ಳಿ** ಎಂಬ ಹೆಸರಿತ್ತೆಂದೂ ಮರುಳಸಿದ್ಧನ ಅವತಾರವಾದ ಮೇಲೆ ಉಜ್ಜಯಿನಿ (ಉಜ್ಜನಿ) ಎಂಬ ಹೆಸರು ಬಂದಿತೆಂದೂ ಐತಿಹ್ಯವಿದೆ. 'ಕೇತನಹಳ್ಳಿ ಚರುವು' ಎಂಬ ಹೆಸರಿನ ಸ್ಥಳವು ಈ ಊರಿನ ಪಕ್ಕದಲ್ಲಿರುತ್ತದೆ. ಈ ಊರಿನಲ್ಲಿ ಮರುಳಸಿದ್ಧನಿಗೆ ಸಂಬಂಧಪಟ್ಟ ಅನೇಕ ಸ್ಮಾರಕಗಳು ಇರುತ್ತವೆ.

i] **ಮರುಳಸಿದ್ಧನ ದೇವಸ್ಥಾನ**: ದೇವಸ್ಥಾನವು ಉಜ್ಜಯನಿಯಲ್ಲಿರುವ ಮರುಳಸಿದ್ಧನ ಸಂಬಂಧವಾದ ಸ್ಮಾರಕಗಳಲ್ಲಿ ಅತ್ಯಂತ ಮಹತ್ವದ ಸ್ಮಾರಕವಾಗಿದೆ. ಈ ದೇವಸ್ಥಾನವನ್ನು ಮರುಳಸಿದ್ಧನೇ ಜಕಣಾಚಾರ್ಯನ†

---

* ನನಗೆ ಕಳುಹಿಸಿಕೊಟ್ಟಿರುವ ಟಿಪ್ಪಣಿಯಿಂದ ಉದ್ಧೃತ.

** ಶ್ರೀ ಜೀರಿಗೆ. ಕ. ಬಸಪ್ಪನವರು ಮರುಳಸಿದ್ಧನಿಗೆ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಪ್ರವಾಸಮಾಡಿ ಅಲ್ಲಿನ ಐತಿಹ್ಯಗಳನ್ನು ಸಂಗ್ರಹಿಸಿದ್ದಾರೆ. ಇವುಗಳನ್ನು ಅವರ ಅಪ್ರಕಟಿತ 'ಮರುಳಸಿದ್ಧನ ಪುಣ್ಯಕ್ಷೇತ್ರಗಳು' ಎಂಬ ಲೇಖನಮಾಲೆಯಿಂದ ಸಂಗ್ರಹಿಸಲಾಗಿದೆ.

† ಜಕಣಾಚಾರ್ಯ ಐತಿಹಾಸಿಕ ವ್ಯಕ್ತಿಯಲ್ಲ—ಸಂ.

ಕೈಯಿಂದ ಕಟ್ಟಿಸಿ ಅಲ್ಲಿಯೇ ಸಮಾಧಿಸ್ಥನಾದನೆಂದು ಐತಿಹ್ಯವುಂಟು. ಈ ದೇವಾಲಯವು ಸುಂದರ ಶಿಲ್ಪಕಲೆಯಿಂದ ಕೂಡಿದುದಾಗಿದೆ. ಹೊರಗಡೆ ಗರ್ಭಗುಡಿಯ ಮೇಲಣ ಶಿಖರವೂ, ಒಳಗಡೆ ಗರ್ಭಗುಡಿಯ ಮುಂದಣ ನವರಂಗದ ಎಡಬಲಗಳ ಗೂಡುಗಳಲ್ಲಿ ಸ್ಥಾಪಿಸಲ್ಪಟ್ಟಿರುವ ವಿಗ್ರಹಗಳೂ, ನವರಂಗದ ಮಧ್ಯದ ಕಂಬಗಳೂ ಮತ್ತು ಗರ್ಭಗುಡಿಯ ಮುಂಭಾಗದ ಅಂಕಣದಲ್ಲಿ ಕಡೆದಿರುವ ಕಮಲವೂ ಮನಮೋಹಕಗಳಾದ ಶಿಲ್ಪಕಲಾ ಕೃತಿಗಳಾಗಿವೆ. ಈ ವಿವಿಧ ವಿಗ್ರಹಗಳು ೬೩ ಪುರಾತನರ ವಿಗ್ರಹಗಳಾಗಿರುತ್ತವೆಂದು ಐತಿಹ್ಯವುಂಟು. ನವರಂಗದ ಎಡಬಲಗಳ ಗೋಡೆಯ ೧೪ ಗೂಡುಗಳಲ್ಲಿ ೧೪ ವಿಗ್ರಹಗಳು ಈಗ ಇರುತ್ತವೆ. ನವರಂಗದ ಉತ್ತರ ಭಾಗದ ಗೋಡೆಯಿಂದ ಮುಂದಕ್ಕೆ ಮತ್ತೊಂದು ನವರಂಗವು ಕಟ್ಟಲ್ಪಟ್ಟಿರುತ್ತದೆ. ಇದು ಹೊಸದಾಗಿ ಕಟ್ಟಲ್ಪಟ್ಟದ್ದಾಗಿದೆಯೆಂದು ಕಟ್ಟಡದ ಕೆಲಸದಿಂದಲೇ ಗೊತ್ತಾಗುತ್ತದೆ. ಎರಡನೆಯ ನವರಂಗದಲ್ಲಿ ಮೊದಲನೆಯ ನವರಂಗದಲ್ಲಿದ್ದಂತೆ ವಿಗ್ರಹಗಳು ಇರುವುದಿಲ್ಲ. ಹಲವಾರು ಲಿಂಗಗಳೂ ಮತ್ತು ಬಸವಣ್ಣಗಳೂ ಇರುತ್ತವೆ. ಆದರೆ ಈ ಎರಡನೆಯ ನವರಂಗದ ದಕ್ಷಿಣಭಾಗದಲ್ಲಿ ಎಂದರೆ ಮೊದಲನೆಯ ನವರಂಗದ ಉತ್ತರ ಬಾಗಿಲಿನ ಎಡಬಲಗಳಲ್ಲಿ ಎರಡು ವಿಗ್ರಹಗಳಿರುತ್ತವೆ. ಎಡಭಾಗದ ವಿಗ್ರಹವು ಉದ್ಧಾನ ವೀರಭದ್ರನ ವಿಗ್ರಹವಾಗಿದ್ದು ಬಲಗಡೆಯ ವಿಗ್ರಹವು ಕತ್ತಿಯನ್ನು ಹಿಡಿದಿರುವ ಒಂದು ಹೆಣ್ಣು ವಿಗ್ರಹವಾಗಿದೆ. ಈ ಹೆಣ್ಣು ವಿಗ್ರಹವನ್ನು ಚೌಡಾಂಬೆ ಎಂದು ಕರೆಯುತ್ತಾರೆ. ಈ ವಿಗ್ರಹವು ದಕ್ಷಿಣ ಗೋಡೆಯಲ್ಲಿ ಹೊಸದಾಗಿ ಮಾಡಲ್ಪಟ್ಟ ಗೂಡಿನಲ್ಲಿ ನಿಲ್ಲಿಸಲ್ಪಟ್ಟಂತೆ ಕಾಣುತ್ತದೆ. ವೀರಭದ್ರನ ವಿಗ್ರಹಕ್ಕೆ ಯಾವ ಗೂಡೂ ಇರುವುದಿಲ್ಲ.... ಮೊದಲನೆಯ ನವರಂಗದ ಪಶ್ಚಿಮ ಬಾಗಿಲ ಮುಂಭಾಗದಲ್ಲಿ ಎರಡು ಜಗುಲಿಗಳ ಮೇಲೆ ಒಂದು ಕಡೆ ಒಂದು ಶಿಲಾಲಿಪಿಯೂ ಮತ್ತೊಂದು ಕಡೆ ಕತ್ತಿಯನ್ನು ಹಿಡಿದಿರುವ ಒಂದು ಗಂಡು ವಿಗ್ರಹವೂ ಇವೆ. ಈ ಗಂಡು ವಿಗ್ರಹವು ಮರುಳಸಿದ್ಧನ ಸಾಕುತಂದೆಯಾದ ಕಗ್ಗಲ್ಲಗೌಡನೆಂದು ಊರಿನವರು ಹೇಳುತ್ತಾರೆ. ಕ್ಷೇತ್ರಪಾಲಕನೆಂದು ದೇವಸ್ಥಾನದವರು ಹೇಳುತ್ತಾರೆ. ಮರುಳಸಿದ್ಧನು ಬಾಲಕನಾಗಿದ್ದಾಗ ಅವನು ಮನೆಯ ಹೊರಗಡೆ ಹೋಗದಂತೆ ಅವನನ್ನು ತಡೆಯುವುದಕ್ಕಾಗಿ ಕಗ್ಗಲ್ಲಗೌಡನು ಮನೆಯ ಹೊರಗಡೆ ಖಡ್ಗಧಾರಿ

ಯಾಗಿ ನಿಂತು ಕಾಯ್ದನೆಂದೂ ಅದರ ಸ್ಮಾರಕವಾಗಿಯೇ ಈ ವಿಗ್ರಹವು ದೇವ ಸ್ಥಾನದಲ್ಲಿ ಸ್ಥಾಪಿಸಲ್ಪಟ್ಟಿರುವುದೆಂದೂ ಜನರು ಹೇಳುತ್ತಾರೆ. ಈ ಐತಿಹ್ಯ ಕ್ಕನುಗುಣವಾಗಿ ಇಂದಿಗೂ ಮರುಳಸಿದ್ಧನ ಉತ್ಸವ ವಿಗ್ರಹವನ್ನು ಈ ಬಾಗಿ ಲಲ್ಲಿ ತರಲಾಗುವುದಿಲ್ಲ. ಮರುಳಸಿದ್ಧ ಲಿಂಗವು ಉದ್ಭವ ಲಿಂಗವಾಗಿರುತ್ತದೆ. ಈ ಲಿಂಗದ ಶಿಲೆಯೂ ಮತ್ತು ಇದರ ಪಾಣಿಪೀಠದ ಶಿಲೆಯೂ ಬೇರೆ ಬೇರೆ ಯಾದವುಗಳಾಗಿವೆ. ಈ ಲಿಂಗದ ಹಿಂಭಾಗವು ಪೂರ್ವಕಡೆಗೆ ಸ್ವಲ್ಪ ತಗ್ಗಾ ಗಿದೆ. ಒಂಭತ್ತು ಪಾದಗಳ ಅಳತೆಯ ಭೂಮಿಯನ್ನು ಕೊಡೆಂದು ಮರುಳ ಸಿದ್ಧನು ಕಗ್ಗಲ್ಲಗೌಡನನ್ನು (ಬಾಚಣಗೌಡನನ್ನು) ಕೇಳಿದನೆಂದೂ, ಗೌಡನು ಅವಕ್ಕೆ ಒಪ್ಪಿಕೊಳ್ಳಲು ಮರುಳಸಿದ್ಧನು ತನ್ನ ಪಾದಗಳಿಂದ ಒಂಭತ್ತು ಪಾದ ಗಳ ಅಳತೆಯನ್ನು ಮಾಡಿ ಅತ್ಯಂತ ವಿಸ್ತಾರವಾದ ಭೂಮಿಯನ್ನು ಆಕ್ರಮಿ ಸಿದನೆಂದೂ, ಇದನ್ನು ಕಂಡು ಗೌಡನು ಕುಪಿತನಾಗಿ ತನ್ನ ವಾಗ್ದಾನವನ್ನು ಉಲ್ಲಂಘಿಸಿ, ಆ ಭೂಮಿಯನ್ನು ಉತ್ತನೆಂದೂ, ಉತ್ತಾಗ ನೇಗಿಲಗುಳವು ಲಿಂಗಕ್ಕೆ ತಾಕಿತೆಂದೂ, ಆದ್ದರಿಂದಲೇ ಈಗಲೂ ಲಿಂಗದ ಹಿಂಭಾಗವು ತಗ್ಗಾ ಗಿರುವುದೆಂದೂ ಜನರು ಐತಿಹ್ಯ ಹೇಳುತ್ತಾರೆ. ಈ ಭೂಮಿಯ ವಿಚಾರದಲ್ಲಿ ಕುಪಿತನಾದ ಗೌಡನು ಮರುಳಸಿದ್ಧನನ್ನು ಕತ್ತಿಯಿಂದ ಹೊಡೆಯುವುದಕ್ಕೆ ಹೋದನೆಂದೂ, ಇದರ ಸ್ಮಾರಕವಾಗಿಯೇ ದೇವಸ್ಥಾನದಲ್ಲಿ ಕತ್ತಿಯನ್ನು ಹಿಡಿದಿರುವ ಕಗ್ಗಲ್ಲಗೌಡನ ವಿಗ್ರಹವು ನಿರ್ಮಿಸಲ್ಪಟ್ಟಿತೆಂದೂ ಸಹ ಜನರು ಐತಿಹ್ಯ ಹೇಳುವುದುಂಟು. ಅಲ್ಲದೆ ಭೂಮಿಯ ವಿಚಾರದಲ್ಲಿ ಕಗ್ಗಲ್ಲಗೌಡನು ತನಗೆ ಅಪಚಾರ ಮಾಡಿದ್ದರಿಂದ ಕಗ್ಗಲ್ಲವರ ವಂಶವು ಈ ಒಂಭತ್ತು ಪಾದಗಳ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯದಿರಲೆಂದು ಮರುಳಸಿದ್ಧನು ಶಾಪಕೊಟ್ಟ ನೆಂದೂ ಈಗಲೂ ಈ ಪ್ರದೇಶದಲ್ಲಿ ಕಗ್ಗಲ್ಲವರ ವಂಶವು ಹೆಚ್ಚಾಗಿ ಬೆಳೆಯುವು ದಿಲ್ಲವೆಂದೂ ಸಹ ಜನರು ಒಂದು ನಂಬುಗೆಯನ್ನು ನುಡಿಯುತ್ತಾರೆ. ದೇವ ಸ್ಥಾನದ ಎರಡನೆಯ ನವರಂಗದ ಮುಂದಕ್ಕೆ ಪೂರ್ವಭಾಗದಲ್ಲಿ ಪಶ್ಚಿಮ ಮುಖವಾಗಿ ಎತ್ತರವಾದ ಮತ್ತು ಸುಂದರವಾದ ಬಸವಣ್ಣ ಇದೆ. ಅಲ್ಲಿಂದ ಮುಂದೆ ಎತ್ತರವಾದ ಎರಡು ದೀಪಮಾಲೆ ಕಂಬಗಳು ಇವೆ. ಈ ಕಂಬಗಳ ಮಧ್ಯೆ ಒಂದು ಜಗುಲಿ ಇದೆ. ಈ ಜಗುಲಿಯನ್ನು ಬ್ರಹ್ಮದೇವರೆಂದೂ, ಮರುಳಸಿದ್ಧನ ಆಪ್ತಶಿಷ್ಯರಾಗಿ ಕೆಲಸಮಾಡಿದ ಜಟ್ಟಿಗ, ಬೈರ, ಬ್ರಹ್ಮ ಮತ್ತು

ಹನುಮ ಇವರುಗಳಲ್ಲಿ ಬ್ರಹ್ಮನ ಸ್ಮಾರಕವಾಗಿ ಈ ಜಗುಲಿಯು ನಿರ್ಮಿಸ ಲ್ಪಟ್ಟಿದೆಯೆಂದೂ ಜನರು ಐತಿಹ್ಯ ಹೇಳುತ್ತಾರೆ. ಈ ಎರಡು ದೀಪಮಾಲೆ, ಕಂಬಗಳು ಮತ್ತು ಜಗುಲಿ ಇವುಗಳ ಮಧ್ಯೆ ದೇವಸ್ಥಾನದ ಮಹಾದ್ವಾರ ಏದೆ. ಈ ಮಹಾದ್ವಾರದ ಮುಂದೆ ಹೊರಗಡೆ ಒಂದು ಓಕುಳಿಯ ಗುಂಡಿಯೂ ಇದರ ಮುಂದೆ ಎತ್ತರವಾದ ಉಯ್ಯಾಲೆ ಕಂಬಗಳೂ ಇವೆ. ದೇವಸ್ಥಾನದ ಸುತ್ತ ಕಲ್ಲುಗಳಿಂದ ಕಟ್ಟಿದ ವಿಸ್ತಾರವಾದ ಪೌಳಿ ಇದೆ. ಈ ಪೌಳಿಯ ಒಳ ಗಡೆ ಮರುಳಸಿದ್ಧನ ದೇವಸ್ಥಾನದ ಎಡಭಾಗಕ್ಕೆ ಎಂದರೆ ಪಶ್ಚಿಮ ದಿಕ್ಕಿನಲ್ಲಿ ಅಮ್ಮನವರ ಗುಡಿಯೂ ಮತ್ತು ಮರುಳಸಿದ್ಧನು ಸ್ಥಾಪಿಸಿದ ಉಜ್ಜಯಿನಿಯ ಮಠವೂ ಇವೆ. ಪೂರ್ವಕಡೆಯ ಪೌಳಿಯು ಒಂದು ಕಲ್ಲಿನ ಮೇಲೆ ಎರಡನೆಯ ನವರಂಗದ ಉದ್ದಾನ ವೀರಭದ್ರನ ಬಲಭಾಗಕ್ಕೆ ಪಶ್ಚಿಮಮುಖವಾಗಿ ದಕ್ಷ ಬ್ರಹ್ಮನ ತಲೆಯ ಚಿತ್ರವು ಕೆತ್ತಲ್ಪಟ್ಟಿದೆ.

**ii] ಉಜ್ಜಯಿನಿಯಲ್ಲಿರುವ ಇತರ ಸ್ಮಾರಕೆಗಳು**

೧. **ಜಟ್ಟಿಗೇಶ್ವರ ದೇವಸ್ಥಾನ:** ಈ ದೇವಸ್ಥಾನವು ಮರುಳಸಿದ್ಧನ ದೇವಸ್ಥಾನದ ಹಿಂದಕ್ಕೆ ಎಂದರೆ ದಕ್ಷಿಣ ದಿಕ್ಕಿನಲ್ಲಿ ಉತ್ತರಮುಖವಾಗಿದೆ. ಇದರಲ್ಲಿ ೯ ಚಪ್ಪಟೆಯಾದ ಶಿಲೆಗಳು ಸಾಲಾಗಿ ನೆಡಲ್ಪಟ್ಟಿವೆ. ಪೂಜೆ ಸಲ್ಲು ವುದು ಇವುಗಳಿಗೇ. ಇವುಗಳ ಪೂಜೆಯನ್ನು ತಳವಾರರು ಮಾಡುತ್ತಾರೆ. ಮರುಳಸಿದ್ಧನ ದೇವಸ್ಥಾನಕ್ಕೆ ಪೂಜೆಗಾಗಿ ಹೋಗುವ ಭಕ್ತರು ಮೊದಲು ಜಟ್ಟಿಗೇಶ್ವರನ ದೇವಸ್ಥಾನಕ್ಕೆ ಹೋಗಿ ಪೂಜೆಮಾಡಿ ಆಮೇಲೆ ಮರುಳಸಿದ್ಧನ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡುತ್ತಾರೆ. ತನ್ನ ಪರಮಶಿಷ್ಯನಾದ ಜಟ್ಟಿಗ ನಿಗೆ ಮೊದಲನೆಯ ಪೂಜೆ ಸಲ್ಲಲೆಂದು ಮರುಳಸಿದ್ಧನು ವರವನ್ನು ಕೊಟ್ಟುದೇ ಈ ಆಚರಣೆಗೆ ಕಾರಣವೆಂದು ಐತಿಹ್ಯವಿದೆ.

೨. **ಹನುಮಂತನ ದೇವಸ್ಥಾನ:** ಈ ದೇವಸ್ಥಾನವು ಜಟ್ಟಿಗೇಶ್ವರನ ದೇವಸ್ಥಾನಕ್ಕೆ ಪಶ್ಚಿಮದಲ್ಲಿ ಉತ್ತರಮುಖವಾಗಿದೆ. ಹನುಮಂತನ ಮುಖವು ಪೂರ್ವಕ್ಕಿದೆ. ಹನುಮನು ಮರುಳಸಿದ್ಧನ ಆಪ್ತಶಿಷ್ಯರಲ್ಲಿ ಒಬ್ಬನಾಗಿದ್ದು ಅವನ ಸ್ಮಾರಕವಾಗಿಯೇ ಈ ದೇವಸ್ಥಾನವು ಕಟ್ಟಲ್ಪಟ್ಟಿದೆ.

೩. **ಗದ್ದುಗೆಯ ರಾಮಿತಂದೆಯ ದೇವಸ್ಥಾನ:** ಈ ದೇವಸ್ಥಾನವು ಮರುಳಸಿದ್ಧನ ದೇವಸ್ಥಾನದ ಬಲಭಾಗದಲ್ಲಿ ಸ್ವಲ್ಪ ಹಿಂದಕ್ಕೆ ಪೂರ್ವಮುಖ

ವಾಗಿದೆ. ಈ ದೇವಸ್ಥಾನವನ್ನು ರಾಮಲಿಂಗನ ಗುಡಿಯೆಂದೂ ಕರೆಯುವು ದುಂಟು. ಈ ದೇವಸ್ಥಾನದಲ್ಲಿ ಒಂದು ಲಿಂಗವೂ, ಒಡೆದುಹೋದ ಕೆಲವು ಶಾಸನಗಳೂ ಇವೆ. ಗದ್ದುಗೆಯ ರಾಮಿತಂದೆಯು ಮರುಳಸಿದ್ಧನಿಗೆ ಗದ್ದುಗೆ ಯನ್ನು ಹಾಸುವ ಕಾಯಕವನ್ನು ಮಾಡುತ್ತಿದ್ದನೆಂದೂ, ಇವನ ಸ್ಮಾರಕವಾಗಿ ಈ ದೇವಸ್ಥಾನವು ನಿರ್ಮಿಸಲ್ಪಟ್ಟಿತೆಂದೂ ಐತಿಹ್ಯ.

೪. **ಬ್ರಹ್ಮದೇವರ ಗುಡಿ :** ಈ ಗುಡಿಯು ಮರುಳಸಿದ್ಧನ ದೇವಸ್ಥಾನದ ಪೌಳಿಯ ಹೊರಗಡೆ ಪೂರ್ವದಿಕ್ಕಿನಲ್ಲಿ ಪಶ್ಚಿಮ ಮುಖವಾಗಿದೆ. ಇದು ಒಂದು ಚಿಕ್ಕಗೂಡಿನ ಆಕೃತಿಯಲ್ಲಿದೆ. ಈ ಗೂಡಿನಲ್ಲಿ ಗುಂಡನೆಯ ಎರಡು ಶಿಲೆ ಗಳಿವೆ. ಇವುಗಳನ್ನು ಜನ ಬ್ರಹ್ಮದೇವರೆಂದು ಕರೆಯುತ್ತಾರೆ. ಈ ಗುಡಿಯು ಮರುಳಸಿದ್ಧನ ಶಿಷ್ಯನಾದ ಬ್ರಹ್ಮನಿಗೆ ಸಂಬಂಧಪಟ್ಟ ಸ್ಮಾರಕವಾಗಿದೆ.

೫. **ತರಳಬಾಳು ಸಿದ್ಧನ ದೇವಸ್ಥಾನ :** ಈ ದೇವಸ್ಥಾನವು ಮರುಳ ಸಿದ್ಧನ ದೇವಸ್ಥಾನಕ್ಕೆ ಸ್ವಲ್ಪದೂರದಲ್ಲಿ ಪಶ್ಚಿಮ ದಿಕ್ಕಿನಲ್ಲಿ ಉತ್ತರಮುಖ ವಾಗಿದೆ. ತೆಲಗು ಬಾಳಿನಿಂದ ಬಂದು ಮರುಳಸಿದ್ಧನ ಕಾರುಣ್ಯವನ್ನು ಗಳಿಸಿ ಅವನ ಉತ್ತರಾಧಿಕಾರಿಯಾಗಿ ಅವನಿಂದ 'ತರಳ - ಬಾಳು ' ಎಂಬ ಆಶೀ ರ್ವಾದವನ್ನು ಹೊಂದಿ, ತರಳ-ಬಾಳು ವಂಶದ ಮೂಲಪುರುಷನಾದ ಸಿದ್ಧನ ಸ್ಮಾರಕವಾಗಿ ಈ ದೇವಸ್ಥಾನವು ನಿರ್ಮಿಸಲ್ಪಟ್ಟಿತೆಂದು ಐತಿಹ್ಯ.

೬. **ಮಾದಿಗರಕೇರಿಯ ಮರುಳಸಿದ್ಧ ದೇವಸ್ಥಾನ :** ಈ ದೇವ ಸ್ಥಾನವು ಮಾದಿಗರ (ಬೇಗಾರರ) ಕೇರಿಯಲ್ಲಿದೆ. 'ಈ ದೇವಸ್ಥಾನದ ಪೂಜೆ ಯನ್ನು ಮಾದಿಗರ ಪೂಜಾರಿಯೊಬ್ಬನು ಮಾಡುತ್ತಾನೆ. ಈ ಮಾದಿಗರ ಪೂಜಾರಿಯಲ್ಲದೆ ಉಳಿದ ಮಾದಿಗರಾರೂ ಈ ದೇವಸ್ಥಾನದ ಗರ್ಭಗುಡಿ ಯೊಳಗೆ ಹೋಗುವುದಿಲ್ಲ. ಈ ಮಾದಿಗರ ಪೂಜಾರಿಗೆ ಪಟ್ಟವಾಗಿರಬೇಕು. ಈ ಪಟ್ಟವನ್ನು ಉಜ್ಜಯಿನಿಯ ಮಠದವರು ಕಟ್ಟುತ್ತಾರೆ. ಈ ಪಟ್ಟವನ್ನು ಕಟ್ಟುವ ಕಾಲದಲ್ಲಿ ಈ ಮಾದಿಗರ ಪೂಜಾರಿಗೆ ಕಾವಿ ಮತ್ತು ಬೆತ್ತ ಇವು ಗಳನ್ನು ಕೊಡಲಾಗುವುದು. ಈ ಮಾದಿಗರ ಪೂಜಾರಿಯು ಮಾಂಸಾಹಾರ ವನ್ನು ತ್ಯಜಿಸುತ್ತಾನೆ.

ಮಾದಿಗರು ಮರುಳಸಿದ್ಧನ ವಿಚಾರದಲ್ಲಿ ಹೆಚ್ಚಿನ ಭಕ್ತಿಯುಳ್ಳವ ರಾಗಿರುವುದೂ ಮತ್ತು ಮರುಳಸಿದ್ಧನ ಸಂಬಂಧವಾದ ಉತ್ಸವಾದಿ ಕಾರ್ಯ

ಗಳಲ್ಲಿ ಹೆಚ್ಚಿನ ಹಕ್ಕನ್ನುಳ್ಳವರಾಗಿರುವುದೂ ಗಮನಾರ್ಹವಾದ ಅಂಶಗಳಾಗಿವೆ. ಭಾರತದ ಹುಣ್ಣಿಮೆಯಲ್ಲಿ ಮರುಳಸಿದ್ಧನ ಪಾಲಿಕೆಯ ಉತ್ಸವವು ಹೊರಟಾಗ ಮರುಳಸಿದ್ಧನಿಗೆ ಮೊದಲನೆಯ ಆರತಿಯನ್ನು ಎತ್ತುವವರು ಮಾದಿಗರೇ ಆಗಿರುತ್ತಾರೆ. ರಥೋತ್ಸವದಲ್ಲಿ ರಥದ ಗಾಲಿಗಳಿಗೆ ಎದ್ದ ಹಾಕುವವರೂ ಮಾದಿಗರೇ ಆಗಿರುತ್ತಾರೆ. ವ... ರಥದ ಗಾಲಿಗಳ ಮೇಲೆ ಭಕ್ತರು ಒಡೆಯುವ ತೆಂಗಿನಕಾಯಿಗಳಲ್ಲಿ ಒಂದು ಭಾಗಕ್ಕೆ ಮಾದಿಗರೇ ಹಕ್ಕುಳ್ಳವರಾಗಿರುತ್ತಾರೆ. ಹಿಂದೆ ವರ್ಣಿಸಿದ ಮರುಳಸಿದ್ಧನ ಮೂಲ ದೇವಸ್ಥಾನದ ಪೌಳಿಯ ಒಳಭಾಗದ ಆವರಣದ ಕಸವನ್ನು ಗುಡಿಸುವವರೂ ಮಾದಿಗರೇ ಆಗಿರುತ್ತಾರೆ. ದೇವರಿಗೆ ಆರತಿಯನ್ನೆತ್ತುವಾಗ ಮಾದಿಗರ ಹೆಂಗಸರು ಮರುಳಸಿದ್ಧನನ್ನು ಕುರಿತು ಅನೇಕ ಶೋಭಾನೆಯ ಪದಗಳನ್ನು ಹಾಡುತ್ತಾರೆ. ಮರುಳ, ಜಟ್ಟಿಗ, ಹನುಮ ಮುಂತಾದ ಮರುಳಸಿದ್ಧನಿಗೆ ಸಂಬಂಧಪಟ್ಟ ಹೆಸರುಗಳನ್ನು ಮಾದಿಗರು ವಿಶೇಷವಾಗಿ ಇಟ್ಟುಕೊಳ್ಳುತ್ತಾರೆ. ಮರುಳಸಿದ್ಧನು ಮಾದಿಗರ ಹೊಟ್ಟೆಯಲ್ಲಿ ಹುಟ್ಟಿ ಮಹಾಮಹಿಮನಾಗಿ ಮೆರೆದನೆಂಬ ಐತಿಹ್ಯಕ್ಕೆ ಮೇಲೆ ಹೇಳಿದ ಎಲ್ಲ ಸ್ಮಾರಕಗಳೂ ಸಂಪ್ರದಾಯಗಳೂ ಮತ್ತು ಆಚರಣೆಗಳೂ ಪುಷ್ಟಿಯನ್ನು ಕೊಡುತ್ತವೆ.

೭. **ಮೈಲಾರಲಿಂಗನ ಬಂಡೆ :** ಈ ಬಂಡೆಯು ಮರುಳಸಿದ್ಧನ ದೇವಸ್ಥಾನಕ್ಕೆ ಹಿಂದುಗಡೆ ಸುಮಾರು ೨ ಫರ್ಲಾಂಗುಗಳ ದೂರದಲ್ಲಿದೆ. ಈ ಬಂಡೆಯ ಮೇಲೆ ೨ ಲಿಂಗಗಳೂ ಪಾದಗಳೂ ಇವೆ. ಮರುಳಸಿದ್ಧನ ಸಾಕು ತಂದೆಯಾದ ಕಗ್ಗಲ್ಲಗೌಡನ ವಂಶದವರು ಮೊದಲು ಮೈಲಾರನ ಭಕ್ತರಾಗಿದ್ದರೆಂದೂ, ಮರುಳಸಿದ್ಧನು ಇವರ ಮನೆಯಲ್ಲಿ ದನಗಳನ್ನು ಕಾಯ್ದು ಪವಾಡಗಳನ್ನು ಮೆರೆಸಿ ಮೈಲಾರನನ್ನು ಮನೆಯಿಂದ ಓಡಿಸಿದ ಮೇಲೆ ಇವರು ಮೈಲಾರನನ್ನು ಬಿಟ್ಟು ಮರುಳಸಿದ್ಧನನ್ನೇ ತಮ್ಮ ಮನೆದೇವರನ್ನಾಗಿ ಮಾಡಿಕೊಂಡರೆಂದೂ, ಇದರ ದ್ಯೋತಕವಾಗಿಯೇ ಈ ಮೈಲಾರಲಿಂಗನ ಬಂಡೆಯು ಮರುಳಸಿದ್ಧನ ದೇವಸ್ಥಾನಕ್ಕೆ ದೂರವಾಗಿರುವುದೆಂದೂ ಜನರು ಐತಿಹ್ಯ ನುಡಿಯುತ್ತಾರೆ.

೮. **ಮುಸಲನಂದಿ ಬಸವಣ್ಣ :** ಇದು ಮರುಳಸಿದ್ಧನ ದೇವಸ್ಥಾನಕ್ಕೆ ಹಿಂದುಗಡೆ ಮೈಲಾರಲಿಂಗನ ಬಂಡೆಗೆ ಸ್ವಲ್ಪ ದೂರದಲ್ಲಿದೆ. ಬಸವಣ್ಣನ

ವಿಗ್ರಹವೂ ಉತ್ತರಮುಖವಾಗಿದೆ. ಇದರ ಪಕ್ಕದಲ್ಲಿ ಉದ್ಭವಶಿಲೆಯೊಂದಿದೆ. ಇದನ್ನೇ ಜನರು ಮರುಳಸಿದ್ಧನೆಂದು ಕರೆಯುತ್ತಾರೆ. ಮರುಳಸಿದ್ಧನೂ ಆತನ ಶಿಷ್ಯರಾದ ಜಟ್ಟಿಗ, ಹನುಮ, ಬೈರ ಮತ್ತು ಬ್ರಹ್ಮ ಇವರುಗಳೂ ಈ ಸ್ಥಳದಲ್ಲಿ ಸೇರಿ ಮುಂದೆ ತಾವು ಎಲ್ಲೆಲ್ಲಿ ನೆಲಸಬೇಕೆಂಬ ವಿಚಾರವನ್ನು ಮಸಲತ್ತು ಮಾಡಿದರೆಂದು ಐತಿಹ್ಯವಿದೆ.

iii] **ಉಜ್ಜಯಿನಿಗೆ ಹತ್ತಿರದಲ್ಲಿರುವ ಇತರ ಸ್ಮಾರಕಗಳು.**

೧. **ವಟವೃಕ್ಷ ಮತ್ತು ಸಿದ್ಧನಸರ್ತಿ:** ಉಜ್ಜಯಿನಿಗೆ ಸುಮಾರು ಒಂದು ಮೈಲಿ ದೂರದಲ್ಲಿ ಒಂದು ದೊಡ್ಡ ಆಲದಮರವೂ ಅದರ ಹತ್ತಿರ ಒಂದು ಸಣ್ಣ ನೀರಿನ ಕಟ್ಟೆಯೂ ಇವೆ. ಈ ಆಲದ ಮರದ ಕೆಳಗೆ ಕುಳಿತು ಈ ಕಟ್ಟೆಯ ನೀರು ಕುಡಿದು ಮರುಳಸಿದ್ಧ ವಿಶ್ರಮಿಸಿಕೊಳ್ಳುತ್ತಿದ್ದನೆಂದು ಐತಿಹ್ಯ.

೨. **ಬೈರೇದೇವರ ಗುಡ್ಡ:** ಈ ಗುಡ್ಡವು ಉಜ್ಜಯಿನಿಗೆ ಸುಮಾರು ಮೂರು ಮೈಲಿ ದೂರದಲ್ಲಿ ಉತ್ತರ ದಿಕ್ಕಿನಲ್ಲಿದೆ. ಈ ಗುಡ್ಡಕ್ಕೆ ಬೈರೇಶ್ವರ ದುರ್ಗ ಎಂಬ ಹೆಸರೂ ಉಂಟು. ಈ ಗುಡ್ಡದ ಮಧ್ಯಭಾಗದಲ್ಲಿ ಒಂದು ಪೊಟ್ಟರೆಯಲ್ಲಿ ಬೈರೇದೇವರ ಮೂರ್ತಿ ಇದೆ. ಇದರ ಪಕ್ಕದಲ್ಲಿ ಬ್ರಹ್ಮದೇವರೂ ಇದೆ. ಬೈರೇದೇವರ ವಿಗ್ರಹಕ್ಕೆ ಹಿಂದೆ ಒಂದು ಗತಿ ಇದೆ. ಬೈರೇದೇವರ ಕಾಲು ಮುರಿದಂತೆ ಕಾಣುತ್ತದೆ. ನೆಲಸಲು ತನಗೆ ಸ್ಥಳ ಸಿಕ್ಕಿತೆಂದೂ ಉಳಿದವರಿಗೆ ಸಿಕ್ಕಲಿಲ್ಲವೆಂದೂ ಬೈರನು ಅಹಂಕಾರದಿಂದ ನುಡಿಯಲು ಮರುಳಸಿದ್ಧನು ಕೋಪಗೊಂಡು ಬೈರನನ್ನು ದೂಡಲು ಬೈರನು ಹೋಗಿ ಈ ಗುಡ್ಡಗಳಲ್ಲಿ ಬಿದ್ದು ಕಾಲು ಮುರಿದುಕೊಂಡನೆಂದೂ ಇದರ ಕುರುಹಾಗಿಯೇ ಬೈರೇದೇವರ ವಿಗ್ರಹದ ಕಾಲು ಮುರಿದಂತೆ ಕಾಣುವುದೆಂದೂ ಐತಿಹ್ಯ.

೩. **ಕೆಗ್ಗಲ್ಲವರ ಕಟ್ಟೆ:** ಈ ಕಟ್ಟೆಯು ಬೈರೇದೇವರ ಗುಡ್ಡಕ್ಕೆ ಆಗ್ನೇಯದಲ್ಲಿದೆ. ಗುಡ್ಡದ ಮೇಲೆ ನಿಂತು ನೋಡಿದರೆ ಕಾಣುತ್ತದೆ.

೪. **ಕೆಗ್ಗಲ್ಲಪುರ:** ಈ ಊರು ಬೈರೇದೇವರ ಗುಡ್ಡಕ್ಕೆ ಈಶಾನ್ಯದಲ್ಲಿದೆ. ಈಗ ಹಾಳೂರಾಗಿದೆ. ಈ ಊರಲ್ಲಿ ಕಟ್ಟೆ, (ಸಿದ್ದಯ್ಯನ ಕಟ್ಟೆ) ಮಠ, ಮನೆಗಳು, ತೇರುಬೀದಿ ಇವುಗಳ ಅವಶೇಷಗಳು ಈಗಲೂ ಕಾಣುತ್ತವೆ.

೫. **ಕೆಗ್ಗಲ್ಲವರ ಕಟ್ಟೆ**: ಇದು ಈ ಹೆಸರಿನ ಎರಡನೆಯ ಕಟ್ಟೆ. ಉಜ್ಜಯಿನಿಗೆ ಸುಮಾರು ನಾಲ್ಕು ಫರ್ಲಾಂಗುಗಳ ದೂರದಲ್ಲಿದೆ. ಹಿಂದೆ ಇದರ ಸಮೀಪದಲ್ಲಿ ಕೇತನಹಳ್ಳಿಬೀಡೆಂಬ ಊರು ಇತ್ತೆಂದೂ, ಆ ಊರು ಈಗ ಹಾಳಾಗಿದೆಯೆಂದೂ, ಈ ಕಟ್ಟೆಗೆ 'ಕೇತನಹಳ್ಳಿ ಚರುವು' ಎಂಬ ಹೆಸರು ಈಗಲೂ ಸರ್ಕಾರಿ ದಾಖಲೆಗಳಲ್ಲಿ ಇರುವುದೆಂದೂ ತಿಳಿಯುಬರುತ್ತದೆ.

೬. **ಮೂಗಣ್ಣನ ದೇವಸ್ಥಾನ**: ಉಜ್ಜಯಿನಿಗೆ ಪಶ್ಚಿಮ ದಿಕ್ಕಿನಲ್ಲಿ ಸುಮಾರು ಎರಡು ಮೈಲಿಗಳ ದೂರದಲ್ಲಿದೆ. ಮರುಳಸಿದ್ಧನು ದನಗಳನ್ನು ಕಾಯುತ್ತಿದ್ದಾಗ ಮೂಕನಂತೆ ಇಲ್ಲಿ ಕುಳಿತುಕೊಳ್ಳುತ್ತಿದ್ದುದರಿಂದ ಈ ದೇವ ಸ್ಥಾನಕ್ಕೆ ಈ ಹೆಸರು ಬಂದಿತೆಂದು ಐತಿಹ್ಯ.

೭. **ಜಟ್ಟಿಗಪ್ಪನ ಗುಡಿ**: ಮೂಗಣ್ಣನ ದೇವಸ್ಥಾನದ ಆವರಣದಲ್ಲಿ ಮೂಗಣ್ಣನಿಗೆದುರಾಗಿದೆ.

೮. **ಸ್ಥಾಪನಕಟ್ಟೆ**: ಮೂಗಣ್ಣನ ದೇವಸ್ಥಾನಕ್ಕೆ ಪೂರ್ವದಿಕ್ಕಿನಲ್ಲಿ ಸ್ವಲ್ಪ ದೂರದಲ್ಲಿದೆ. ಮರುಳಸಿದ್ಧನು ಈ ಕಟ್ಟೆಯನ್ನು ಸ್ಥಾಪಿಸಿದುದರಿಂದ ಈ ಕಟ್ಟೆಗೆ ಈ ಹೆಸರು ಬಂದಿತೆಂದು ಐತಿಹ್ಯ.

೯. **ಕೆರುಪಿನ ಕಲ್ಲುಗುಡ್ಡ**: ಮೂಗಣ್ಣನ ದೇವಸ್ಥಾನಕ್ಕೆ ಸ್ವಲ್ಪ ದೂರ ದಲ್ಲಿ ಉತ್ತರ ದಿಕ್ಕಿನಲ್ಲಿದೆ. ಈ ಗುಡ್ಡದ ತುಟ್ಟತುದಿಯಲ್ಲಿ ಮರುಳಸಿದ್ಧನ ಒಂದು ಅಂಕಣದ ಗುಡಿ ಇದೆ. ಮರುಳಸಿದ್ಧನು ದನಗಳನ್ನು ಈ ಗುಡ್ಡಕ್ಕೆ ಹೊಡೆದುಕೊಂಡು ಬಂದು ದನಗಳನ್ನು ಈ ಹಟ್ಟಿಗಳಲ್ಲಿ ಕೂಡುತ್ತಿದ್ದನೆಂದು ಜನರು ಹೇಳುತ್ತಾರೆ.

III **ತೂಲಹಳ್ಳಿ**: ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿ ಉಜ್ಜ ಯಿನಿಗೆ ಸುಮಾರು ನಾಲ್ಕು ಮೈಲಿ ದೂರದಲ್ಲಿದೆ. ಹಿಂದೆ ಇದಕ್ಕೆ ತುಯ್ಯ ಲಾಳಪುರವೆಂಬ ಹೆಸರಿತ್ತೆಂದು ತಿಳಿಯುಬರುತ್ತದೆ. ಹಿಂದಿನ ಊರು ಹಾಳು ಬಿದ್ದು ಸುಮಾರು ಎರಡು ಫರ್ಲಾಂಗುಗಳ ದೂರದಲ್ಲಿದೆ. ಹಿಂದಿನ ಹಾಳೂರನ್ನು 'ಹಳೆಯ ಹಾಳು' ಎಂದು ಕರೆಯುತ್ತಾರೆ. ಈ ಹಳೆಯ ಹಾಳೂರಿನಲ್ಲಿ ನಾಗಕಲ್ಲಿನ ಮೇಲೆ ಬರೆದ ಒಂದು ಶಾಸನವಿದೆ. ಹೊಸ

ಊರಿಗೆ ಈಶಾನ್ಯದಲ್ಲಿ ಮತ್ತೊಂದು ಶಾಸನವಿದೆ. ಈ ಶಾಸನದಲ್ಲಿ ಕತ್ತಿಹಿಡಿದಿರುವ ಒಬ್ಬನು ಮತ್ತೊಬ್ಬನನ್ನು ಹೊಡೆಯುತ್ತಿರುವ ಚಿತ್ರವೂ ಮತ್ತು ಅಕ್ಷರಗಳೂ ಕೆತ್ತಿವೆ. (ವೀರಗಲ್ಲು ಇರಬಹುದು.)

**ಮರುಳ ಸಿದ್ಧೇಶ್ವರನ ದೇವಸ್ಥಾನ :** ಈ ದೇವಸ್ಥಾನವು ಹೊಸ ಊರಿನಲ್ಲಿ ಹಳೆಯ ಊರಿನ ಹತ್ತಿರದಲ್ಲಿದೆ. ಸರ್ಕಾರದ ದಾಖಲೆಗಳಲ್ಲಿ 'ಶ್ರೀ ಸಿದ್ಧೇಶ್ವರ ಸ್ವಾಮಿ ದೇವಾಲಯ' ಎಂದಿದೆ. ಈ ದೇವಸ್ಥಾನದ ಪೂಜೆಯನ್ನು ಈಗಲೂ ಕಗ್ಗಲ್ಲು ವಂಶದವರೇ ಮಾಡುತ್ತಾರೆ. ಈ ದೇವಸ್ಥಾನದಲ್ಲಿ ಅನೇಕ ಕಂಬಗಳಿವೆ. ಅವುಗಳಲ್ಲಿ ಗರ್ಭಗುಡಿಯ ಹತ್ತಿರದ ಕಂಬವು ಸ್ವಭಾವಸಿದ್ಧವಾಗಿ ಬೆಳೆದ ಕಮರದ (ಹಾಸಿನ) ಮರವೇ ಆಗಿರುತ್ತದೆ. ಹಿಂದೆ ಬಾಲ ಮರುಳಸಿದ್ಧನು ಈ ಪ್ರಾಂತ್ಯದ ಅರಣ್ಯದ ಒಂದು ಪೆಳೆಯಲ್ಲಿದ್ದನೆಂದೂ, ಹಯನುಗಳು ಪ್ರತಿನಿತ್ಯವೂ ಅವನ ಬಳಿಗೆ ಹೋಗಿ ಅವನಿಗೆ ಹಾಲು ಕರೆಯುತ್ತಿದ್ದವೆಂದೂ, ಒಂದು ದಿನ ಕಗ್ಗಲ್ಲಗೌಡನ ಹಯನೊಂದು ತಪ್ಪಿಸಿಕೊಂಡಿರಲು ಗೌಡನು ಅದನ್ನು ಹುಡುಕಿಕೊಂಡು ಬಂದು ನೋಡಲಾಗಿ ಅದು ಈ ಪೆಳೆಯಲ್ಲಿ ಬಾಲಮರುಳಸಿದ್ಧನಿಗೆ ಹಾಲು ಕರೆಯುತ್ತಿದ್ದಿತೆಂದೂ ಗೌಡನು ತನಗೆ ಮಕ್ಕಳಿಲ್ಲದೆ ಇದ್ದುದರಿಂದ ಬಾಲ ಮರುಳಸಿದ್ಧನನ್ನು ಕಂಡು ಹಿಗ್ಗಿ ಅವನನ್ನು ಕರೆದುಕೊಂಡು ಹೋಗಿ ಪೋಷಿಸಿದನೆಂದೂ, ಯಾವ ಪೆಳೆಯಲ್ಲಿ ಗೌಡನು ಬಾಲ ಮರುಳಸಿದ್ಧನನ್ನು ಕಂಡನೋ ಆ ಪೆಳೆಯ ಒಂದು ಮರವೇ ಮೇಲೆ ಹೇಳಿದಂತೆ ಈಗಲೂ ದೇವಸ್ಥಾನದ ಕಂಬವಾಗಿ ಇರುವುದೆಂದೂ, ಗೌಡನು ಬಾಲ ಮರುಳಸಿದ್ಧನನ್ನು ಪೆಳೆಯಲ್ಲಿ ನೋಡಿದಾಗ ಬಾಲ ಮರುಳಸಿದ್ಧನು ಉಯ್ಯಾಲೆಯಲ್ಲಿ ಆಡುತ್ತಿದ್ದಂತೆ ಕಾಣಿಸಿದನೆಂದೂ, ಈ ಕಾರಣದಿಂದ ಈ ಊರಿಗೆ ತುಯ್ಯಲಾಪುರ (ಉಯ್ಯಾಲೆಪುರ) ಎಂಬ ಹೆಸರು ಬಂದಿತೆಂದೂ, ಕಾಲಕ್ರಮದಲ್ಲಿ ಅದು ತೂಲಳ್ಳಿಯಾಯಿತೆಂದೂ, ಗೌಡನು ಬಾಲ ಮರುಳಸಿದ್ಧನನ್ನು ಪೆಳೆಯಲ್ಲಿ ಕಂಡಾಗ ಬಾಲಮರುಳಸಿದ್ಧನು ಪ್ರತ್ಯಕ್ಷನಾಗಿ ಈ ಊರು ಹಯನಹಳ್ಳಿ (ಹಾಲಿನ ಹಳ್ಳಿ) ವಾಗಲೆಂದು ಹರಸಿದನೆಂದೂ ಐತಿಹ್ಯ.

iv **ಉರ್ಲ ಕಟ್ಟೆ :** ಈ ಊರು ಜಗಳೂರು ತಾಲ್ಲೂಕಿನ ಬಿಳಿಚೋಡು ಹೋಬಳಿಗೆ ಸೇರಿದೆ. ಈ ಸ್ಥಳದಲ್ಲಿ ಮರುಳಸಿದ್ಧನು ಕರುಗಳನ್ನು ಕಾಯು

ವವರಿಗೆ ಉರುಲು ಹಾಕಿದ್ದರಿಂದ ಈ ಹೆಸರು ಬಂತೆಂದು ಐತಿಹ್ಯ. ಈ ಊರಿನ ಬಾಗಿಲಲ್ಲಿ ೭ ಜೀರ್ಣಶಾಸನಗಳಿವೆ.

**ಮರುಳಸಿದ್ಧೇಶ್ವರನ ಗುಡಿ :** ಬಹಳ ಚಿಕ್ಕದು ಮತ್ತು ಜೀರ್ಣವಾಗಿದೆ.

v **ಉಜ್ಜಪ್ಪನವಡೇರಹಳ್ಳಿ :** ಜಗಳೂರು ತಾಲ್ಲೂಕಿನ ಸೊಕ್ಕೆ ಹೋಬಳಿಗೆ ಸೇರಿದೆ. ಈ ಊರಿಗೆ ಸುಮಾರು ಒಂದು ಮೈಲಿ ದೂರದಲ್ಲಿ ವರವೇನಹಳ್ಳಿ ಎಂಬ ಬೇಚರಾಕು ಗ್ರಾಮದಲ್ಲಿ ಮರುಳಸಿದ್ಧನ ಗುಡಿ ಇದೆ.

vi **ಪಲ್ಲಾಗಟ್ಟೆ :** ಜಗಳೂರು ತಾಲ್ಲೂಕಿನ ಬಿಳಿಚೋಡು ಹೋಬಳಿಗೆ ಸೇರಿದೆ. ಮರುಳಸಿದ್ಧನು ಈ ಊರಿನಲ್ಲಿ ಪಲ್ಯವನ್ನು ಅಟ್ಟಿದರಿಂದ ಈ ಊರಿಗೆ ಈ ಹೆಸರು ಬಂದಿತೆಂದು ಐತಿಹ್ಯ.

vii **ಮುಸಣಿಕಟ್ಟೆ :** ಈ ಗ್ರಾಮವೂ ಬಿಳಿಚೋಡು ಹೋಬಳಿಗೆ ಸೇರಿದೆ. ಒಂದು ಚಚ್ಚೌಕದ ಮೇಲೆ ನಾಲ್ಕು ತ್ರಿಶೂಲಗಳ ಗುರುತನ್ನು ಉಳ್ಳ ಎರಡು ಕಲ್ಲುಗಳಿವೆ. ಈ ಗುರುತು ಮರುಳಸಿದ್ಧನಿಗೆ ಸಂಬಂಧಪಟ್ಟುದೆಂದು ಜನರು ಹೇಳುತ್ತಾರೆ. ಮರುಳಸಿದ್ಧನು ಈ ಊರಿಗೆ ಬಂದು ಮಾದಪ್ಪ (ಮಾರಪ್ಪ) ಎಂಬ ರೈತನ ಮನೆಗೆ ಹೋಗಿ ಭಿಕ್ಷೆಯನ್ನು ಕೇಳಿದನೆಂದೂ, ರೈತನು ಎಳ್ಳು ಕಾಳಿನ ಭಿಕ್ಷೆಯನ್ನು ನೀಡಲು, ಮರುಳಸಿದ್ಧನು ಅದನ್ನು ಒಲ್ಲದೆ, ಬಡಿದ ಎಳ್ಳು ಕಡ್ಡಿಯನ್ನು ಮಾತ್ರವೇ ಸ್ವೀಕರಿಸಿ ಅದನ್ನು ಮತ್ತೆ ಬಡಿದು ಮೂಗಂಡುಗ ಎಳ್ಳನ್ನು ಮಾಡಿದನೆಂದೂ ಈ ರೀತಿ ಮಾಡಿದ ಎಳ್ಳನ್ನು ಕಗ್ಗಲ್ಲಗೌಡನಿಗೆ ಕೊಟ್ಟು ರೈತನ ಋಣವನ್ನು ಪರಿಹರಿಸಿದನೆಂದೂ ಐತಿಹ್ಯ.

viii **ಅಸಗೋಡು :** ಬಿಳಿಚೋಡು ಹೋಬಳಿಗೆ ಸೇರಿದೆ. ಶಂಭುಲಿಂಗದೇವರ ದೇವಸ್ಥಾನವಿದೆ. ಲಿಂಗವು ಉದ್ಭವ ಮೂರ್ತಿಯಾಗಿದೆ. ಹಿಂದೊಮ್ಮೆ ಬೀಡಿಕೆಯವರು ಎತ್ತುಗಳ ಮೇಲೆ ಮಾಲನ್ನು ಹೇರಿಕೊಂಡು ಬಂದು ಈ ಊರಿನಲ್ಲಿ ತಂಗಿ ಈ ಉದ್ಭವ ಮೂರ್ತಿಯನ್ನೇ ಒಲೆಯ ಗುಂಡನ್ನಾಗಿ ಮಾಡಿಕೊಂಡು ಅಡಿಗೆಯನ್ನು ಮಾಡಿದರೆಂದೂ ಇದರಿಂದ ಅವರ ಎತ್ತುಗಳ ಕೋಡುಗಳು ಉದುರಿಹೋದವೆಂದೂ ಆಮೇಲೆ ಬೀಡಿಕೆಯವರು ತಮ್ಮ ತಪ್ಪನ್ನು ಒಪ್ಪಿಕೊಂಡು ಶಂಭುಲಿಂಗ ಮೂರ್ತಿಯನ್ನು ಪೂಜಿಸಲು

ಎತ್ತುಗಳಿಗೆ ಹೊಸ ಕೋಡುಗಳು ಬಂದುವೆಂದೂ ಈ ಕಾರಣದಿಂದಲೇ ಈ ಊರಿಗೆ 'ಹೊಸ ಕೋಡು' ಎಂಬ ಹೆಸರು ಬಂದಿತೆಂದೂ, ಕಾಲಕ್ರಮದಲ್ಲಿ 'ಹೊಸ ಕೋಡು' ಹೋಗಿ 'ಅಸಗೋಡು' ಎಂದಾಯಿತೆಂದೂ ಐತಿಹ್ಯ.

ix **ಮುಚ್ಚನೂರು**: ಇದೂ ಬಿಳಿಚೋಡು ಹೋಬಳಿಗೆ ಸೇರಿದೆ. ಹಿಂದೊಮ್ಮೆ ಆನೆಗೊಂದಿ ರಾಜನು (ಕೆಲವರು ಬಿಜ್ಜಳ ರಾಜನೆಂದು ಹೇಳುವುದುಂಟು) ಸೇನೆಯೊಂದಿಗೆ ಆನೆಕೊಂಡಕ್ಕೆ ಬಂದಿದ್ದಾಗ ಅವನ ಬಳಿಯಲ್ಲಿದ್ದ ಬಿಳಿಯಾನೆಯೊಂದನ್ನು ಮರುಳಸಿದ್ಧನು ಕದ್ದುಕೊಂಡು ಬಂದನೆಂದೂ ಇದರಿಂದ ರಾಜನು ಕುಪಿತನಾಗಿ ಮರುಳಸಿದ್ಧನ ಬೆನ್ನುಹತ್ತಿ ಬರಲು ಮರುಳಸಿದ್ಧನು ಈ ಊರಿನಲ್ಲಿ ಮುಚ್ಚಿಕೊಂಡನೆಂದೂ ಇದರಿಂದ ಈ ಊರಿಗೆ ಈ ಹೆಸರು ಬಂದಿತೆಂದೂ ಐತಿಹ್ಯ. ಇದರ ಎರಡು ಫರ್ಲಾಂಗುಗಳ ದೂರದಲ್ಲಿ ಮರುಳಸಿದ್ಧನ ದೇವಸ್ಥಾನವಿದೆ. ಜನರು ಅದನ್ನು ಸಿದ್ಧೇಶ್ವರ ದೇವಸ್ಥಾನವೆಂದು ಕರೆಯುತ್ತಾರೆ. ಮರುಳಸಿದ್ಧನ ದೇವಸ್ಥಾನದ ಹಿಂದುಗಡೆ ಜಟ್ಟಿಗಪ್ಪನ ದೇವಸ್ಥಾನವಿದೆ.

x **ಕೊರುಡಿ**: ದಾವಣಗೆರೆ ತಾಲ್ಲೂಕಿನ ಆನಗೋಡು ಹೋಬಳಿಗೆ ಸೇರಿದೆ. ಈ ಊರಿನ ದನಕಾಯುವ ಎಲ್ಲ ಜಾತಿಯ ಹುಡುಗರೂ ತರುತ್ತಿದ್ದ ಬುತ್ತಿಯನ್ನು ಮರುಳಸಿದ್ಧನು ಕೂಡಿಸಿ, ಪಾದದಿಂದ ತುಳಿದು ಏಕಮಾಡಿ ಒಬ್ಬೊಬ್ಬರಿಗೆ ಒಂದೊಂದು ಮಿಟ್ಟೆಗೆಯಂತೆ ಹಂಚಿಕೊಟ್ಟು ತಾನೂ ಊಟ ಮಾಡುತ್ತಿದ್ದನೆಂದೂ ಇದು ಆ ಹುಡುಗರಿಗೆ ಬಹಳ ರುಚಿಯಾಗಿರುತ್ತಿದ್ದಿತೆಂದೂ, ಇದನ್ನು ಕಂಡು ಆ ಊರಿನ ಬ್ರಾಹ್ಮಣರು ಕುಲಹದಿನೆಂಟು ಜಾತಿಯನ್ನು ಮರುಳಸಿದ್ಧನು ಬೆರಕೆಮಾಡಿ ಕೆಡಿಸಿದನೆಂದು ಅವನ ಮೇಲೆ ಕುಪಿತರಾಗಿ ಮರುಳಸಿದ್ಧನನ್ನು ಒಂದು ಹಗೇವಿನಲ್ಲಿ ಹಾಕಿ, ಸುಣ್ಣತುಂಬಿ, ನೀರನ್ನು ಹೊಯಿದರೆಂದೂ, ಆಗ ಮರುಳಸಿದ್ಧನು ಪವಾಡವನ್ನು ಮೆರೆಸಲು ಆ ಹಗೇವಿನಲ್ಲಿಯೇ ಲಿಂಗ ಉದ್ಭವಿಸಿತೆಂದೂ, ಆ ಲಿಂಗಕ್ಕೆ ಹಗೇವು ಸಿದ್ಧೇಶ್ವರನೆಂಬ ಹೆಸರು ಬಂದಿತೆಂದೂ, ಮರುಳಸಿದ್ಧನು ಈ ರೀತಿ ಕುಲಹದಿನೆಂಟು ಜಾತಿಯ ಹುಡುಗರೊಂದಿಗೆ ಕೂಡಿ ಉಂಡುದರಿಂದ ಈ ಊರಿಗೆ 'ಕೂಡುಂಡಿ' ಎಂಬ

ಹೆಸರಾಯಿತೆಂದೂ ಕಾಲಕ್ರಮದಲ್ಲಿ ಕೂಡುಂಡಿಯು ಕುರುಡಿಯಾಯಿತೆಂದೂ ಐತಿಹ್ಯ.

**ಹಗೇವು ಸಿದ್ಧೇಶ್ವರನ ದೇವಸ್ಥಾನ:** ಈ ದೇವಸ್ಥಾನವು ಪೂರ್ವ ಮುಖವಾಗಿದೆ. ಮೂರು ಅಂತಸ್ತುಗಳಿವೆ. ಮೂರನೆಯ ಅಂತಸ್ತೇ ಗರ್ಭ ಗುಡಿ–ಇದೇ ಹಗೇವು, ಬಹಳ ತಗ್ಗಾಗಿದೆ. ಹಗೇವು ಸಿದ್ಧೇಶ್ವರನ ದೇವ ಸ್ಥಾನದ ಪಕ್ಕದಲ್ಲಿ ಉತ್ತರ ಭಾಗದಲ್ಲಿ ರೇವಣ ಸಿದ್ಧೇಶ್ವರನ ಗುಡಿ ಇದೆ. ಪೂರ್ವದ ಕಡೆ ಒಂದು ಚಿಕ್ಕಗೂಡಿನಲ್ಲಿ ಜಟ್ಟಿಗಪ್ಪ ದೇವರಿದೆ. ಪೂಜೆಗೆ ಬರುವ ಭಕ್ತರು ಮೊದಲು ಜಟ್ಟಿಗಪ್ಪನಿಗೆ ಪೂಜೆಯನ್ನು ಸಲ್ಲಿಸಿ ಆಮೇಲೆ ಹಗೇವು ಸಿದ್ಧೇಶ್ವರ, ರೇವಣಸಿದ್ಧೇಶ್ವರ ಇವರಿಗೆ ಪೂಜೆ ಸಲ್ಲಿಸುತ್ತಾರೆ.

xi **ಬೇತೂರು:** ಕುರುಡಿಗೆ ಸುಮಾರು ಒಂದು ಮೈಲಿ ದೂರದಲ್ಲಿದೆ. ಈ ಊರಿನ ಬ್ರಾಹ್ಮಣರು ಯಜ್ಞಮಾಡುತ್ತಿರಲು ಮರುಳಸಿದ್ಧನು ತನ್ನ ಆಕೃತಿ ಯನ್ನು ಯಜ್ಞಕುಂಡದಲ್ಲಿ ತೋರಿಸಿದನೆಂದೂ, ಆಗ ಬ್ರಾಹ್ಮಣರು ಕೋಪ ಗೊಂಡು ಮರುಳಸಿದ್ಧನನ್ನು ಈ ದೇವಸ್ಥಾನಗಳ ಮುಂದೆ ಹರಿಯುವ ಅಣಬಿ ಕೆರೆಯ ಹಳ್ಳಕ್ಕೆ ತಳ್ಳಿದರೆಂದೂ, ಮರುಳಸಿದ್ಧನು ಈ ಹಳ್ಳದಲ್ಲಿ ತೇಲಿಬರುತ್ತಾ ಅಲ್ಲಿ ಬರುತ್ತಿದ್ದ ಬ್ರಾಹ್ಮಣ ಸ್ತ್ರೀಯೊಬ್ಬಳಿಗೆ ಸೋಂಕಲು ಅವಳು ಶೂದ್ರನ ಸೋಂಕಿನಿಂದ ಅಪವಿತ್ರವಾಯಿತೆಂದು ಬ್ರಾಹ್ಮಣರಲ್ಲಿ ದೂರು ಹೇಳಿಕೊಳ್ಳಲು ಬ್ರಾಹ್ಮಣರು ಮತ್ತೆ ಮರುಳಸಿದ್ಧನನ್ನು ಹಿಡಿಯಲು ಪ್ರಯತ್ನಿಸಿದರೆಂದೂ ಆಗ ಮರುಳಸಿದ್ಧನು ಬ್ರಾಹ್ಮಣರ ಊಟದ ಅನ್ನವು ಮಾಯವಾಗುವಂತೆ ಮಾಡಿದನೆಂದೂ, ಇದರಿಂದ ಬ್ರಾಹ್ಮಣರು ಮತ್ತಷ್ಟು ಕುಪಿತರಾಗಿ ಮರುಳ ಸಿದ್ಧನ ಕೈಕಾಲುಗಳನ್ನು ಕಟ್ಟಿ ಅಣಬಿಕೆರೆಗೆ ಹಾಕಿದರೆಂದೂ ಮರುಳಸಿದ್ಧನು ಮತ್ತೆ ಬದುಕಿ ಬರಲು ಬ್ರಾಹ್ಮಣರು ರಾಜನಲ್ಲಿ ದೂರು ಹೇಳಿದರೆಂದೂ, ರಾಜನು ಮರುಳಸಿದ್ಧನ ಮೇಲೆ ಆನೆಯೊಂದನ್ನು ಬಿಡಿಸಿದನೆಂದೂ, ಮುಂದೆ ಮರುಳಸಿದ್ಧನು ಪವಾಡವನ್ನು ನಡೆಸಿ ಜಯಶೀಲನಾದನೆಂದೂ ಐತಿಹ್ಯ.

xii **ಅಣಬಿ:** ದಾವಣಗೆರೆ ತಾಲ್ಲೂಕಿನ ಆನಗೋಡು ಹೋಬಳಿಗೆ ಸೇರಿದೆ. ಈ ಊರಿನ ಕೆರೆ ಬಹಳ ದೊಡ್ಡದು.

xiii **ಆನಗೋಡು** : ದಾವಣಗೆರೆ ತಾಲ್ಲೂಕಿಗೆ ಸೇರಿದೆ. ಆನೆಯನ್ನು ಕಳೆದುಕೊಂಡ ಆನೇಗೊಂದಿ ರಾಜನು ಬೆನ್ನಟ್ಟಿ ಬಂದಾಗ ಮರುಳಸಿದ್ಧನು ಈ ಊರಿಗೆ ಬಂದು ಈ ಊರಿನ ನಡುಗೆರೆಯಲ್ಲಿ ನೀರಿನ ಮೇಲೆ ಕಂಬಳಿಯನ್ನು ಹಾಸಿ, ಅದರ ಮೇಲೆ ಕುಳಿತನೆಂದೂ, ಅದನ್ನು ಕಂಡು ದನಕಾಯುವ ಹುಡು ಗರು 'ಮರುಳ ಮುಳುಗಿದ'ನೆಂದು ಬೊಬ್ಬೆಯಿಟ್ಟು ಊರವರನ್ನು ಕರೆಯಲು, ಕೆರೆಯ ಏರಿಯು ಏಳು ಭಾಗಗಳಾಗಿ ಒಡೆಯಿತೆಂದೂ, ಮರುಳಸಿದ್ಧನು ಅಲ್ಲಿಯೇ ಲಿಂಗವಾಗಿ ನೆಲಸಿದನೆಂದೂ ಈ ಸ್ಥಳವೇ ಈಗ ದೇವಸ್ಥಾನವಾಗಿದೆ ಯೆಂದೂ ಐತಿಹ್ಯ. ಒಡೆದು ಹೋದ ಕೆರೆಯ ಏರಿಯು ಈಗಲೂ ದೇವ ಸ್ಥಾನದ ಸುತ್ತಲೂ ಕಾಣಿಸುತ್ತದೆ. ಮರುಳಸಿದ್ಧನು ಆನೆಯ ಕೋಡುಗಳನ್ನು ಕಿತ್ತು ಅಂಬರಕ್ಕೆ ಎಸೆದುದರಿಂದ ಈ ಊರಿಗೆ ಈ ಹೆಸರು ಬಂದಿತೆಂದೂ ಐತಿಹ್ಯವಿದೆ.

**ಮರುಳಸಿದ್ಧೇಶ್ವರನ ದೇವಸ್ಥಾನ** : ಈ ದೇವಸ್ಥಾನವು ಮೇಲೆ ಹೇಳಿ ದಂತೆ ಈ ಊರಿನ ಕೆರೆಯ ಅಂಗಳದಲ್ಲಿ ಪೂರ್ವಮುಖವಾಗಿರುತ್ತದೆ. ನವ ರಂಗದ ದಕ್ಷಿಣ ಭಾಗದಲ್ಲಿ ೧೬೬೯ನೆಯ ಶಕೆಯ ಒಂದು ಶಿಲಾಶಾಸನವು ಸಿಕ್ಕಿ ಸಲ್ಪಟ್ಟಿದೆ. ಈ ದೇವಸ್ಥಾನದ ಪೂಜೆಯನ್ನು ಈಗಲೂ ಕಗ್ಗಲ್ಲವಂಶದವರೇ ಮಾಡುತ್ತಾರೆ. ರಥೋತ್ಸವದಲ್ಲಿ ರಥವನ್ನು ತಳವಾರರು (ನಾಯಕರು) ಒಂದು ಕಡೆಯೂ ಮಾದಿಗರು (ಬೇಗಾರರು) ಒಂದು ಕಡೆಯೂ ೧೨-೧೨ ಜನ ರಂತೆ ನಿಂತು ನೂಕುತ್ತಾರೆ.

ಮರುಳಸಿದ್ಧನ ದೇವಸ್ಥಾನಕ್ಕೆ ದಕ್ಷಿಣದಲ್ಲಿ ಜಟ್ಟಿಗಪ್ಪನ ಗುಡಿಯೂ ಬಸವಣ್ಣನ ಗುಡಿಯೂ ಉತ್ತರಮುಖವಾಗಿವೆ. ಬಸವಣ್ಣನ ಗುಡಿಯ ಹಿಂ ದಕ್ಕೆ ಮೈಲಾರದೇವರ ಗುಡಿಯು ಪೂರ್ವಮುಖವಾಗಿದೆ. ಈ ಗುಡಿಯ ಪಕ್ಕ ದಲ್ಲಿ ಹನುಮಂತನ ಗುಡಿಯು ದಕ್ಷಿಣ ಮುಖವಾಗಿದೆ.

**ಸಿದ್ಧೇಶ್ವರನ ದೊಣೆ** : ಆನೆಗೋಡಿಗೆ ಸುಮಾರು ಒಂದು ಮೈಲಿ ದೂರ ದಲ್ಲಿಯೂ ಸಿದ್ಧನೂರಿಗೆ ಸುಮಾರು ಮೂರು ಫರ್ಲಾಂಗುಗಳ ದೂರದಲ್ಲಿಯೂ ಇದೆ. ಈ ದೊಣೆಯು ಒಂದು ದೊಡ್ಡ ಬಂಡೆಯು ೧೦-೧೫ ದೊಗರುಗಳಿಂದ ಕೂಡಿರುತ್ತದೆ. ಆನೆಯನ್ನು ಕಳೆದುಕೊಂಡಿದ್ದ ಆನೆಗೊಂದಿ ರಾಜನು

ಬೆನ್ನಟ್ಟಿ ಬಂದಾಗ ಮರುಳಸಿದ್ಧನು ಆ ಆನೆಯನ್ನು ಈ ಬಂಡೆಯೊಳಗೆ ತುಳಿದ ನೆಂದೂ ಹಾಗೆ ತುಳಿದ ಭಾಗವೇ ಈ ಬಂಡೆಯ ದೊಡ್ಡ ದೊಗರಾಗಿ ದೊಣೆ ಯಾಯಿತೆಂದೂ ಐತಿಹ್ಯ.

**ಸಿದ್ಧೇಶ್ವರನ ಗುಡಿ :** ಈ ಗುಡಿ ದೊಣೆಗೆ ಪೂರ್ವದಿಕ್ಕಿನಲ್ಲಿ ಪೂರ್ವ ಮುಖವಾಗಿದೆ. ಗರ್ಭಗುಡಿಯ ಮುಂದೆ ಎರಡು ಕಂಬಗಳಿವೆ. ಈ ಕಂಬ ಗಳಿಗೆ ಉತ್ತರದಲ್ಲಿ ಗೋಡೆಯ ಪಕ್ಕದಲ್ಲಿ ರೇವಣಸಿದ್ಧೇಶ್ವರ ಲಿಂಗವಿದೆ.

**ಹನುಮಂತನ ಗುಡಿ :** ಸಿದ್ಧೇಶ್ವರನ ಗುಡಿಗೆ ದಕ್ಷಿಣದಲ್ಲಿ ಸುಮಾರು ೧೦೦ ಅಡಿಗಳ ದೂರದಲ್ಲಿ ದಕ್ಷಿಣ ಮುಖವಾಗಿದೆ. ಹನುಮಂತನ ಮುಖವು ಪಶ್ಚಿಮಕ್ಕೆ ಇದೆ. ರಾಜನ ದಂಡು ಬಂದಿತೇ ಎಂಬುದನ್ನು ನೋಡೆಂದು ಮರುಳಸಿದ್ಧನು ಹನುಮಂತನಿಗೆ ಅಪ್ಪಣೆ ಮಾಡಿದ ಕಾರಣ ಹನುಮಂತ ಹೀಗೆ ಪಶ್ಚಿಮಕ್ಕೆ ತನ್ನ ಮುಖ ತಿರುಗಿಸಿದನೆಂದು ಐತಿಹ್ಯ.

xiv **ಉಳುಪನ ಕಟ್ಟೆ :** ಆನೆಗೋಡಿಗೆ ಸುಮಾರು ಒಂದು ಮೈಲಿ ದೂರದಲ್ಲಿದೆ. ಊರಿನ ಮುಂದೆ ಒಂದು ಆಲದ ಮರ, ಅದರ ಬುಡದಲ್ಲಿ ಒಂದು ಬಂಡೆಯಿದೆ. ಬಂಡೆಯ ಮೇಲಿರುವ ಎರಡು ಹೆಜ್ಜೆಯ ಗುರುತುಗಳು ಮರುಳಸಿದ್ಧನದೆಂದು ಐತಿಹ್ಯ. ಈ ಬಂಡೆಗೆ ಒಂದು ಕೂರಿಗೆ ಮಾರಿನ ದೂರದಲ್ಲಿ ಒಂದು ಭಾವಿ ಇದೆ. ಈ ಭಾವಿಯಲ್ಲಿ ಮರುಳಸಿದ್ಧನು ಬಾಯಾರಿ ತನ್ನ ಹೆಬ್ಬೆಟ್ಟನಿಂದ ನೆಲದಲ್ಲಿ ವರ್ತಿಯನ್ನು ತೆಗೆದು ನಿರ್ಮಾಣಮಾಡಿದ ನೆಂದೂ ನೀರನ್ನು ಕುಡಿದ ಮೇಲೆ ಮರುಳಸಿದ್ಧನು ಈ ಆಲದ ಮರದ ಕೆಳಗೆ ಈ ಬಂಡೆಯ ಮೇಲೆ ತನ್ನ ಕಾಲಿನ ಹುಳವನ್ನು ಸೋಸುತ್ತಾ ಕುಳಿತಿದ್ದ ನೆಂದೂ, ಆಗ ಅಲ್ಲಿಗೆ ಆನೆಯನ್ನು ಕಳೆದುಕೊಂಡಿದ್ದ ಆನೆಗೊಂದಿಯ ರಾಜನ ಕಡೆಯವರು ಒಂದು ಬಿಳಿಯಾನೆಯನ್ನು ಕಂಡೆಯಾ ಎಂದು ಮರುಳ ಸಿದ್ಧನನ್ನು ಕೇಳಲು ಅವನು 'ಕಂಡಹಾಗೂ ಆಯ್ತು, ಕಾಣದ ಹಾಗೂ ಆಯ್ತು' ಎಂದು ನುಡಿಯಲು ರಾಜನ ಕಡೆಯವರು ಮರುಳಸಿದ್ಧನನ್ನು ಹುಚ್ಚನೆಂದು ಪರಿಗಣಿಸಿ ಅವನನ್ನು ಬಿಟ್ಟು ಮುಂದಕ್ಕೆ ಹೋದರೆಂದೂ ಅಲ್ಲಿಂದ ಮುಂದೆ ಮರುಳಸಿದ್ಧನು ಆನೆಗೋಡಿಗೆ ಹೋಗಿ ಪವಾಡ ನಡೆಸಿದ

ನೆಂದೂ ಐತಿಹ್ಯ. ಮರುಳಸಿದ್ಧನು ಕಾಲಿನ ಹುಳವನ್ನು ಸೋಸುತ್ತಾ ಈ ಊರಲ್ಲಿ ಉಳಿದುದರಿಂದ ಈ ಹೆಸರು ಬಂದಿತೆಂದೂ ಐತಿಹ್ಯವುಂಟು.

XV ಸಿರಿಗೆರೆ : ಚಿತ್ರದುರ್ಗದ ತಾಲ್ಲೂಕಿನಲ್ಲಿದೆ. ಹಿಂದೆ ಈ ಊರಿಗೆ 'ಹಿರಿಯಾಳ' ಎಂಬ ಹೆಸರಿತ್ತೆಂದೂ ಈ ಊರಿನ ಎಲ್ಲ ಕೇರಿಗಳು ಹಾಳಾದರೂ ಒಂದು ಕೇರಿ ಮಾತ್ರ ಹಾಳಾಗದೆ ಉಳಿದುಕೊಂಡಿತೆಂದೂ ಅದರಿಂದ ಈ ಕೇರಿಗೆ 'ಸಿರಿಯುಳ್ಳ ಕೇರಿ' ಎಂಬ ಹೆಸರು ಬಂದಿತೆಂದೂ, ಕಾಲಕ್ರಮದಲ್ಲಿ ಸಿರಿಗೆರೆ ಆಯಿತೆಂದೂ ಸ್ಥಳ ಪುರಾಣದಲ್ಲಿ ಸೂಚಿತವಾಗಿದೆ. ಇಲ್ಲಿ ತರಳಬಾಳು ಸಂಸ್ಥಾನದ ಮಠವಿದೆ.

## ಮರುಳಸಿದ್ಧ ಕಾವ್ಯ

ಇದಕ್ಕೆ ಮರುಳಸಿದ್ಧೇಶ್ವರ ಚಾರಿತ್ರ್ಯ ಸಿದ್ಧಲಿಂಗ ಚಾರಿತ್ರ್ಯಗಳೆಂಬ ಹೆಸರುಗಳೂ ಉಂಟು. ಬರೆದವನು ದೇಪ ಅಥವಾ ದೇವ. "ಗದ್ದುಗೆಯ ರಾಮಿ ತಂದೆಯು ಶರಣಸಂತತಿಗೆ ಉದ್ಧರಿಸಿ ಪೇಳ್ದಂ ಗುರುಬೋಧೆಯ ಮಹಾತ್ಮೆಯನು ಹೃದ್ಯದೊಳೆ ನೆರೆಭಾವಿಸಿ ಬುದ್ಧಿಯಿಂ ಮನಚಿತ್ತ ಕರಣಕಳೆಯೊಳ್ತೀವೆ" ಅವಿರಳ ಪರಬ್ರಹ್ಮ ಸಿದ್ಧಲಿಂಗನ ಕೃತಿಯನೊರೆದನೆಂದು ಹೇಳುತ್ತಾನೆ. ಗ್ರಂಥವು ಶಾಲಿವಾಹನ ಶಕ ೧೫೦೯ನೆಯ ಸರ್ವಜಿತು ಸಂವತ್ಸರ ವೈಶಾಖ ಹುಣ್ಣಿಮೆ ಗುರುವಾರ (೧೫೮೭ ಇಸವಿ ಮೇ ತಿಂಗಳು) ಮುಗಿದಿದೆ. ಬಾಳ್ಗಲಿಯ ಕಲಿದೇವ ದೇವನ ಗುರುವೆಂದು ಗೊತ್ತಾಗುತ್ತದೆ. ಗದ್ದುಗೆಯ ರಾಮಿತಂದೆಯ 'ಗುರುಬೋಧೆ' ಉಪಲಬ್ಧವಿಲ್ಲ. ದೇವನ ಹೆಸರನ್ನು ಬೇರೆ ಯಾವ ಕವಿಯೂ ಉಲ್ಲೇಖಿಸುವುದಿಲ್ಲ. ಇವನು ಇನ್ನೂ ಯಾವ ಕಾವ್ಯ ಬರೆದಿದ್ದಾನೆಯೋ ಗೊತ್ತಿಲ್ಲ. ಇವನ ಜೀವನಚರಿತ್ರೆಯ ಯಾವ ಅಂಶಗಳೂ ತಿಳಿದುಬಂದಿಲ್ಲ. ದೇವನನ್ನೇ ಅನುಸರಿಸಿರುವ 'ಮರುಳಸಿದ್ಧೇಶ್ವರ ಸಾಂಗತ್ಯ'ಕಾರನಾದ ನಾಗಭೂಷಣನೂ ದೇವನ ಹೆಸರೆತ್ತುವುವುದಿಲ್ಲ.

## ಕಥಾಸಾರಾಂಶ

### ಸಂಧಿ ೧

ಗ್ರಂಥದ ಆರಂಭದಲ್ಲಿ ಶ್ರೀಗಿರಿಯ ಮಲ್ಲೇಶ, ವಿಘ್ನೇಶ, ವೀರಭದ್ರ, ಷಣ್ಮುಖ ಇವರ ಸ್ತುತಿಯಿದೆ. "ಸುಜ್ಞಾನ ಸನ್ಮತಿಯನಮೃತಗಳೆವೆರೆದ

ಸರ್ವಜ್ಞ ಸಮತೆಯನ್ನು ಕ್ಷಮೆದಮೆ ಶಾಂತಿಯನ್ನು ಕೊಡುವ" ನಿರುಪಮ ಮೂರ್ತಿ ಪರಶಿವನ ಅನುಜ್ಞೆಯನ್ನು ಪಡೆದು ಕವಿ ಕಾವ್ಯಾರಂಭಮಾಡಿದ್ದಾನೆ. ಹರಭಕ್ತರು, ಕಲ್ಯಾಣದ ಶರಣರು, ಅಲ್ಲಮ, ಅಜಗಣ್ಣ, ಹುಲ್ಲುಮಾರುವ ಶರಣ, ಬಾಹೂರ ಬೊಮ್ಮಣ್ಣ, ಕಲಕೇತಯ್ಯ, ಬಿಜ್ಜಯ್ಯ, ಗುಂಡುಬ್ರಹ್ಮಯ್ಯ ಹೆಂಡದ ಮಾರಿತಂದೆಗಳು, ಪಂಡಿತಾರಾಧ್ಯ, ಅಮರಗುಂಡದ ಮಲ್ಲಿನಾಥ ಇವರೇ ಮೊದಲಾದ ಶಿವಶರಣರ ಚರಣಕಮಲ ಪರಾಗದಲ್ಲಿ ಕವಿಯ ಮನೋ ಭೃಂಗವು ತಲ್ಲೀನವಾಗುತ್ತದೆ. ಪೂರ್ವಕವಿಗಳಾದ ಹರಿಹರ, ಮಲುಹಣ, ಬಾಣ, ಉದ್ಭಟ, ಕೆರೆಯ ಪದ್ಮರಸರನ್ನೂ ಕವಿಯು ಹೆಸರಿಸಿದ್ದಾನೆ. ಇತರ ವೀರಶೈವ ಕವಿಗಳ ಗುರಿಯನ್ನೇ ಹಿಡಿದು ಶಿವನನ್ನಲ್ಲದೆ 'ಅನ್ಯರನ್ನು ಹೊಗಳಿ' ನಾಲಗೆಯನ್ನು ಅಪವಿತ್ರಗೊಳಿಸಬಾರದು ಎಂದು ನುಡಿದಿದ್ದಾನೆ.

ಹೇಮವೃದಿಸಿದ ನಿಲಯ,ರಂಗು ಮಾಣಿಕದಟವಿಯಾದ ಮಹಾಗಿರಿಯು ಶೋಭಿಸಿತು. ಇದು ಅನೇಕ ತಪಸ್ವಿಗಳಿಗೆ ವಾಸಸ್ಥಾನವಾಗಿತ್ತು. ಅಲ್ಲಿ ನೆಲೆಸಿದ್ದ ತಪಸ್ವಿಗಳೆಲ್ಲರಲ್ಲಿ ಮುನಿಕುಲಕ್ಕೇ ಸೂರ್ಯನೋಪಾದಿಯಲ್ಲಿದ್ದ ಶಿಲಾ ದನು ಅನುದಿನವೂ ಶಿವನನರ್ಚಿಸುತ್ತ ಇದ್ದನು. ಆತನಿಗೆ ತಕ್ಕವಳಾದ ಸತಿ ಸುಪ್ರಭೆ.

ಒಂದು ಸಲ ಶಿವಾರ್ಚನೆ ಮಾಡುತ್ತಿದ್ದ ಸಮಯದಲ್ಲಿ ಸುಪ್ರಭೆಗೆ ರಜ ಸ್ವಲೆಯಾಗುವ ಕಾಲವೊದಗಿತು. ಅವಳ ಮುಖಭಂಗಿಯಿಂದ ಶಿಲಾದ ರಹಸ್ಯವನ್ನರಿತು ಕೋಪೋದ್ದೀಪಿತನಾಗಿ "ಎಲೆ ನೀರೆ, ಹರನ ಪೂಜೆಯನ್ನು ಮಾಡುವ ಸಮಯದಲ್ಲಿ ಕಳೆಗುಂದಿದವಳಾಗಿ, ಅಂಜಿ, ಆತನನ್ನು ಅರ್ಚಿಸು ವುದೇ ? ನೀನು ಈ ಪಾಪಕರ್ಮಗೈದುದಕ್ಕೆ ಹೊಲೆಜನ್ಮದಲ್ಲಿ ಜನಿಸು" ಎಂದು ಶಾಪವಿತ್ತನು. ಅದಕ್ಕೆ ಸುಪ್ರಭೆ "ಅದನ್ನು ಕಳೆದುಕೊಳ್ಳುವುದು ಹೇಗೆ ? ಏನಾದರೂ ಮಾರ್ಗವುಂಟೇ ?" ಎಂದು ಕೇಳಿದ್ದಕ್ಕೆ "ಉಂಟು. ಹರನೇ ಉಮೆಯ ಬಲವಂತದಿಂದ ಮರ್ತ್ಯಲೋಕದಲ್ಲಿ ಜನಿಸುವನು. ನೀನು ಭೂಲೋಕದ ಕುರುಗಲ್ಲೆಂಬ ಪಟ್ಟಣದ ಒಡೆಯನಾದ ಬಾಚಿಗೌಡನ ಸೇವಕ ನಾದ ಕುಲಹೀನನೋರ್ವನ ಹೊಟ್ಟೆಯಲ್ಲಿ ಜನಿಸು. ನಿನ್ನಲ್ಲಿ ಘನಮಹಿಮ ನಾದ ಓರ್ವಪುತ್ರನು ಜನಿಸುವನು. ಇದುವೆ ನಿನಗೆ ಸದ್ಯಃ ಫಲ" ಎಂದು ಉತ್ತರಿಸುತ್ತಾನೆ. ಮುನಿಯ ಆಜ್ಞೆಯ ಮೇರೆಗೆ ಸುಪ್ರಭೆ ಕಗ್ಗಲ್ಲಪುರಕ್ಕೆ

ಹೊರಡುತ್ತಾಳೆ. ಇದೇ ಮೇರೆಗೆ ಗುರ್ವಾಜ್ಞೆಯನ್ನು ವಿರೋಧಿಸಿದ **ಭೌತ್ಸ**ನೆಂಬ ಓರ್ವಶಿಷ್ಯ ಕಗ್ಗಲ್ಲಪುರದ **ಬಾಚಣಗೌಡನ** ಭೃತ್ಯ **ಕೊಗಿಮಾರನಾಗಿ** ಜನಿಸಲು ಕಳುಹಿಸಲ್ಪಟ್ಟನು.

## ಸಂಧಿ ೨

ಇತ್ತ ರಜತಾದ್ರಿಯಲ್ಲಿ ಪಾರ್ವತಿಯೊಂದಿಗೆ ಕುಳಿತ ಶಿವನು ಶೋಭಿಸಿದನು. ಆತನ ಓಲಗದಲ್ಲಿ ಸಕಲ ದೇವತೆಗಳೂ, ಋಷಿಮುಖ್ಯರೂ ಮಂಡಿಸಿದ್ದರು. ಈ ಸಂತೋಷದ ಸನ್ನಿವೇಶದಲ್ಲಿ ಭೃಂಗಿ ನಾಟ್ಯವಾಡುತ್ತ, ನಟನಾಚಾತುರ್ಯದಲ್ಲಿ ಶಿವನ ಮಹಿಮೆಯೆಲ್ಲವನ್ನೂ ತೋರುತ್ತ 'ಮಾಯಾ ಕೋಳಾಹಳ, ಮಾಯಾಮದ ತಿಮಿರಹರ, ಮಾಯಾಮೃದು ವಾದ್ಯದೊಳು ಭಂಗಿಸಿದ ನಿಃಕಾಯ, ಜೀಯ, ದೇವರ ದೇವ' ಎಂದು ಮುಕ್ತಕಂಠವಾಗಿ ಹೊಗಳಿದನು. ಇದನ್ನು ಕೇಳಿದ ಗಿರಿಜೆಗೆ ತಡೆಯದಾಯಿತು. 'ನಾನಿಲ್ಲದೆ ಶಿವನಿಲ್ಲ. ಅವನ ಶಕ್ತಿ ಪೂರ್ಣವಾದದ್ದೇ? ಮಾಯಾ ಕೋಳಾಹಳನೆಂಬ ಮಾತು ಹೇಗೆ ಸರಿಯಾದೀತು? ನಾನಿಲ್ಲದೆ ಸ್ಥಳವೇ ಇಲ್ಲ. ಮರುಳ ಭೃಂಗಿಯೇ ನೀನು ಹೀಗೆನ್ನಬಹುದೇ?' ಎಂದು ಕೇಳುತ್ತಾಳೆ. ಪಾರ್ವತಿಯ ಮಾತಿನ ಧಾಟಿ ಶಿವನಿಗೆ ಅರ್ಥವಾಯಿತು. ಅವನು ಭೃಂಗಿಯನ್ನು ತಿರಸ್ಕರಿಸಿ ಅವನನ್ನೂ, ಪುರಪ್ರಮುಖರನ್ನೂ ಕಳಿಸಿ ಹೀಗೆ ಹೇಳುತ್ತಾನೆ 'ಸಗುಣ, ನಿರ್ಗುಣ, ನಿರಾಧಾರ, ನಿರ್ಲೇಪ, ಜಗದ ಗಣನೆಯಿಲ್ಲದಪ್ರತಿಮ ನಿನ್ನ ಬಗೆಯುತ್ತಾನೆಯೇ? ಸಾಕು ಸಾಕು!' ಇದಕ್ಕೆ ಗಿರಿಜೆ: 'ನನ್ನ ಗುಣದಿಂದಲೇ ನಿನಗೆ ದೈವತ್ವವುಂಟಾಗಿರುವುದು. ನನ್ನಿಂದಲೇ ಗಿರಿಜೇಶನೆಂಬ ಹೆಸರಾದದ್ದು. ಗುಣನಿರವಯನು, ನಿರ್ಲೇಪನೆಂದರೆ ಅದೆಲ್ಲವೂ ನನ್ನದು. ನಿನ್ನ ಹೆಚ್ಚುಗಾರಿಕೆ ಏನು?' ಎಂದು ಕೇಳುತ್ತಾಳೆ. ಶಿವನಿಗೆ ಕೋಪ ಮಿತಿಮೀರುತ್ತದೆ. 'ಮರ್ತ್ಯಲೋಕದಲ್ಲಿ ಜನಿಸಿ ನಿನ್ನ ಶ್ರೀಕಾರವನ್ನೂ ಕೆಡಿಸಿ, ಭಂಗಿಸಿ, ನಾಸಿಕವನ್ನು ಕೊಯ್ದು ಕಾಕುಮಾಡುವೆ' ಎಂದು ಹೇಳಿ ಲೋಕಮಾತೆಯನ್ನು ಕಳುಹಿಸಲು ಸಿದ್ಧನಾಗಿ: 'ಕೊಲ್ಲಾಪುರದಲ್ಲಿರುವ ಕರಟನೆಂಬ ಅಸುರನ ಉದರದಲ್ಲಿ ಜನಿಸು' ಎಂದು ಹೇಳುತ್ತಾನೆ. ಆ ಮೇರೆಗೆ ಕೊಲ್ಲಾಪುರಕ್ಕೆ ಬರುತ್ತಾಳೆ ಗಿರಿಜೆ.

ಕೊಲ್ಲಾಪುರ ಅಸುರರ ತವರ್ಮನೆಯೆನಿಸಿ ಮೆರೆದಿತ್ತು. ಅದನ್ನು ಆಳುವ ಅರಸು ಪಾಪವೇ ಮೂರ್ತಿಗೊಂಡಂತಿದ್ದ **ಕರಟಾಸುರ.** ಈತನ ಸತಿ **ಮಾಯಾದೇವಿ.** ಈ ದಂಪತಿಗಳಿಗೆ ಪುತ್ರಿಯಾಗಿ ಗಿರಿಜೆ ಜನಿಸಿ, ಬಂಧುರವಾದ ಬಾಲ್ಯವನ್ನು ಕಳೆದು, ವಸಂತಮಾಸದ ವನಸಿರಿಯಂತೆ ನವಯೌವ್ವನಭರಿತೆಯಾದಳು. ಕರಟಾಸುರನು ಮಗಳಿಗೆ ಯುವರಾಜ ಪಟ್ಟವನ್ನೂ ಕಟ್ಟಿದನು. ಆ ಸಮಯದಲ್ಲಿ ಕೊಲ್ಲಾಪುರದಲ್ಲಿ ಭಾರೀ ದೈತ್ಯರ ಗುಂಪೇ ನೆರೆದಿತ್ತು. ವಿಚಿತ್ರಾಕಾರದವರೂ, ಭಯೋತ್ಪಾದಕರೂ ಆದ ನವಕೋಟಿ ಸಿದ್ಧರು ಊರ ಬಾಗಿಲಲ್ಲಿ ಕಲೆತಿದ್ದರು. ಇವರೆಲ್ಲ ಮಾಯಾದೇವಿಯ ಕಾಪಿಗೆ ಸಿದ್ಧರಾಗಿದ್ದರು. ಅನಳ ಪ್ರತಾಪ ಮಿತಿಮೀರಿ ಹೆಚ್ಚಾಗಿತ್ತು. ನರಸುರೋರಗಳೆಲ್ಲ ಭಂಗಕ್ಕೊಳಗಾಗಿದ್ದರು. ಅಲ್ಲದೆ 'ಮಾಯೆಗೆ ಇದಿರಾರುಂಟು?' ಎಂದು ಕಹಳೆಯನ್ನು ದಿಕ್ಕು ದಿಕ್ಕಿನಲ್ಲಿ ಊದಿಸಲಾಯಿತು. ಪುರಹರನಾದ ಶಿವನು ಇದನ್ನು ಕೇಳಿ ಚರಮೂರ್ತಿಯೋರ್ವನನ್ನು ಕರೆದು : 'ನೀನು ಮರ್ತ್ಯಲೋಕದಲ್ಲಿ ಮರುಳಸಿದ್ಧೇಶನಾಗಿ ಜನಿಸಿ, ಧರೆಯೊಳುಂ ಚರಿಸಿ, ಮಾಯೆಯ ಗೆಲ್ಲು. ನಾನು ನಿನಗೆ ಗುರುರೇವಣನ ರೂಪದಲ್ಲಿ ಬಂದು, ವರವೀಯುತ್ತೇನೆ' ಎಂದು ಹೇಳುತ್ತಾನೆ. ಆ ಮೇರೆಗೆ ಚರಲಿಂಗಮೂರ್ತಿಯು ಮರುಳಸಿದ್ಧರೂಪದಿಂದ 'ನರಲೋಕದ ಇರವು ಪುಣ್ಯದ ಬೀಡು' ಎಂದು ತಿಳಿದು ಬರುತ್ತಾನೆ.

ಈ ಸಂದರ್ಭದಲ್ಲಿ ಕವಿ ಈ ಅಧ್ಯಾಯದ ಪ್ರಥಮದಲ್ಲಿ ಹೇಳಿದ ಕತೆಯನ್ನು ಇಲ್ಲಿ ಸ್ಪಷ್ಟಪಡಿಸುತ್ತಾನೆ.

ಆದಿಯಲ್ಲಿ ಶಿಲಾದಮುನಿಗೆ ಆತನ ಧರ್ಮಪತ್ನಿ ಸುಪ್ರಭೆಯ ಗರ್ಭದಲ್ಲಿ ಓರ್ವ ಮಗನು ಜನಿಸಿದ್ದನು. ಆತನೇ **ವೃಷಭೇಶ್ವರ.** ಸುಪ್ರಭೆ ಪತಿಯಿಂದ ಶಾಪಗ್ರಸ್ತಳಾಗಿ ಮರ್ತ್ಯಲೋಕಕ್ಕೆ ಬಂದು ಕಗ್ಗಲ್ಲಪುರದಲ್ಲಿ ಓರ್ವ ಮಾದಿಗನ ಹೆಂಡತಿಯಾಗಿದ್ದಳು. **ಈ ಮಾದಿಗನೇ ಕೂಚಿಮಾರನೆಂಬವನು.** ಇವನು ಕಗ್ಗಲ್ಲಪುರದೊಡೆಯನಾದ **ಬಾಚಿಗೌಡನ ಭೃತ್ಯ.** ಇವರ ಪುತ್ರನಾಗಿಯೇ ಮರುಳಸಿದ್ಧೇಶ್ವರನು ಜನಿಸುವುದು.

ಒಂದು ಸಲ ನಿಗಮಗೋಚರನಾದ ಶಿವನು ಕೂಚಿಮಾರನ ಹತ್ತಿರ ಬಂದು 'ಮುಂದೆ ರಾಚಮಲ್ಲಣ್ಣನ ಯಾತ್ರೆ ಬರಲಿದೆ. ಸದ್ಯ ನಮಗೆ

ಭೂಚಕ್ರವೆಲ್ಲವನ್ನೂ ಸಂಚರಿಸುವ ಮನಸ್ಸಾಗಿದೆ. ಅಲ್ಲದೆ ಶ್ರೀಗಿರಿಗೆ ಪ್ರಯಾಣ ಬೆಳೆಯಿಸಬೇಕಾಗಿದೆ. ಆದ್ದರಿಂದ ನಮ್ಮ ಪಾದಗಳಿಗೆ ಎರಡು ಪಾದುಕೆಗಳಾಗ ಬೇಕು. ಬೇಗನೆ ಮಾಡಿಕೊಡಬೇಕು' ಎಂದು ಕೇಳುತ್ತಾನೆ. ಕೂಚಿಮಾರನ ಉದ್ಯೋಗ ಹಗ್ಗ, ಹುರಿ, ನೇಣು, ಮಿಣಿ ಪಾದುಕೆಯ ಮಾಡುವುದೇ ಆಗಿತ್ತು. ಆತನು ಈ ವರ್ತಮಾನವನ್ನು ತನ್ನ ಸತಿಗೆ ತಿಳಿಸುತ್ತಾನೆ. ಅವಳಿಗೆ ಅಪರಿಮಿತ ಸಂತೋಷ. 'ಶಿವನಿಗೆ ಪಶುಚರ್ಮದಿಂದ ಮಾಡಿದ ಹಾವುಗೆಯ ಕೊಟ್ಟರೆ ಆತನಿಗೆ ತೃಪ್ತಿಯಾದೀತೇ ? ಮಾನವರ ಚರ್ಮದಿಂದ ಮಾಡಿದ ಹಾವುಗೆಯನ್ನು ಆ ಮಹಾಮಹಿಮಗರ್ಪಿಸುವುದು ಲೇಸು' ಎಂದು ಸೂಚಿಸುತ್ತಾಳೆ. ಮಾರನಿಗೆ ಯೋಚನೆ ಬಗೆಹರಿಯಲಿಲ್ಲ. ಆತನು ಚಿಂತಾಕ್ರಾಂತನಾಗುತ್ತಾನೆ. ಸೂಚನೆಯನ್ನಿತ್ತ ಸತಿಯೇ ಪತಿಯನ್ನು ಚೇತರಿಸಲು ಈಗಲೂ ಮುಂದೆ ಬರಬೇಕಾಯ್ತು. ಅವಳು ಧೈರ್ಯದಿಂದಲೂ, ಭಕ್ತ್ಯತಿಶಯದಿಂದಲೂ ಮುಂದೆ ಬಂದು 'ನನ್ನ ಮೊಲೆಗಳೆರಡನ್ನೂ ಕೊಯ್ದು ಪಾದುಕೆಯ ಮಾಡಿಕೊಡುವುದು' ಎಂದು ಹೇಳಿದ್ದನ್ನು ಕೇಳಿ, ಮಾರ ಧೈರ್ಯ ತಂದುಕೊಂಡು, ಹಾಗೆ ಮಾಡುತ್ತಾನೆ. ಶಿವ ಬಂದು 'ಪಾದುಕೆಯಾದುವೆ ಮಗನೆ ?' ಎಂದು ಕೇಳುವುದೊಂದೇ ತಡ ಸತಿಪತಿಗಳೊಂದಾದ ಮನಸ್ಸಿನಿಂದ ಮನಸಿಜಹರನಿಗೆ ಪಾದುಕೆಯ ಮೆಟ್ಟಿಸುತ್ತಾರೆ. ಶಿವನಿಗೆ ತೃಪ್ತಿಯಾಗುತ್ತದೆ. ಅದಕ್ಕೆ ಪ್ರತಿಯಾಗಿ ಭಕ್ತರಿಗೆ ಬೇಕಾದ ವರವನ್ನು ಕೇಳಿಕೊಳ್ಳಲು ಸೂಚಿಸುತ್ತಾನೆ. ಆಗ ಆ ದಂಪತಿಗಳು 'ನಮಗೆ ಮಕ್ಕಳಾಗಬೇಕು' ಎಂದು ಕೇಳುತ್ತಾರೆ. 'ಮಕ್ಕಳಾದರೆ ನಿಮಗೆ ದುಃಖವಹುದೆಲೆ ಮಗನೆ ; ಅದರಿಂದ ನಿಮಗೆ ಮರಣಕಾಲ ; ಆದ್ದರಿಂದ ಮಿಕ್ಕ ಪದವನ್ನು ಕೊಡುತ್ತೇನೆ ; ಸೌಖ್ಯದಿಂದ ಬಾಳಿರಿ' ಎಂದು ಶಿವನು ಎಷ್ಟು ಪರಿಯಾಗಿ ಹೇಳಿದರೂ ಅವರು ಕೇಳಲಿಲ್ಲ. 'ಮರಣ ಬಂದರೂ ಬರಲಿ ; ನೀನು ನಮಗೆ ಮಗನಾಗು' ಎಂದು ಕೇಳುತ್ತಾರೆ. ಆಗಲೆಂದು ಭರವಸೆಕೊಟ್ಟು ಅಲ್ಲಿಂದ ಬೀಳ್ಕೊಳ್ಳುತ್ತಾನೆ.

ನಿಷ್ಠೆಯುಳ್ಳ ಸುಪ್ರಭೆಗೆ ಸುಗರ್ಭದ ಚಿನ್ಹೆಗಳೆಲ್ಲ ತೋರುತ್ತ ಬರುತ್ತವೆ. ದಿನ ತುಂಬಿದಮೇಲೆ ಅಮೃತಕಳೆಯುಳ್ಳ ಮೂಲೋಕಧರನೇ ಬಾಲವಿಗ್ರಹ ರೂಪದಲ್ಲಿ ಜನಿಸುತ್ತಾನೆ. ಸುಪ್ರಭಾದೇವಿ ತರಳನನ್ನು ನೋಡಿ ಪರಮಾನಂದ

ಭರಿತಳಾಗುತ್ತಾಳೆ. ಆ ಶಿಶುವನ್ನು ಸತ್ಪಥದಲ್ಲಿರಿಸಿ ತಾನು ಭೂಲೋಕಕ್ಕೆ ಬಂದ ಕಾರ್ಯ ಪೂರೈಸಿತೆಂದು ಶಿಲಾದನ ಹತ್ತಿರ ಹೋಗುತ್ತಾಳೆ. ಆಗ ಶಿಲಾದಮುನಿಗೂ ಸಂತೋಷವಾಯಿತು. ಅವಳನ್ನು ಪರಿಪರಿಯಿಂದ ಸಂತೈಸಿ, ಮುನ್ನಿನ ಆವಾಸವನ್ನು ಕೊಟ್ಟು, ತಾನು ಗಿರಿಶಿಖರಾಗ್ರದಲ್ಲಿ ತಪಸ್ಸಿನಲ್ಲಿ ಲೀನನಾದನು.

## ಸಂಧಿ ೩

ಹುಟ್ಟಿದ ಮಗುವಿಗೆ ಧರಣೀತಲವೇ ತೊಟ್ಟಿಲಾಯ್ತು. ತೊಟ್ಟಿಲನ್ನು ಕಟ್ಟಲು ಸೂರ್ಯರಶ್ಮಿಗಳೇ ಹಗ್ಗವಾದುವು. ಅದನ್ನು ಎಳೆದು ತೂಗಲು ಮಾರುತನೇ ನಿಂತನು. ಸುರಧೇನು ಬಂದು ಪಾಲ್ಗೊಟ್ಟು ಹೋಗುವುದು. ಮರುಳ್ಗಳ ತಂಡವೇ ಮಗುವಿನೊಡನೆ ಆಡಲು ಆಟಗಾರರಾದರು. ಈ ರೀತಿ ೨೧ ದಿನಗಳು ಕಳೆದವು. ಮಗುವಿನ ವೈಕಾಂತಿ ಕೊಂಚವೂ ಕುಂದಲಿಲ್ಲ. ಇಷ್ಟೇ ಅಲ್ಲ ತನುಕಾಂತಿ ದಿನೇದಿನೇ ಹೆಚ್ಚುತ್ತಲೇ ಇದ್ದಿತು. **ಬಾಚಣ್ಣ ಗೌಡನು** ಆ ಮಗುವನ್ನು ತಂದು ತನ್ನ ಮಡದಿ ಮಲ್ಲಮ್ಮನಿಗೆ ಕೊಡುತ್ತಾನೆ. ಅವಳು ಆಶ್ಚರ್ಯದಿಂದ: 'ಎಲ್ಲಿಯ ಮಗುವಿದು? ಭೂತ ಪ್ರೇತದಧಿಪತಿಯೋ ಇದು?' ಎಂದು ಪತಿಗೆ ಪ್ರಶ್ನಿಸುತ್ತಾಳೆ. ಸಂಧ್ಯಾಕಾಲವಾಗುತ್ತಲೇ ಮರುಳನ ಓಲಗಕ್ಕೆಂದು ತುಂಬುರ ನಾರದರ ಸಹಿತ ಸುರಕಿನ್ನರರು ಬಂದರು. ದೇವಾಧಿದೇವತೆಗಳೆಲ್ಲ ನೆರೆದರು. ಮೊರೆಯುವ ವಾದ್ಯಧ್ವನಿಗಳ ಮೊಳಗು ಸ್ಪಷ್ಟವಾಗಿ ಕೇಳಬಂದಿತು. ಸೂರ್ಯೋದಯವಾಗುತ್ತಲೇ ಮಗು ಹಾ ಎಂದು ಆಡುತ್ತಲಿದೆ. ಇದೆಲ್ಲವನ್ನು ಕಂಡ ಮಲ್ಲಮ್ಮನಿಗೆ ಸಂಶಯ ನಿವಾರಣೆಯಾಗುತ್ತದೆ. ಅವಳು ಮಗುವನ್ನು ಅತ್ಯಂತ ಅಕ್ಕರೆಯಿಂದ ಸಾಕುತ್ತಾಳೆ. ಮಗುವಿಗೆ ಅನ್ನಪ್ರಾಶನವಾಗುವುದೇ ತಡ ಬಾಚಿಗೌಡನಿಗೆ ಧನ ಧಾನ್ಯ ಸಮೃದ್ಧಿಯಾಗಿ ಬೆಳೆಯುತ್ತ ಹೋಗುತ್ತದೆ. ಬಾಚಿಗೌಡನಿಗೋ ವಿಪರೀತ ಸಂಭ್ರಮ. ಇದೆಲ್ಲ 'ಮಗು ಬಂದ ಸುಮುಹೂರ್ತದ ಫಲ' ವೆಂದು ಆತನ ಅಭಿಮತ. ಮಗು ಬೆಳೆಯುತ್ತ ಬೆಳೆಯುತ್ತ ಐದಾರು ವರ್ಷಗಳನ್ನು ಕಳೆದು ೭ನೆಯ ವರ್ಷದಲ್ಲಿ ಅಡಿಯಿಟ್ಟಿರುತ್ತದೆ. ಗೌಡ ತನ್ನ ಮಗನಿಗೆ ತನ್ನಲ್ಲಿ ಅಭಿವೃದ್ಧಿಯನ್ನು ಹೊಂದಿದ 'ಗೋವೃಂದವನ್ನು ಕಾಯಿ' ಎಂದು ಹೇಳುತ್ತಾನೆ. ಕೂಡಲೇ ಮಗನು ಕರಿಯ ಕಂಬಳಿ, ಕಲ್ಲಿ, ಬುತ್ತಿ ಸಮೇತ

ನಾಗಿ, ಕೈಯಲ್ಲಿ ಕೋಲು ಹಿಡಿದು ಸಿದ್ಧನಾಗುತ್ತಾನೆ. ಅಲ್ಲದೆ ತಂದೆಯ ಹತ್ತಿರ ಬಂದು 'ಕರುಗಳನ್ನು ಕೂಡಿಸಿ ಕೊಡು' ಎಂದು ಕೇಳುತ್ತಾನೆ. ಬಾಚಿಗೌಡ ತುರುಮಂದೆಯೊಳಗಿದ್ದ ಕರುಗಳನ್ನು ಕೂಡಿಸಿ ಕೊಡುತ್ತಾನೆ. ಕರುಗಳನ್ನು ಕಾಯುತ್ತೇನೆಂಬ ಹೆಸರಿನಿಂದ ಮರುಳ ಓರಿಗೆಯ ಬಾಲಕರೊಂದಿಗೆ ಚಂಡು, ಹೊಣೆಗೋಲು, ಗಜ್ಜುಗದಾಟ, ಚಿಣ್ಣಿಕೋಲು, ಹರಿಗೋಲು ಮೊದಲಾದ ಆಟಗಳನ್ನಾಡುವನು.

ಒಂದು ಸಲ ಮರುಳನು ಕರುಗಳ ಸಮೂಹವನ್ನೇ ಕಲ್ಲಿನ ಒಂದು ಇಕ್ಕಟ್ಟಾದ ಪ್ರದೇಶದಲ್ಲಿ ನಿಲ್ಲಿಸಿ, ಇರುಬಿನ ಸಮೂಹದಲ್ಲಿ ನೂಕಲು, ಅವುಗಳ ಕಾಲು ಮುರಿದು ಮುಖ ವಡೆದುವು. ಎಲ್ಲ ಕರುಗಳೂ ಸತ್ತಂತೆ ಮೂರ್ಛೆ ಹೊಂದಿದವು. ಇದನ್ನು ಕಂಡು ಮರುಳನು ಕುಣಿದಾಡಿದನು. ಮರುಳನು ಕರುಗಾಯ್ವ ನೆಪದಲ್ಲಿ ತರುಣರೆಲ್ಲರನ್ನೂ ಕೆಸರಿನಲ್ಲಿ ನೂಕಿ, ತನ್ನ ಕೊರಳಿಗೆ ಹಾವನ್ನು ಸುತ್ತಿಕೊಂಡು, ಕರುಗಳೆಲ್ಲವನ್ನು ಬೆಳೆಯಿಂದ ಸಮೃದ್ಧವಾದ ಹೊಲಕ್ಕೊಯ್ದು, ಬೆಳೆಯೆಲ್ಲವನ್ನು ತಿನ್ನಿಸಿ, ಅವುಗಳ ಕಾಲಕಟ್ಟಿ. ಬಾಯಿಯಲ್ಲಿ ಧೂಳನ್ನು ಹೊಯ್ದು, ಅವುಗಳಿಗೆ ಕೊಡಬಾರದ ಹಿಂಸೆಯನ್ನು ಕೊಟ್ಟನು. ಈ ಧೂರ್ತತನದ ಅರ್ಥ ಇತರ ಕರುಗಾಯುವ ಹುಡುಗರಿಗಾಗಲಿಲ್ಲ. ಅವರೆಲ್ಲ ಕಂಗೆಟ್ಟು ಓಡಿ ತಮ್ಮ ಜನರಿಗೆ ತಿಳಿಸಿದರು. ಈ ವರ್ತಮಾನ ಬಾಚಿಗೌಡನಿಗೂ ಹೋಯಿತು. ಗೌಡನು ಹಾಗೆ ದೂರಿದವರೊಡನೆ ಬಂದು ನೋಡಲು ತರುಣರೆಲ್ಲರೂ ಎಂದಿನಂತೆ ಸುಖದಲ್ಲಿರುವುದು ಕಂಡು ಬಂದಿತು. ಇದನ್ನು ಕಂಡು ಎಲ್ಲರಿಗೂ ಆಶ್ಚರ್ಯವೇ ಆಶ್ಚರ್ಯ. ಕುಂದನಾಡಿದವರ ಬಾಯಿಯಲ್ಲಿ ಹುಳುಗಳು ಬೀಳುವಂತಾಯಿತು. 'ಇಂದು ಮೊದಲಾಗಿ ಕೊಡುವ ಸಕಲ ಕರುಗಾವೆನೆಂದು' ಭಾಷೆಯ ಮಾಡಿದನು. ನಿಶ್ಚಯಿಸಿದಂತೆ ಕರುಗಾವ ಮಂದಿಯೆಲ್ಲವನ್ನೂ ಅಡವಿಗೆ ತಂದು ಅವರ ಬೇಟೆಯಾಡಿ ಕೊಂದು ಇಷ್ಟಕ್ಕೆ ಸಾಲದೆ ಬೆಳೆದು ನಿಂತಿದ್ದ ಹೊಲದ ಬೆಳೆಯೆಲ್ಲವನ್ನೂ ಕರುಗಳಿಂದ ಹಾಳು ಮಾಡಿಸಿದನು. ತಾನು ಮಾಡಿದ ಈ ವರ್ತಮಾನ ಊರ ಜನಕ್ಕೆ ತಿಳಿಯಲೆಂದು ಒಬ್ಬನನ್ನು ದೂರು ಹೇಳಲು ಕಳುಹಿಸಿದನು. ಜನರೆಲ್ಲ ಬಂದು ನೋಡುತ್ತಾರೆ. ಕರುಗಾಹಿಗಳೆಲ್ಲ ಮೌನ ಮುದ್ರೆಯಲ್ಲಿ ಬಿದ್ದಿರುವುದನ್ನು ಕಂಡರು. ಅವರ ಕೈಕಾಲ ಶಕ್ತಿ ಕುಂದಿ ಹೋಯಿತು. ಗಾಬರಿಯಾಗಿ

ನಿಟ್ಟುಸುರು ಬಿಡುತ್ತ, ಆ ಜನವೆಲ್ಲ ಅರಸನಲ್ಲಿ ಬಂದು ಮೊರೆಯಿಟ್ಟರು. ಈ ರೀತಿ ರಾಜನಿಗೆ ದೂರು ಹೇಳಲು ಬಂದವರಲ್ಲಿ—ಕುಂಚಟಿಗರಾಮ, ಕುಡಿಯೊಕ್ಕಲಿಗ ಮುದ್ದಯ್ಯ, ಪಂಚಮರ ಪರಮಯ್ಯ, ಪಡಿಹಾರಿ ಬಸವಣ್ಣ, ಕಂಚುಗಾರ ಶಿವ, ಕರಿಕುಲದ ಮಹದೇವ, ಅಂಚಕಟ್ಟುವ ಶರ್ಮ, ವಂಚನೆಯ ಮಲ್ಲ, ಚೋರವಿದ್ಯದ ಮಾದ, ಹಂಜ ಹಾಡುವ ಚಕ್ರಿ, ಕುಲಹೀನ ಚೆನ್ನ ಮೊದಲಾದವರು ಮುಖ್ಯರಾಗಿದ್ದರು. ಇದನ್ನು ಕೇಳಿದ ಅರಸು ಗಲ್ಲದ ಮೇಲೆ ಕೈಯಿಟ್ಟುಕೊಂಡು ಆಶ್ಚರ್ಯಚಕಿತನಾಗಿ 'ಬಾಚಣನನ್ನು ಹಿಡಿದು ತಂದು ಕಲ್ಲುಗಾಣದಲ್ಲಿ ಹಾಕಿ ಸುತ್ತಿರಿ' ಎಂದು ಭಿಲ್ಲರಿಗೆ ಆಜ್ಞೆ ಮಾಡುತ್ತಾನೆ. ಮರುಕ್ಷಣದಲ್ಲಿಯೇ 'ಸಾಧುಗಳಿಗೆ ಇದು ಸಲ್ಲದು' ಎಂದು ವಿವೇಕವನ್ನು ತಳೆದು ಅರಸು ಪುರಜನರೆಲ್ಲರೊಂದಿಗೆ ಅರಣ್ಯಕ್ಕೆ ಹೋಗಿ ನೋಡಲು ತರಳರೆಲ್ಲರೂ ಸುಖಸಂತೋಷದಲ್ಲಿ ಆಡುತ್ತಿದ್ದುದು ತೋರಿತು. ತಮ್ಮ ತಮ್ಮ ಮಕ್ಕಳನ್ನು ಕರೆದು ಆದ ಸಮಾಚಾರ ಅವರವರ ಹಿರಿಯರು ಕೇಳಲು 'ನಾವು ದುಃಖ ಭಯವೆಲ್ಲವನ್ನೂ ಕಳೆದುಕೊಂಡು ಬಂದೆವು. ನಮ್ಮೆಲ್ಲರನ್ನೂ ರಕ್ಷಿಸುವ ಮರುಳೇಶ ನಮ್ಮನ್ನು ಎಂದಾದರೂ ಕೊಲ್ಲುವನೇ? ಎಂಥ ಮಾತಿದು?' ಎಂದು ಅವರು ಉತ್ತರಿಸುತ್ತಾರೆ. ಇದರ ಜೊತೆಗೆ ಹೊಲದ ಬೆಳೆ ಹಾಳಾದ ವಿಷಯವನ್ನು ಹಿರಿಯರು ಎತ್ತಿದಾಗ ಆ ತರಳರು 'ಇದೂ ಕೂಡ ಸುಳ್ಳು. ಬನ್ನಿ ನಮ್ಮೊಡನೆ' ಎಂದು ಹೇಳಲು ಜನವೆಲ್ಲ ಹೊಲದೆಡೆಗೆ ಬಂದು ನೋಡುತ್ತಾರೆ. ನಳನಳಿಸಿ ಬೆಳೆದ ಫಲರಾಶಿ ಅವರ ಕಣ್ಣು ಕೋರೈಸುವಂತೆ ಬೀಗಿ ನಿಂತಿದೆ. ಸತ್ತ ಮಾತು ಅಸತ್ಯವಾಯಿತು. ಬೆಳೆ ಹಾಳಾಯಿತೆಂಬ ಮಾತು ಬೀಳಾಯಿತು. ದೂರು ಹೇಳಿದ ಜನರ ಮುಖ ಭಂಗವಾಯಿತು. ಅರಸು ಊರಿಗೆ ಹಿಂದಿರುಗಿ ಬಾಚಣಗೌಡನನ್ನು ಕರೆಯಿಸಿ ವಿನಯಪರನಾಗಿ ಜನರಾಡಿದ ಮಾತೆಲ್ಲ ಸಟೆಯೆಂದು ಸೂಚಿಸುತ್ತಾನೆ. ಒಳ್ಳೆಯ ಮಾತಿನಲ್ಲಿ ಎಲ್ಲ ಜನರನ್ನೂ ಅವರ ತನಯರನ್ನೂ ಕಳುಹಿಸಿಕೊಟ್ಟು ಮರುಳನೊಡನೆ ತೃಣಜಲಂ ಪಿರಿದಾದ ಸ್ಥಳಕ್ಕೆ ಬರುತ್ತಾನೆ. ಇತ್ತ ಕಲ್ಲವುಗಳ ವಿವಾದವನ್ನು ಸಾಮ್ಯದೊಳು ತಿಳಿದುಕೊಂಡು ಮರುಳ ಮಲ್ಲಿಕಾರ್ಜುನ ಲಿಂಗದಲ್ಲಿ ಐಕ್ಯನಾಗುತ್ತಾನೆ. ಪಲ್ಲಕ್ಕಿ ಏರಿ, ತರಳರಿಂದ ಅದನ್ನು ಹೊರಿಸಿಕೊಂಡು ಎಲ್ಲ ಸ್ಥಳಗಳಲ್ಲಿ ತಿರುಗಿ ಬಂದು ತಳಿರ್ವನವನ್ನು ಪ್ರವೇಶಿಸಿ ಚಿಗುರು

ತ್ತಿದ್ದ ವೃಕ್ಷಗಳ ನೆಳಲ ತಂಪಿನಲ್ಲಿ ಬೀಡುಬಿಟ್ಟನು. ಅಲ್ಲಿಯೊಂದು ಪಲ್ಲಲತ ಆಶ್ರಮವೇ ಆಯಿತು. 'ಎಲ್ಲ ದೇವರ ದೇವನಿಳಿದುದೇ ಕ್ಷೇತ್ರವು.' ಹೀಗೆ ಮರುಳನು ಇಳಿದ ಸ್ಥಾನವು **ಪಲ್ಲವಕಟ್ಟೆ** ಎಂಬ ಪುರವಾಗಿ ಮೆರೆಯಿತು. ತರಳರೆಲ್ಲರೂ ಕೂಡಿ ಮಸಕದಿಂದ ಸಂತೋಷದಿಂದ ಆಡುತ್ತಿರಲು ಅಲ್ಲಿ **ಮಸಣಿಯಕಟ್ಟೆಯು** ಸಲ್ಲಲಿತ ಪುರವಾಗಿ ಮೆರೆಯಿತು. ಈ ಪುರದಲ್ಲಿ **ಮಲ್ಲಗೊಂಡ** ಮತ್ತು **ಮರುಳಗೊಂಡ**ರೆಂಬ ಒಕ್ಕಲಿಗರು ಎಳ್ಳುಕಾಯಿಗಳನ್ನು ಹರಹಿಕೊಂಡು ಹೊಡೆಯೆಳ್ಳನುದುರಿಸುತ್ತಿದ್ದರು. ಇದನ್ನು ಕಂಡ ಮರುಳ 'ಒಂದು ಹೊಡೆ ಎಳ್ಳ ಕೊಡಿ' ಎಂದು ಅವರನ್ನು ಕೇಳಲು ಅವರು ಕೊಡಲಿಲ್ಲ. ಮರುಳನ ಮನ ನೊಂದಿತು. ಜನ್ಮಾಂತರಲ್ಲಿ ಪಾಪಕರ್ಮ ವೆಸಗಿದ ಮೂಢರಿಗೆ, ಶಿವಧರ್ಮದ ಮಹತ್ತು ತಿಳಿಯದ ಅಜ್ಞಾನಿಗಳಿಗೆ, ತನ್ನ ಮಹಿಮೆಯನ್ನು ತೋರಬೇಕೆಂದು ಬಯಸಿ 'ಹೊಡೆ ಎಳ್ಳ ಕೊಡದಿದ್ದರೂ ಹೋಗಲಿ, ಕೊಡಹಿದ ಕಡ್ಡಿಯನ್ನಾದರೂ ಕೊಡುತ್ತೀರಾ?' ಎಂದು ಕೇಳುತ್ತಾನೆ. ಅವರು 'ಆಗಲಿ' ಎಂದು ಕಡ್ಡಿಯನ್ನು ಕೊಟ್ಟರು. ಕೊಡಹಿದ ಕಡ್ಡಿಯನ್ನೇ ತಂದು ಒಂದು ತಾಣದಲ್ಲಿ ಪುನಃ ಕೊಡಹಲು ಅಪರಿಮಿತವಾದ ಎಳ್ಳರಾಶಿಯೇ ಅಲ್ಲಿ ನಿರ್ಮಾಣವಾಯಿತು.

ಈ ಮೇರೆಗೆ ಎಳ್ಳ ಪವಾಡವನ್ನು ಗೆದ್ದು 'ಪಿಂತವರು ಪೇಳ್ದ ಗೌಡನ ಋಣವನುತ್ತರಿಸಿ' ಮುಂದೆ ಬರುತ್ತ, ಒಂದು ಅರಣ್ಯವನ್ನು ಕಂಡನು. ಈ ರಮ್ಯವಾದ ಬೀಡಿನಲ್ಲಿ ಕರುಗಾಯ್ವ ತರಳರು ಆಟವಾಡುತ್ತಿರುತ್ತಾರೆ. ಇವರೊಂದಿಗೆ ಮರುಳನೂ ಆಟವಾಡುವುದರಲ್ಲಿ ಏಕತಾನವಾಗಿ ಬಿಡುತ್ತಾನೆ. ಈ ರೀತಿ ಆಟ ಸಾಗಿರುವಾಗ ಮರುಳಗೊಂಡನು ಮಲ್ಲಗೌಡ ಮದುವೆಗೆಂದು, ಸಿದ್ಧವಾಗಿ ಎರಡು ಬಂಡಿಯ ತರಿಸಿ, ಕರಿ ಎತ್ತುಗಳನ್ನು ಹೂಡಿ, ಅವುಗಳನ್ನು ಹೊಡೆದುಕೊಂಡು ಸಾಗಿ ಕಾಂತಾರ ಮಧ್ಯದಲ್ಲಿ ಬಂದು, ಮರಗಳನ್ನು ತರಿದು ತಂದು, ಬಂಡಿಯ ಮೇಲೆ ಹೇರಿ, ನಂತರ ಆಟದಲ್ಲಿ ಲೀನರಾಗಿದ್ದ ತರಳರ ಸಮೀಪಕ್ಕೆ ಬಂದು 'ನಮಗೆ ಹಸಿವೆಯಾಗಿದೆ. ಹತ್ತಿರದಲ್ಲಿಯೇ ಹರಿಯುತ್ತಿರುವ ಕೊಳದ ತೀರಕ್ಕೆ ಹೋಗಿ, ಶಶಿಧರನ ಪೂಜಿಸಿ, ಬುತ್ತಿಯ ಉಂಡು ಬರುತ್ತೇವೆ' ಎಂದು ಹೇಳಲು ಅವರ ಹಸಿವು ತೃಷೆಗಳು ಹೋದವು.

ಆದರೆ ಎತ್ತುಗಳು ಮಾತ್ರ ಮಾಯವಾದುವು. ಇವರು ಗಾಬರಿಯಾಗಿ ಎತ್ತುಗಳಿಗಾಗಿ ಹುಡುಕಹತ್ತಿದರು.

ಬಹಳ ಹೊತ್ತು ಕಳೆಯಿತು. ಕತ್ತಲೂ ಆಯಿತು. ಬಂಡಿ ಮಾತ್ರ ಅವರಿಗೆ ಸಿಕ್ಕಿತು. ಎತ್ತುಗಳನ್ನು ಹುಡುಕಿ ಬೇಸತ್ತ ಅವರು ಮರುಳನನ್ನು ಕರೆದು ಅಲ್ಲಿ ಕಾವಲಿಗಿರಿಸಿ ಪುರದತ್ತ ನಡೆದರು. ಬೆಳಗಾಗುತ್ತಲೇ ಮರುಳನು ಎತ್ತು ಬಂಡಿಗಳನ್ನು ಸಂಧಿಸಿ, ಒಂದು ಕಡೆಗೆ ಒಂದು ಎತ್ತು ಇನ್ನೊಂದು ಕಡೆಗೆ ತಾನು ಹೀಗೆ ಪುರದ ಹತ್ತಿರ ಬಂಡಿಯನ್ನು ತಂದುಬಿಟ್ಟನು. ಜನವೆಲ್ಲ ಬಂದ ಬಂಡಿಯ ನೋಡಿ ಆಶ್ಚರ್ಯಪಟ್ಟರು. ಒಬ್ಬನೇ ಒಬ್ಬನಾದ ಮರುಳ ಅಂತಹ ಘನವಾದ ಬಂಡಿಯನ್ನು ತಂದದ್ದು ಸಾಮಾನ್ಯವಲ್ಲ; ಅದು ಮಹಾ ಸಾಹಸದ ಕಾರ್ಯ ಎಂದು ಕೊಂಡಾಡಿದರು.

ಇನ್ನೊಂದು ಸಲ ಪುರಜನರೆಲ್ಲ ಯೋಚಿಸಿ 'ಬಿತ್ತಿದ ಬೆಳೆ ಅತ್ಯಂತ ಹುಲುಸಾಗಿ ಬರಬೇಕು. ಅದಕ್ಕೆ ಮಾರಿಯ ಮಾಡಬೇಕು. ಅಂದರೆ ಜನಕ್ಕೆ ಬಹಳ ಒಳ್ಳೆಯದು' ಎಂದು ಬಾಚಣಗೌಡನ ಹತ್ತಿರ ಬಂದು ಹೇಳಿದರು. ಅತನೂ ಮಾರಿಯ ಮಾಡಲು ಒಪ್ಪಿಕೊಂಡು ಹರುಷವ ತಾಳಿ ಕತ್ತಲೆಯ ಹೊತ್ತಿನಲ್ಲಿ ಮಾರಿಗೆ ಮೀಸಲನು ಕಟ್ಟಿ 'ಸತ್ಯಳೇ ಸಲಹು' ಎಂದು ಬೇಡಿಕೊಂಡನು. ಮಾಯೆಯ ಅಪಾರಶಕ್ತಿಯನ್ನು ಆತ ಅರಿತವನಾಗಿದ್ದ. ಅವಳಿಗೆ ಕುರಿಕೋಳಿಗಳು, ಊರ ಕೋಣಗಳು ಮೀಸಲಾಗಬೇಕೆಂದೂ ತಿಳಿದಿತ್ತು. ಜೊತೆಗೆ ದೇವಿಯ ಮನಸ್ಸನ್ನು ತೃಪ್ತಿಪಡಿಸಲೋಸುಗ ತೋರಣದಿಂದಲಂಕೃತವಾದ ಚಪ್ಪರ, ಚೌಕದ ಸಾಲು ಶೃಂಗಾರಪೂರ್ಣವಾಗಿ ಸಿದ್ಧವಾಗಿದ್ದುವು. ಉಘೋ ಎನ್ನುವ ಸ್ತ್ರೀಯರು ಸಜ್ಜಾಗಿದ್ದರು. 'ಬ್ರಾಹ್ಮಿ, ಮಾಹೇಶ್ವರಿ, ಸೌಕುಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿ, ದುರ್ಗೀ ಬಾ, ಬಾ! ಮಾನ್ಯೆ' ಎಂಬವರು ಎಚ್ಚತ್ತು ಬಂದರು. ಭೂತ ಭೇತಾಳಗಳು ನೆರೆದುವು. ಕರ್ಮಕರ್ತೃಗಳೆಲ್ಲ ದೇವಿಯ ಪೂಜೆಯನ್ನು ಯಥಾವಿಧಿಯಾಗಿ ಮಾಡಿ ಹೊಗಳಿದಾಗ ಸುಮ್ಮಾನದಿಂದ ಚೌಡಿಕೆಯ ಜೋಗಿಣಿಯು ಬಂದನಂತರ **ಮಹಾಮ್ಮಾಯಿ** ಬಂದಳು. ಪ್ರಜಾಕೋಟಿಯ ಸಂತಸಕ್ಕೆ ಎಲ್ಲೆ ಮೀರಿತು. ಬಂದ ಮಹಾಮಾಯೆಯನ್ನು ಅತ್ಯಂತ ಭಕ್ತಿ ಪ್ರೀತಿಗಳಿಂದ ಇದಿರುಗೊಂಡು ಮಂದಿರದಲ್ಲಿ ಮುಹೂರ್ತಗೊಳಿಸಿ, ಕುರಿಕೋಣ

ಗಳನ್ನು ತಂದು, ಡಾವಣಿ ಗಟ್ಟಿ, ಅವುಗಳ ತಲೆ ಕಡಿದು ಆ ತಲೆಗಳನ್ನೇ ಮಾರಿಯ ಮುಂದಿಟ್ಟು ಬೊಬ್ಬಿಡುತ್ತ, ದಿಮುಕು ದಿಮುಕೆಂದು ವಾದ್ಯಘೋಷ ದೊಡನೆ ಸಂತೋಷದ ಅತಿರೇಕದಲ್ಲಿ ಮನಸ್ವೇಚ್ಛೆಯಾಗಿ ಕುಣಿದು ಆ ತೃಪ್ತಿ ಯಲ್ಲೇ ಲೀನವಾಗಿ ಬಿಟ್ಟರು. ಮಾಯಿಗೆ ಕೇವಲ ಕುರಿಕೋಳಿ, ಕೋಣ ಗಳ ನೈವೇದ್ಯವನ್ನಷ್ಟೇ ಅರ್ಪಿಸಿದರೆ ಭಕ್ತರಿಗೆ ತೃಪ್ತಿಯಾದೀತೇ ? ಅದರ ಜೊತೆಗೆ ಭಕ್ಷಭೋಜ್ಯ ಶಾಕಪಾಕ ಷಡ್ರಸಗಳು, ಪರಿಪರಿಯ ಕಜ್ಜಾಯ ಗಳು, ಚೊಕ್ಕಭೋಜನ ಇವೆಲ್ಲವುಗಳು ಸಿದ್ಧವಾಗಿದ್ದುವು. ಈ ಎಲ್ಲ ನೈವೇದ್ಯ ಸಾಮಗ್ರಿಯನ್ನೂ ರಂಗವನ್ನೂ ಬರೆದು ರಕ್ತಗೂಳಿನ ಮುದ್ದೆ ಬಣ್ಣ ದಕ್ಷತೆಗಳನ್ನು ಇಕ್ಕಿ ಆ ಸ್ಥಳದಲ್ಲಿಟ್ಟು ಶರಣೆಂದು ಈ ರೀತಿ ಬೇಡಿಕೊಂಡರು : 'ಮುಕ್ಕಣ್ಣ ಶಕ್ತಿಗೊಲಿದೆ ಲೇಸಾಗಬೇಕು, ಗ್ರಾಮಕೆ ಶಾಂತಿಗೊಡುವುದು ಎಲೆ ಭೂಸುರೋತ್ತಮೆ ' ಎಂದು. ಈ ಹೇಸಿಕೆಯ ನೋಡಲಾರೆನೆಂದು ರವಿಯು ಪಶ್ಚಿಮ ದಿಕ್ಕಿಗೆ ನಡೆದುಬಿಟ್ಟನು. ಇತ್ತ ಮಾರಿಯನು ಎತ್ತುವ ಸಮಯ ಸಮೀಪಿಸಿತು. ಮಾಯಿ ಹೊರಲು ಯಾರೂ ಇಲ್ಲದಿರಲು ಮರುಳ ನನ್ನು ಕರೆತನ್ನಿರೆಂದು ಕೆಲವರು ಸೂಚಿಸಿದರು. ಮರುಳ ಬಂದು ಮಾಯಿಯ ನೋಡಿ ಮುಗುಳುನಗೆಯೊಂದನ್ನು ನಕ್ಕುಬಿಟ್ಟನು. ಅವನು 'ಬರಹೇಳು ಹೋಗು ದೊಡ್ಡಮಾಯಿಯನ್ನು ಈ ಮಾರಿಯನ್ನು ಹೊರುವುದಕ್ಕೆ' ಎಂದು ನುಡಿದನು. ತೊಂಡಮಾರಿ ಗದ್ಗದಿಸುತ್ತ ಬಂದು ಮರುಳನ ಪದಕ್ಕೆರಗಿದಳು. ಅವಳ ರೂಪೋ ಅತಿ ಭಯಂಕರ. ಹೀಗೆ ಬಂದ ತೊಂಡಮಾರಿಗೆ ಚಂಡಿ ಯನ್ನು ಕಳಿಸೆಂದು ಮರುಳನ ಆಜ್ಞೆಯಾಯಿತು. ಮಹಾ ಪ್ರಸಾದವೆಂದು ಅವಳು ಹೋಗುವುದೊಂದೇ ತಡ 'ಮಂಡೆಯನು ಕೊರೆದು, ಕರುಳುಗಿದು, ಚೆಂಡಾಡುವೆನು, ರಕ್ತವನ್ನು ಹಲ್ಲಿಗೆ ಕೊಡುವೆನು, ಖಂಡವನ್ನು ಭೂತಗಳಿ ಗಿಕ್ಕುವೆನು, ಬಂದೆ ' ಎಂದು ಬಂದೇಬಿಟ್ಟಳು. ಹೀಗೆ ಬಂದ ತೊಂಡಮಾರಿಯ ಮುಖವ ನೋಡಿ ಮಾಯಿ ಗದಗುಟ್ಟಿ ನಡುಗಿದಳು. ಮತ್ತು ಹೀಗೆ ನುಡಿ ದಳು : 'ಬಿಡದೆ ಅವರು ಕರೆಯಲಾಗಿ ನಾನು ಬಂದೆ. ಇದೆಲ್ಲ ನನಗೆ ತಿಳಿ ಯದು. ನಾನು ಜಡಮತಿ. ಒಡೆಯಳೆ ರಕ್ಷಿಸು ರಕ್ಷಿಸು. ನನ್ನ ಕಾಪಾಡು ವುದು. ಹೆಚ್ಚೇನು ಹೇಳಲಿ, ನನ್ನನ್ನು ಖಡ್ಗದಿಂದ ಕಡಿದುಬಿಡು. ಕಾಯುವ ಹಾಗಿದ್ದರೆ ಕಾಯಿ ; ಇಲ್ಲವೆ ಕೊಲ್ಲು ' ಎಂದು ಅಡಿಯಲ್ಲಿ ಬಿದ್ದಳು. ಹೀಗೆ

ಪಾದದಾಶ್ರಯವನ್ನು ಹೊಂದಿದ ಮಾಯಿಯನ್ನು ಎತ್ತಿ 'ಹರನೆಡೆಗೆ ನಡೆ' ಎಂದು ಕರೆತಂದಳು. ಹರನೆಂದರೆ ಮತ್ತಾರೂ ಅಲ್ಲ, ನಮ್ಮ ಮರುಳ ಸಿದ್ಧೇಶನೇ! ಆತ ಮಾಯಿಯನ್ನು ನೋಡಿ ಮುಗುಳ್ನಗೆ ನಕ್ಕು ಅವಳಿಗೆ ಒಂದು ನೇಮುವನಿತ್ತು :

> ಇಂದುಧರ ಭಕ್ತರಸಂಖ್ಯಾತರಡಿಗೆ
> ವಂದನೆಯ ಮಾಡಿ ಭಯಭಕ್ತಿಯಿಂದಿರು ನೀನು
> ಹಂದಿಮನುಜರ ಮೇಲೆ ನಿಂದ್ಯವೊಂದನೆ ಹೊರಿಸಿ
> ಕೊಂದು ಕೂಗು........

ಎಂದು ಆಜ್ಞಾಪಿಸಿದನು. ಅದೂ ಅಲ್ಲದೆ ಹರನಿಂದೆ, ಗುರುನಿಂದೆ, ಪರವಧುವಿ ಗಳುಪಿದವರ, ಪರನಿಂದೆಗೈವರ, ಚೋರರ ಇತ್ಯಾದಿ ಇನ್ನೂ ಅನೇಕ ಬಗೆಯ ದುಷ್ಕೃತಗೈವವರನ್ನು ನಾಶಗೈಯ್ಯಲು ಆಜ್ಞೆ ವಿಧಿಸಿದನು. ಈ ಮೇರೆಗೆ ಮಾಯಿಯನ್ನು ಬೀಳ್ಕೊಟ್ಟು, ತೊಂಡಮಾರಿಗೆ ನೇಮುವಿತ್ತು ಸೂರ್ಯೋದಯ ವಾಗುತ್ತಲೆ ಮರುಳಸಿದ್ಧೇಶ್ವರನು ಜನರಲ್ಲಿ ಬೆರೆದುಬಿಟ್ಟನು. ಅನಂತರ ಮರುಳ **ಘನಕಂಥೆಯನು** ಧರಿಸಿದನು. ಇನ್ನು ಅಲ್ಲಿರಬಾರದೆಂದು ಆತನಿ ಗನಿಸಿತು. ದೇಶಾಂತರಕ್ಕೆ ತೆರಳಲು ನಿಶ್ಚಯಿಸಿ ಆ ಭರದಲ್ಲಿ 'ತಾನಿದ್ದನೆಲೆಗೆ ತಾಪತ್ರಯವು ದೊರೆಕೊಳ್ಳುಂ' ಎಂದು ಸೂಚಿಸಿ ತೆರಳಿಬಿಟ್ಟನು. ಜ್ವರ, ಜಠರಶೂಲೆ, ಜಲಗರವಾತ, ಕೊರಳುಬಾವು, ಹುಳುದಂತ, ಜಿಹ್ವೆ ಕಟದಶ, ಕುಷ್ಠ, ಉರಿ, ತಾಪ, ಭಯ, ಚೋರಭಯ, ಅಗ್ನಿಭಯ ಇತ್ಯಾದಿಗಳೆಲ್ಲ ಆ ಸ್ಥಳದಲ್ಲಿ ತಾಂಡವಾಡಹತ್ತಿದುವು. ಹೀಗಾದ ಮೇಲೆ ಜನಕ್ಕೆ ನೆಮ್ಮದಿ ಎಲ್ಲಿಂದ ಬರಬೇಕು. ಗೌಡನಿಗೂ ಅನುತಾಪ ತೀರ ಹೆಚ್ಚಾಗಿ ಹೋಗುತ್ತದೆ. ಗೌಡ ಮರಮರನೆ ಮರುಗಿದನು. ಮರುಳನನ್ನು ಹುಡುಕಬೇಕೆಂಬಾಸೆ ಅವ ನಿಗೆ ಬಲವಾಯಿತು. ಅರಸುತ್ತ ಹೊರಟುಬಿಟ್ಟನು. ಘೋರಾರಣ್ಯಕ್ಕೆ ಬಂದನು. ಗಿರಿ, ಗಹ್ವರ, ಮೊರಡಿ, ಇರುಬಿನ ಸ್ಥಳ ಒಂದಲ್ಲ ಎರಡಲ್ಲ ಎಲ್ಲ ಕಡೆಯಲ್ಲೂ ಹುಡುಕಿದನು. ಆದರೆ ಹುಡುಕಲುಗೈದ ಯತ್ನ ಸತ್ಯವಾ ಯಿತು; ಆದರೆ, ಮರುಳ ಮಾತ್ರ ಸಿಕ್ಕಲಿಲ್ಲ. ಬಾಚಣಗೌಡ ಅರಣ್ಯದಲ್ಲಿ ತಿರುಗಿ ತಿರುಗಿ ಬಳಲಿ ಬೆಂಡಾಗಿ ಹೋದನು. ಮರುಳ ಹೋದ ಮಾರ್ಗವನ್ನು

ಅರಿಯುವುದು ಸಿದ್ಧ ಸಾಧಕರಿಗೂ, ಹರಿ ಅಜ ಸುರೇಂದ್ರರಿಗೂ ಅಸಾಧ್ಯ ಎಂದು ಆತ ಹಿಂದಿರುಗಿಬಿಟ್ಟನು.

ದೇಶಾಂತರವೆಲ್ಲವನ್ನೂ ಚರಿಸಿ ಮರುಳೇಶ್ವರನು ಭರದಿ ಬರುತಿರಲು 'ಬೇತೂರ ವಳಯಾಕರಂ ತನಗೆ ವಾಸವಹುದೆಂದು' ನಿಂತನು. ಅಲ್ಲಿನ ಬ್ರಾಹ್ಮಣರು ಯಜ್ಞಕರ್ಮದಲ್ಲಿ ನಿರತರಾಗಿದ್ದರು. ಯಜ್ಞಶಾಲೆ ಭೂಸುರರಿಂದ ತುಂಬಿತ್ತು. ಋಗ್ಯಜುಸ್ಸಾಮವೇದ ಘೋಷ ಗಗನಮಂಡಲವನ್ನು ಭೇದಿಸುತ್ತಿತ್ತು. ಅಗ್ನಿಯನ್ನು ಪುಟಗೊಳಿಸಲಾಗಿತ್ತು. ಯಜ್ಞಸಾಮಗ್ರಿಯೆಲ್ಲ ಸಿದ್ಧವಾಗಿತ್ತು. ಹಾಲು ಸಕ್ಕರೆ ಮಧುಘೃತ ಕದಳಿಫಲ ಮೊದಲಾದುವುಗಳನ್ನು ಮೇಳೈಸಿ ಅಗ್ನಿಗೆ ಆಹುತಿ ಕೊಡಲಾಗುತ್ತಿತ್ತು. ಅಗ್ನಿಗೆ ಆಗಾಗ ಘೃತವನ್ನು ಹಾಕಲಾಗುತ್ತಿತ್ತು. ಇಷ್ಟೆಲ್ಲವೂ ಆದಮೇಲೆ ಷಡ್ರಾಸನ್ನಗಳ ಭಕ್ಷ್ಯಭೋಜ್ಯಗಳನ್ನು ಬಹಳವಾಗಿ ಒದಗಿಸಿ ಪಙ್ಕ್ತಿಯನ್ನು ಮಾಡುವ ಸಮಯದಲ್ಲಿ ಬಾಲಲೀಲೆಯಲ್ಲಿ ಮರುಳ ಬಂದು 'ಭಿಕ್ಷೆಯ ಹಾಕಿರಿ' ಎಂದು ಹೇಳುತ್ತಾನೆ. ಬ್ರಾಹ್ಮಣ್ಯದೂಟದ ಸಮಯದಲ್ಲಿ ಶೂದ್ರ ಕಾಣಿಸಿಕೊಂಡನೆಂದು ಆರ್ಭಟಿಸಿದರು. ಇದಕ್ಕೆ ಮರುಳನು ಪ್ರಶಾಂತಚಿತ್ತನಾಗಿಯೇ ಉತ್ತರಿಸುತ್ತಾನೆ.

> **ಎಲವೆಲವೊ ವಿಪ್ರಸಂಕುಲವೆ ಕೇಳ್ನಿಮ್ಮ**
> **ಕುಲ ಛಲವೇನು ? ಬಹುಕುಲದಲೋರ್ವರು ನೀವು**
> **ನೆಲೆಯು ನೆನಗರುಹು........**

ಎಂದು.

ಇದಕ್ಕೆ ಅವರು 'ಕುಲಗೇಡಿ ಬಂದನು ಇವನಾರೋ ? ಪಾತಕನಿವನು, ಜಾತಿಯಳಿದ ನಿರ್ಜಾತನು. ಇವನೇನು ಪ್ರೇತಪತಿಯರಸನೇ ? ಪೀತಾಂಬರನೇ ? ಶ್ವೇತವಾಹನನೇ ? ಚತುರ್ವದನನೇ ?' ಎಂದು ಕೊರಚಾಡಿದರು. ಇದಕ್ಕೆ 'ಹರಪೂಜೆಯರಿಯದಿಹ ಪಾತಕರಿರ, ಧರಣಿಸುರರೆಂದರೂ ಪಾಪಕರ್ಮಿಗಳು ನೀವು: ನರಕಭಾಜನರು ನೀವು' ಎಂದು ನುಡಿದನು. ಭೂಸುರರ ಕೋಪಕ್ಕೆ ಎಲ್ಲೆ ಇಲ್ಲದಾಯಿತು. 'ಇವನನ್ನು ಕಟ್ಟಿ ಬಡಿಯಿರಿ, ಚೆನ್ನಾಗಿ ಹೊಡೆಯಿರಿ' ಎಂದು ಮರುಳನನ್ನು ಹಿಡಿತಂದು ಚೆನ್ನಾಗಿ ಹಣಿದು ಶಾಲೆಯೆಡೆಗೆ ಬಂದರು. ಮರುಳ ಮತ್ತೆ ಎದ್ದು ಬಂದನು. 'ಸತ್ತವನು ಮತ್ತೆ

ಎದ್ದು ಬಂದನು ನೋಡಿರೇ' ಎಂದು ಬ್ರಾಹ್ಮಣರು ಅಪಹಾಸ್ಯ ಮಾಡಿದರು. ಅವರಿಗೆ ಹಿಂದು ಮುಂದು ತಿಳಿಯದಾಯಿತು. ಮರುಳಸಿದ್ಧ ನೈವೇದ್ಯಕ್ಕೆಂದು ಸಿದ್ಧಪಡಿಸಿದ್ದ ಶಾಕಪಾಕವನ್ನೆಲ್ಲ ತಂದು ಹುಡುಗರೆಲ್ಲರನ್ನೂ ಕರೆದು ಮುದ್ದೆಯನ್ನು ಮಾಡಿಕೊಟ್ಟ. ಅಂದು ಹದಿನೆಂಟು ಜಾತಿಯ ಜನವೆಲ್ಲ ಕೂಡಿ ಉಂಡಂತಾಯಿತು. ಪಂಚಭೂತಾತ್ಮವೆಲ್ಲ ಒಂದೆನಿಸಿದಂತಾಯಿತು.

ಮರುಳ ಇನ್ನೂ ಒಂದು ಚಮತ್ಕಾರವನ್ನು ಮಾಡಿದನು. ಭೂಸುರ ಸತಿಯರು (ಬ್ರಾಹ್ಮಣ ಸ್ತ್ರೀಯರು) ರಜಸ್ವಲೆಯರಾಗಿ ಆ ಹೊಲೆಯನ್ನು ಕಳೆದುಕೊಳ್ಳುವುದಕ್ಕೋಸ್ಕರ ಶುದ್ಧ ನೀರಲ್ಲಿ ಸ್ನಾನಮಾಡುತ್ತಿರಲು ಅವರ ಶರೀರ ಕಾಂತಿಮಯವಾಗಿ ಕಂಗೊಳಿಸಿತು. ಆ ರೂಪು ಬಲಿದು ಶರೀರ ಕಾಂತಿಯೊಡನೆ ಬೆರೆದಾಗ ಮರುಳನ ಸ್ವರೂಪ ವರಸತಿ ಸುತರಿಗೆ ತಾಗಿತು. ಇದನ್ನು ಕಂಡು ಅವರು ಮರುಳ ಧೂರ್ತನೆಂದು ಕೆರಳಿ ಕೆಕ್ಕಸಗೆಲಿದರು. 'ನಮ್ಮ ಸತಿಯರಿಗೆ ನಮ್ಮ ರೂಪು ಬಲಿವುದು ತತ್ವ. ಆದರೆ, ಈಗಾದ ರೂಪು ನಿರ್ಮಲವಾದ ರೂಪೇ? ಛೇ ಎಂದಿಗೂ ಅಲ್ಲ. ಇದಕ್ಕೆ ಕಾರಣನಾದ ಈ ಮರುಳನನ್ನು ಈಗ ಬಿಲದ್ವಾರದಲ್ಲಿ ಹೊಗಿಸಿ ಸುಣ್ಣವನ್ನು ಅದರಲ್ಲಿ ತುಂಬಿ ನೀರನ್ನು ಹೊಯ್ದು ಬಿಡಬೇಕು' ಎಂದು ನಿರ್ಧರಿಸಿ ಸಂತಪ್ತ ಬ್ರಾಹ್ಮಣ ನಿಕರವು ಹಾಗೆ ಮಾಡಿಯೇ ಬಿಟ್ಟಿತು. ಇದರಿಂದ ಮರುಳಸಿದ್ಧೇಶನಿಗೆ ಏನೂ ಸಂಭವಿಸಲಿಲ್ಲ. ಮರುಳಸಿದ್ಧೇಶ ಘೋರವಾದ ಈ ಸುಣ್ಣದ ಪವಾಡವನ್ನು ಗೆದ್ದು ಬಿಲ ಸ್ವರ್ಗವನ್ನು ಕಳೆದು ಕೊರುಡಿಯಲ್ಲಿ ಬಂದು ಲಿಂಗಮಯವಾಗಿ ನೆಲಸಿದನು. ಕುಲವೆಲ್ಲ ಒಂದುಗೂಡಿದಂತಾಯಿತು. ಅವರೆಗೆ ಇದ್ದ ವಿಪ್ರಕುಲದ ಛಲವೆಲ್ಲ ಸಂಪೂರ್ಣ ಉಡುಗಿಹೋಯಿತು. ಆದರೆ ಇನ್ನೂ ಕೆಲವು ಜನ ಬ್ರಾಹ್ಮಣ ಕುಹಕಿಗಳು ಮರುಳನನ್ನು ಹೆಡಮುರಿಗೆ ಕಟ್ಟಿ ಅರಸನ ಮುಂದೆ ತಂದು ನಿಲ್ಲಿಸಿ ಕೋಪಾಟೋಪದಲ್ಲಿ 'ನಮ್ಮ ಯಜ್ಞ ಕೆಡಿಸಿದ್ದಾನೆ, ಹೊಲೆಯ ಹದಿನೆಂಟು ಜಾತಿಯನ್ನು ಬೆರಸಿದ್ದಾನೆ. ಇದೂ ಅಲ್ಲದೆ ಇವನು ಪರಸ್ತ್ರೀಯರ ಅಪಮಾನವನ್ನೂ ಮಾಡಿದ್ದಾನೆ. ಆ ಹೆಂಗಳೆಯರಿಗೆ ಇವನಂತಿರುವ ಸುಕುಮಾರರೊಗೆದರು' ಎಂದು ಕೂಡ ಹೇಳುತ್ತಾರೆ. ಈ ಮಾತ ಕೇಳುತ್ತಲೇ ಚಕ್ರವರ್ತಿಯಾದ ನೊಣಬನು ಕಡುನೊಂದು, ಬಿಸುಸುಯ್ದು, ಪಾಪ ಸಂಭವಿಸಿತೆಂದು ಕೋಪಾವಿಷ್ಟನಾಗಿ 'ಇವನನ್ನು ನೂಕಿರಿ ಮದದಾನೆಯ ಮುಂದೆ'

ಎಂದು ಚರರಿಗೆ ಆಜ್ಞೆ ಇತ್ತನು. ಮರುಳನ ಮೇಲೆ ಮದಗಜವನ್ನು ನೂಂಕಿದ್ದೂ ಆಯಿತು. ಗಜಾಸುರ ಈಶ್ವರನ ಮೇಲೆ ಅಭಿಯೋಗ ಮಾಡಿ ಬದುಕುವುದುಂಟೇ ? ಮರುಳ ತನ್ನ ಮೇಲೇರಿ ಬರುವ ಮದಗಜದ ಸುಂಡಿಲನ್ನು ಹಿಡಿದೆತ್ತಿ ಶಕ್ತಿಯಿಂದ ಅದನ್ನು ಕೆಡಹಿ, ಕಾಲಿನಿಂದ ಒದೆದು ಶಿರವನ್ನು ಮೆಟ್ಟಿದನು. ಆಗಿನ ಆತನ ರೂಪು ಅತ್ಯುಗ್ರವಾಯಿತು. ಕುಂಭಿಗೆ (ಆನೆ) ಈತನು ಶಂಭುವೆಂದು ಗೊತ್ತಾಯಿತು. ಅದರ ಮದವೆಲ್ಲ ಉಡುಗಿ ದೇವರದೇವನಾದ ಹರನ ಪೂಜೆಗೆ ಅನುಗೊಳಿಸಿ ಭಕ್ತಿಯಿಂದ ಶಂಭುವನ್ನು ವನದತ್ತ ಎತ್ತಿಕೊಂಡು ನಡೆಯಲು ಜನರೆಲ್ಲ ಅದನ್ನು ಬೆಂಬತ್ತಿಬಿಟ್ಟರು. ಅರಸನ ಸೈನ್ಯವೇ ಆನೆಯ ಬಾಲವಾಗಿ ಸಾಗಿತು. ಆನೆ ವಿಂಧ್ಯಾಪರ್ವತದಲ್ಲಿ ಒಂದೇ ಸಮನೆ ಸಾಗಿತು. ಅದು ಹೋದ ಹೋದಲ್ಲಿ ಆದರ ಬೆನ್ನುಬಿಡದೆ ಈ ಸೈನ್ಯವೂ ಹಿಂಬಾಲಿಸಿತು. **ಮುಚ್ಚನೂರು** ಹೊಕ್ಕದ್ದಾಯಿತು. ಮಂದಮತಿಗಳು ಹಾಗೇ ಬೆನ್ನಟ್ಟಿರಲು ಮರುಳನು ಉಸ್ಸೆಂದು ನಿಟ್ಟುಸುರ್ಗರೆದು ದಾರಿಯೊಳು ನಿಲ್ಲಲು **ಹುಳುಪನಕಟ್ಟೆ** ಎಂಬ ಹೆಸರಿನ ಊರಾಯಿತು. ಸೇನೆಯು ಹಾಗೇ ಬೆಂಬತ್ತಿ ಬರುತ್ತಿರಲು ಮರುಳಸಿದ್ಧನು ನೋಡಿ, ಗಹಗಹಿಸಿ ನಕ್ಕು ಆನೆಯನ್ನು ಧರಾತಳಕ್ಕೆ ಒತ್ತಿಬಿಟ್ಟು ಕೋಡುಗಳನ್ನು ಕಿತ್ತು ಆಕಾಶಕ್ಕೆ ಒಗೆದು, ಮಾನವರಿಗೆ ಆ ದೃಶ್ಯವನ್ನು ತೋರಿ ನೆಲಸಿದ ಊರು **ಆನಗೋಡು** ಎಂದು ಹೆಸರಾಯಿತು. ಅದೆಲ್ಲವನ್ನು ಕಳೆದುಕೊಂಡು ಮುಂದೆ ಬರುತ್ತಿರಲು ಗಿರಿವನ ಗುಹೆಗಳು ದಾರಿಯಲ್ಲಿ ಸಿಕ್ಕಿದುವು. ಅಲ್ಲಿ ಮರಳಮಂಟೆಯದವರು ಇವನನ್ನು ಕಂಡರು. ಅವರಿಗೆ ತನ್ನ ಅಂತರಂಗವನ್ನು ತಿಳಿಸಿ, ಸಿದ್ಧೇಶ ದೈತ್ಯರನ್ನು ಮುರಿದು ಮುಂದೆ ಬರಲು **ಬನ್ನಿಕೋಡು** ಎಂಬ ಊರಾಯಿತು. ಮುಂದೆ ಮರುಳಸಿದ್ಧೇಶನು **ಅಸಗೋಡು** ಎಂಬ ಊರಿನಲ್ಲಿ ನಿಂತನು. ಮುಂದೆ ಮರುಳನು **ತುಯ್ಯಲಳ್ಳಿ**ಂಬ ಪಟ್ಟಣಕ್ಕೆ ಬಂದು, ಭಿಕ್ಷವ ಬೇಡಿ ವರಸುಧೆಯ ಸವಿದು ಹರಕೆಯ ಕೊಟ್ಟು ನಡೆದನು. ಹೀಗೆಯೇ ಸಾಗಿ ಬರುತ್ತಿರಲು **ಹಳಿಯಬೀಡು** ಎಂಬ ಪಟ್ಟಣಕ್ಕೆ ಬರಲು ಅಲ್ಲಿ **ಬಲ್ಲಾಳ**ನೆಂಬ ಅರಸು ಕೀರ್ತಿಸುವರಳವಲ್ಲವೆಂದು ಹೆಸರಾಗಿರುತ್ತಾನೆ. ಆತನಾಳುವ ಊರು ಸೌಂದರ್ಯದ ಬೀಡು. ಇಲ್ಲಿಗೆ ಮರುಳನು ಮೆಲ್ಲನೆ ಬರುತ್ತಿರಲು ಹುಲ್ಲು ಕೊಯ್ಯುತ್ತಿದ್ದ ಬಲ್ಲಾಳನೃಪನ ತುರಗದ ಗೋವಳರು ಗುರುಮೂರ್ತಿಯ

ಕಂಡು ಆತನ ಪಾದಾರವಿಂದಕ್ಕೆ ವಂದಿಸಿದರು. ಅವರಲ್ಲಿ ಓರ್ವಭಕ್ತನು ತನ್ನ ಮೈಮರೆತು ಶಿವನನ್ನು ಕೊಂಡಾಡಿ, ಹುಲ್ಲ ಕೊಯ್ಯುವುದನ್ನು ಬಿಟ್ಟು ಅವನ ಕಾರುಣ್ಯ ಪಡೆದು, ಮರುಳನೊಡನೆ ಆಟವಾಡುವುದರಲ್ಲಿ ಲೀನನಾದನು. ಈ ವರ್ತಮಾನ ಅರಸನಿಗೂ ಮುಟ್ಟಿತು. ಅರಸು ಕೋಪಾವಿಷ್ಟನಾಗಿ ಅವನ ಕೈಗಳಿಗೆ ಕಾಯ್ದ ಕಬ್ಬುನದ ಬಳೆಯನ್ನು ಹಾಕಿರಿ ಎಂದು ಆಜ್ಞಾಪಿಸುತ್ತಾನೆ. ಕಾದ ಕಬ್ಬುನದ ಬಳೆಯನ್ನು ಅವನ ಕೈಗಿಕ್ಕುವುದೊಂದೇ ತಡ ಈ ಧರಾಧಿಪಗೆ ಮಹತ್ತನ್ನು ತೋರುವಂತೆ ಮೇಘ ಮಳೆಯನ್ನು ಸುರಿಸಿತು. ಮರುಳನ ಮಹಿಮೆ ಮೆರೆಯಿತು. ಈ ಸಂಗತಿಯನ್ನು ಜನರು ಅರಸನಿಗೆ ತಿಳಿಸಿದರು. ಅವನು 'ನಾಗಭೂಷಣನೆಂದರಿಯದಲೆ ಮೂಗನಾದೆ. ಇನ್ನೇನು ಮಾಡಲಿ?' ಎಂದು ಚಿಂತಾಕ್ರಾಂತನಾದನು. ಅನಂತರ ಮರುಳಸಿದ್ಧೇಶ್ವರನಿಗೆ ಆ ಅರಸು ಶರಣಾಗತನಾಗುತ್ತಾನೆ. ಶರಣಜನ ಸಂತತಿಯೆಲ್ಲ ಈ ಮಹಾಪುರುಷನ ಮಹಿಮೆಯನ್ನು ಜಯ ಜಯವೆಂದು ಕೊಂಡಾಡಿದರು. ಇಲ್ಲಿಂದ ಮರುಳ ಮುಂದೆ ಸಾಗಿ ಬರಲು **ಪಲ್ಲವ ಅರಸರ** ಸತ್ತಿಗೆಗಳು ಅವನ ಎಡಬಲದಲ್ಲಿ ಬಂದು ಶರಣೆಂದಾಗ ಅವರಿಗೂ ಸಲ್ಲಲಿತ ವರವನ್ನು ಕೊಟ್ಟು ಕಳುಹಿಸಿದನು.

ಇತ್ತ ಸಿದ್ಧೇಶ್ವರನು ನಡೆದ ಪಥದಲ್ಲೆಲ್ಲ ಸಮಸ್ತ ತರುನಿಕರವು ಫಲಪುಷ್ಪಭರಿತವಾಗಿ ಶೋಭಿಸಿತು. ಅದರಲ್ಲಿಯೂ **ಕುಂಭಿನಿಯು** (ಕುಂಬಳೂರು ಅಥವಾ ಕುಂಬಳಾಪುರ) ಶ್ರೇಷ್ಠವಾದ ಫಲಪೈರುಗಳನ್ನೊಳಕೊಂಡು ಸಂಭ್ರಮದಿಂದ ಶೋಭಿಸುತ್ತಿತ್ತು. ಆ ಊರು ಶರಣ ಸದ್ಭಕ್ತ ಸಮೂಹದಿಂದ ರಂಜಿಸುತ್ತಿತ್ತು.

ಆ ಕುಂಬಳಾಪುರದಲ್ಲಿ ೧೨ ವರ್ಷಕ್ಕೊಮ್ಮೆ ಕುಂಭವನ್ನು ಮೆರೆಯಿಸುವುದು ವಾಡಿಕೆ. ಆ ಸಮಯದಲ್ಲಿ ಅಲ್ಲಿ ಬಲು ದೊಡ್ಡ ಜಾತ್ರೆಯೂ ನೆರೆಯುವುದು. ಇನ್ನೊಂದು ಮುಖ್ಯ ವಿಷಯವೆಂದರೆ ಆ ಕುಂಭಪೂಜೆಗೆ ಓರ್ವ ಬಾಲಕನನ್ನು (ಕುಂಭಕ) ಆಹುತಿ ಕೊಡುವುದು.

ಕುಂಬಳಾಪುರದ ಪ್ರಭು ಭೈರಗೊಂಡ. ಮರುಳಸಿದ್ಧೇಶ ಆ ಊರಿಗೆ ಬರಲು ಈತ ಮುಕ್ತಕಂಠವಾಗಿ ಹೊಗಳುತ್ತಾನೆ. ಆತನ ಹೆಂಡತಿ ಲಿಂಗವ್ವ

ನಿಗೆ ಇದು ಸರಿದೋರಲಿಲ್ಲ. ಗಂಡನಿಗೆ ಭೈರವನ ಪೂಜೆ ಅಳವಟ್ಟರೆ ಹೆಂಡತಿಗೆ ಲಿಂಗದ ಘನಾಚರಣೆಯಲ್ಲಿ ಆಸಕ್ತಿ. ಹೀಗಿದ್ದು ಪ್ರಭು ಜೋಗಿಯ ಪೂಜೆಯನ್ನು ಏಕಮನಸ್ಸಿನಿಂದ ಮಾಡಿ, ಸಂಪ್ರೀತಿಯಿಂದ ಆತನ ಪಾತ್ರೆಯನ್ನು ಆಹಾರದಿಂದ ತುಂಬಿದನು. ಇದನ್ನು ಕಂಡ ಜೋಗಿ ಪ್ರಭುವನ್ನು ಹರಸಿದನು. ಭೈರಗೊಂಡನಿಗೋ ಹರ್ಷವೇ ಹರ್ಷ. ಆದರೆ ಲಿಂಗಮ್ಮ ಇದನ್ನು ಕಂಡು ಜೋಗಿಗಳನ್ನು ಜರೆದುಬಿಟ್ಟಳು. ಆಗ ಭೈರಗೊಂಡ 'ಎಲೆ ನೀರೆ ನಿನಗೇಕೆ ಭಕ್ತರ ಪೂಜೆ? ನವನಾಥಸಿದ್ಧನಾದ ಭೈರವನ ಪೂಜೆಯನ್ನು ಮಾಡಲು ಆಲಸ್ಯವನ್ನೂ, ಅಸಹನೆಯನ್ನೂ, ಅತೃಪ್ತಿಯನ್ನೂ ತೋರುವುದೇ? ಚಂಡಿ ನೀನು - ಅಜ್ಞಾನಿ ನೀನು' ಎಂದು ಅವಳನ್ನು ಜರೆಯುತ್ತಾನೆ. ಅದಕ್ಕೆ ಮಹಲಿಂಗಿಯು ಉತ್ತರಿಸುತ್ತಾಳೆ 'ಅತ್ಯಂತ ಚಿನ್ಮಯನೂ, ಸತ್ಯಜಗದಾಧಾರನೂ, ನಿತ್ಯನಿರುಪಮನೂ, ಭಕ್ತರ ಸುಮನಪ್ರೇಮನೂ ಆದ ಚಿತ್ತಜಹರನಾದ ಶಿವನನ್ನು ನೆನೆಯುವುದನ್ನು ಬಿಟ್ಟು ಸತ್ತು ಹುಟ್ಟುವ ದೈವವ ಭಜಿಸಿ ಮೃತ್ಯುವಿನ ಬಾಯಿಗೊಳಗಾಗದಿರು ನೀನು' ಎಂದು. ಗಂಡಹೆಂಡಿರ ವಾದದಿಂದ ಖಂಡೇಂದುಧರನು ಕುಂಭದಲ್ಲಿ ನೆಲಸಿ ಪ್ರತ್ಯಕ್ಷವಾಗಲು ಭೈರಗೊಂಡನು ಬೆರಗಾದನು. ಹರನಡಿಗಳನ್ನು ಕಂಡ ತಾನೇ ಧನ್ಯನೆಂದುಕೊಂಡು 'ಹಿಂಡು ದೈವಕೆ ತಾತನೆನಿಸುವ ಪರಾಪರ, ಪುಂಡರೀಕಾಕ್ಷಪೂಜಿತ ಪದದ್ವಿತೀಯ ಶಂಭು, ಕುಂಭೇಶ್ವರನೇ ಸಲಹು' ಎಂದು ಬೇಡಿಕೊಂಡನು. ಈ ರೀತಿಯಾಗಿ ದ್ವಿತೀಯ ಶಂಭು ಮಲ್ಲೇಶ ಕುಂಭದ ಪವಾಡವನು ಗೆಲಿದು ಅನೇಕ ಕಡೆಗೆ ತಿರುಗಿ ಬಂದು ಮಲೆಯಾಳದೊಳಗೆ ಇಂಬುವಡೆದಿದ್ದ ಚಿನ್ಮನಗಿರಿಯ ಸಿದ್ಧೇಶಲಿಂಗವನು ಕಂಡನು.

## ಸಂಧಿ ೪

ಚಿನ್ಮೂಲಗಿರಿಯಲ್ಲಿ ಗುರುಗಳಾದ ರೇವಣಸಿದ್ಧರ ವರಮೂರ್ತಿಯನ್ನು ಕಂಡು ಮುರುಳಸಿದ್ಧ ಹರ್ಷಭರಿತನಾಗಿ ಅವರನ್ನು ಭಕ್ತಿಯಿಂದ 'ಗುರುರಾಯ ಸಲಹು' ಎಂದು ಬೇಡಿಕೊಂಡನು. ತಾನು ಅನೇಕ ಪವಾಡಗಳನ್ನು ಗೆದ್ದು ಬಂದಿದ್ದರೂ ಗುರುಕರುಣೆಯನ್ನು ಪಡೆಯಬೇಕೆಂಬಾಸೆ ಆತನಿಗೆ ಬಹಳವಾಗಿತ್ತು. ಗುರುಗಳಿಗೂ ಈ ವಿಷಯವೆಲ್ಲವೂ ತಿಳಿಯಿತು. ಅವರ ಸಂತ

ಸಕ್ಕೂ ಪಾರವುಳಿಯಲಿಲ್ಲ. ಶುಭತಿಥಿಯ ದಿವಸ ಚಂದ್ರತಾರಾಬಲಗಳು ಕೂಡಿ ಬಂದ ಘಳಿಗೆಯಲ್ಲಿ, ಶಿಷ್ಯನಿಗೆ ಪಂಚಾಕ್ಷರೀ ಮಂತ್ರೋಪದೇಶವನ್ನು ಮಾಡಿ ದರು. ದೀಕ್ಷಾವಿಧಾನವನ್ನು ತಿಳಿಸಿದರು. ಮರುಳೇಶ್ವರನಿಗೆ ಆನಂದ ಮೈದುಂಬಿತು. ಗುರುವಿಗೆ ವಂದನೆಮಾಡಿ 'ತಂದೆ ಕರುಣಿಪುದು ಮುಂದಣ ಭಕ್ತಿಯಾಚರಣೆಯನು' ಎಂದು ಬೇಡಿಕೊಂಡನು. ಗುರುಗಳು 'ಉತ್ತರ ದಿಕ್ಕೊಂದನ್ನು ಬಿಟ್ಟು ಉಳಿದೆಲ್ಲ ದಿಕ್ಕುಗಳಲ್ಲಿ ಭಿಕ್ಷವನ್ನರಸಿ ತಂದು ನಮಗೆ ತಂದುಕೊಡು; ಅದನ್ನು ವರಪ್ರಸಾದವೆಂದು ಇಂದುಧರನಿಗರ್ಪಿಸಿ ಸ್ವೀಕರಿಸು ವೆವು' ಎಂದರು. ಅದಕ್ಕೆ ಮರುಳನು ಕೈಮುಗಿದು 'ಉತ್ತರದಿಕ್ಕಿಗೆ ಹೋಗ ಬೇಡವೆಂದು ಆಜ್ಞಾಪಿಸಿದಿರಿ ತಂದೆ; ಆದರೆ, ಉತ್ತಮಾಧಮ ಮಧ್ಯಮಂ ವಿರಚಿಸಬೇಕಾಗಿದೆ. ಗುಪ್ತವಿದು ನನಗೆ. ಇದಕ್ಕುಪಾಯವೇನು? ಬಿತ್ತರಿಸ ಬೇಕು' ಎಂದು ಕೇಳಿದನು. ಆಗ ಗುರುರಾಯ ತತ್ವರಹಸ್ಯದಲ್ಲಿ ವಾದ ಬರಲು ಪೂರ್ವಚರಿತದ ಮಾಯೆಯನು ಮರ್ತ್ಯಕ್ಕೆ ಬರಿಸಿದನು. ಆ ದೇವಿ ಬಂದು ಕೊಲ್ಲಾಪುರದಲ್ಲಿ ನೆಲೆಸಿದಳು. ಅವಳು ಮಾದೇವನನ್ನು ಜರೆದು ವಾದಿಗಳ ತಲೆಯನ್ನು ಕತ್ತರಿಸಿ ಜನರನ್ನು ಬಾಧೆಗೊಳಿಸಿದಳು, ಭ್ರಮೆ ಗೊಳಿಸಿದಳು. ಮರುಳೇಶನು 'ಗುರುಗಳೇ ನಿಮ್ಮ ಪಾದ ದರುಶನ ಶಕ್ತಿ ಯೊಂದಿರಲಿ ಮಾಯೆಯ ಬಲುಹ ನೋಡುತ್ತೇನೆ' ಎಂದು ಗುರುಗಳನ್ನು (ತಂದೆ) ಬೀಳ್ಕೊಂಡು, ಪರಮಾಮೃತಗಳನೊಳಕೊಂಡ ಭಿಕ್ಷವನ್ನು ತಂದು ಅರ್ಪಿಸಿ ಅವರಿಂದ ಆಜ್ಞೆಯನ್ನು ಪಡೆದುಕೊಂಡು ಸಿಂಧು ಮಲೆಯಾಳ ಚೋಳದೇಶ ಆಂಧ್ರ ದ್ರಾವಿಡ ಕರ್ನಾಟಕ ಮೊದಲಾದ ದೇಶಗಳಲ್ಲಿ ಚರಿಸಿ ಅಲ್ಲಿಂದ ಭಿಕ್ಷವ ತಂದು ಗುರುವಿಗರ್ಪಿಸಿ ಅವರ ಪೂರ್ಣ ಕರುಣೆಯನ್ನು ಪಡೆದನು.

ಮುಂದಣ ಪ್ರವಾಸ ಮತ್ತೆ ಪ್ರಾರಂಭವಾಯಿತು. **ಕೆರೆಯಪುರದಲ್ಲಿ** ರಾಮದೇವನೆಂಬುವನು ಶರಣ ಸದ್ಭಕ್ತರಿಗಿಂತ ಮಿಗಿಲಾಗಿ ಹರನ ಪೂಜೆ ಯನ್ನು ಮಾಡುತ್ತಿದ್ದನು. ಗುರು ಲಿಂಗ ಜಂಗಮಕ್ಕೆ ತನುಮನ ಧನಗಳನ್ನು ಅರ್ಪಿಸಿದ್ದನು. ಪುರಜನಕ್ಕೆ ಮೃಷ್ಟಾನ್ನ ಭೋಜನವ ನೀಡುತ್ತಿದ್ದನು. ಈ ಪದ್ಧತಿ ಸಂತತವಾಗಿ ನಡೆದಿತ್ತು. ಈ ಪಟ್ಟಣಕ್ಕೆ ಮರುಳಸಿದ್ಧೇಶ್ವರನು ಬರುತ್ತಾನೆ. ಅವನು ಬಂದ ರೀತಿ ತೀರ ವಿಚಿತ್ರವಾದುದು.

ಬಣ್ಣಗುಂದಿದ ಮೈಯ್ಯಿ, ಬಡವಾದ ತನು, ಗುಣದ
ಗಣ್ಣು, ಮುದುಡಿದ ಕಿವಿಯು, ಕೊರೆಮೂಗು, ಜೋಲ್ವಾಯಿ,
ಹುಣ್ಣುಹುಳುಗಳಿಂದ ಕಲ್ಮಷವನೆಸೆವ ಪುಳುಗಳಿಂ ಸಣ್ಣಿಸಿದ ಕರಕಾಲ್ಗಳಿಂ
ಹಣ್ಣಾದ ಶರೀರ.......

ಈ ರೀತಿಯಲ್ಲಿ ಮರುಳಸಿದ್ಧೇಶ ತೋರುತ್ತಿರಲು ಆ ಪುರದ ಜನವೆಲ್ಲ ಹೇಸಿಹೋದರು. ಇಡೀ ಶರೀರದಲ್ಲಿ ಹುಣ್ಣೊಡೆದು ಕೀವು ರಕ್ತದಲ್ಲೆಲ್ಲ ಹುಳುಗಳು ಸುರಿಯುತ್ತಿದ್ದುವು. ಈ ರೀತಿಯ ಭಯಂಕರವಾದ ದೇಹದಿಂದ ಇದ್ದ ಕಾಪುರುಷನನ್ನು ನೋಡಿ ಆ ಊರ ಜನಕ್ಕೆ ಪಾಪ ಸಂಭವಿಸಿದಂತಾಗಿತ್ತು. ಇದನ್ನು ರಾಮದೇವ ಕಣ್ಣಾರ ಕಂಡು ಈ ರೀತಿಯಲ್ಲಿದ್ದ ಮರುಳೇಶ್ವರನಿಗೆ ಭಕ್ತಿಯಿಂದ ನಮಸ್ಕರಿಸಿ 'ನಮ್ಮ ಮಠಕ್ಕೆ ಹೋಗೋಣ ನಡೆಯಿರಿ' ಎಂದು ಹೇಳಿದನು. ಆತನಿಂದ ಷಡುಸ್ಥಲದ ಮಹಿಮೆಯನ್ನು ಕೇಳಿ ಈತ ಕಂತು ಹರನೆಂದರಿದುಕೊಂಡನು. ಈತನ ಭಕ್ತಿಯನ್ನು ಪರೀಕ್ಷಿಸಬೇಕೆಂದು ಮರುಳಸಿದ್ಧೇಶನು 'ಶರೀರಕ್ಕೆ ಸುಖವಿಲ್ಲ, ತುಂಬಾ ದುರ್ವಾಸನೆ. ರಕ್ತ ಕೀವು ಸುರಿಯುತ್ತಿದೆ. ಕೀವಿನಲ್ಲಿ ಹುಳಗಳು ಹುಟ್ಟಿವೆ. ಕಾಲಿನಿಂದ ನಡೆದುಕೊಂಡು ಬರಲಾರೆ' ಎಂದು ನುಡಿದನು. ಶರಣನಾದ ರಾಮಯ್ಯ ಈ ಮಾಯದ ಮಾತಿಗೆ ಅಂಜುತ್ತಾನೆಯೇ? 'ಬರಲಾರೆ'ನೆಂಬ ಮಾತಿಗೆ ಉತ್ತರವನ್ನು ಕೊಡದೆ ಆತನನ್ನು ತಲೆಯ ಮೇಲೆ ಹೊತ್ತುಕೊಂಡು ಪುರದ ವೀಧಿಯಲ್ಲಿ ಬರುತ್ತಿರಲು ಜನವೆಲ್ಲ ಇದನ್ನು ನೋಡಿ ಬೆಕ್ಕಸಬೆರಗಾದರು. ಹೀಗೆ ರೋಗಿಷ್ಠನನ್ನು ಹೊತ್ತುಕೊಂಡು ಮಠದ ಹತ್ತಿರ ಬರಲು ರಾಮಯ್ಯನ ಹೆಂಡತಿ ಅದನ್ನು ಕಂಡು ಹೇಸಿಕೊಳ್ಳುತ್ತಾಳೆ. ಭಕ್ತನಾದ ಅವನು ಇದಕ್ಕೆ ಲಕ್ಷ್ಯ ಮಾಡುತ್ತಾನೆಯೇ? ಸ್ವಲ್ಪವೂ ಹಿಂದುಮುಂದೆ ನೋಡದೆ ಗುರುರಾಯನ ಶರೀರವೆಲ್ಲವನ್ನೂ ಸ್ವಚ್ಛವಾಗಿ ತೊಳೆದು, ಮುಖಪಾದವನ್ನೆಲ್ಲ ಚೆನ್ನಾಗಿ ಒರೆಯಿಸಿ ನಮಸ್ಕರಿಸಿ, ಗದ್ದುಗೆಯನಿಕ್ಕಿ, ಅದರ ಮೇಲೆ ಗುರುವನ್ನು ಕುಳ್ಳಿರಿಸಿ, ಸುಗಂಧ ದ್ರವ್ಯಾದಿಗಳಿಂದ ಪೂಜಿಸಿ, ಧೂಪದೀಪಾದಿಗಳಿಂದ ಅರ್ಚಿಸಿ, ಷೋಡಶೋಪಚಾರವನ್ನು ಸಮರ್ಪಿಸಿ ನೈವೇದ್ಯವನ್ನು ಮಾಡಿದನು. ಅನಂತರ ತಾನು ಗುರುಗಳ ಆಜ್ಞೆಯನ್ನು ಸ್ವೀಕರಿಸಿ ಮಿಕ್ಕದ್ದನ್ನು ಸೇವಿಸಿದನು. ಭಕ್ತನ ನಿಶ್ಚಲವಾದ ಭಕ್ತಿಗೆ ಮುಕ್ಕಣ್ಣಹರನು ಪ್ರತ್ಯಕ್ಷನಾದನು. ಮರುಳಸಿದ್ಧೇಶನ

ಸರ್ವಾಂಗವೆಲ್ಲ ಪರಿಶುದ್ಧವಾಗಿ ಕಂಗೊಳಿಸಿತು. ರಾಮಿತಂದೆಗಳ ತನು ಮಾನವು ಪ್ರಸಿದ್ಧವಾಯಿತು. ಅಂದಿನಿಂದ ಆತನಿಗೆ ಗದ್ದುಗೆಯ ರಾಮಯ್ಯ ನೆಂಬ ಹೆಸರಾಯಿತು. ಹರನು ರಾಮಿತಂದೆಗಳನ್ನು ತನ್ನಲ್ಲಿ ಐಕ್ಯಮಾಡಿ ಕೊಂಡನು. ಆತನ ಅಪರಭಾಗವೇ ರಾಮಿತಂದೆಗಳಿಗೆ ವಿಾಸಲಾಯಿತು.

ಮರುಳಸಿದ್ಧೇಶ್ವರನು ಕೊಲ್ಲಾಪುರಕ್ಕೆ ಹೊರಟ ಹಾದಿಯಲ್ಲಿ ಧರೆಯ ನುಳುತ್ತಿದ್ದ ಒಕ್ಕಲಿಗರನ್ನು ಕಂಡು ಅವರಲ್ಲಿ ಓರ್ವನನ್ನು ಮರುಳುಮಾಡಿ ತಾನು ಕರೆದೊಯ್ಯಬೇಕೆಂದು ಬಯಸಿ, ಒಂದು ಉಪಾಯ ಮಾಡಿ 'ಹಿಂದ ಣವನಂ ನಮಗೆ ಈವುದು' ಎಂದು ಆ ಒಕ್ಕಲಿಗರನ್ನು ಕೇಳುತ್ತಾನೆ. ಆಗ ಅವರು 'ಇವನ ಸತಿಗೆ ಪಡಿಭತ್ತವ ನೀವು ತಂದಿತ್ತು ಕರೆದೊಯ್ಯುವುದು' ಎಂದು ಆ ಮಾತಿಗೆ ಪ್ರತ್ಯುತ್ತರ ಹೇಳುತ್ತಾರೆ. ಆದಕ್ಕೆ ಮರುಳೇಶ್ವರನು 'ಗಳಿಗೆ ತುಂಬಿದ ಬತ್ತ ತೀರುವುದರಲ್ಲಿ ನಿಮ್ಮ ತಮ್ಮನನ್ನು ತಿರುಗಿ ತಂದುಕೊಡುವೆ' ಎಂದು ಹೇಳುತ್ತಾನೆ. ಅವರೂ ಒಪ್ಪುತ್ತಾರೆ. ಆದರೆ ಗಳಿಗೆ ತುಂಬಿದ ಬತ್ತ ಹಾಗೇ ವೃದ್ಧಿಯಾಗುತ್ತದೆಯೇ ವಿನಹ ಬರಿದಾಗು ವುದೇ ಇಲ್ಲ. ಹೀಗೆ ಪವಾಡವನ್ನು ಮೆರೆದು ಅಚಲನೇಮ ವ್ರತಶೀಲರಾದ **ಗುಂಡಯ್ಯ ಬ್ರಹ್ಮಯ್ಯ**ಗಳ ನೆಲೆಯನ್ನು ನೋಡಿಕೊಂಡು ಮರುಳಸಿದ್ಧೇ ಶ್ವರನು ಮುಂದೆ ಸಾಗುತ್ತಾನೆ.

ಮರುಳಸಿದ್ಧೇಶನು ಹೀಗೇ ಸಾಗಿ **ರುದ್ರರಾಯನ** ಪಿತನಾದ **ಗಣ ಪತಿಯು** ಆಳುತ್ತಿದ್ದ **ಓರುಗಲ್ಲು** ಪುರಕ್ಕೆ ಬರುತ್ತಾನೆ. ಅಲ್ಲಿನ ಸೌಂದರ್ಯ ವನ್ನು ನೋಡಿಕೊಂಡು ಹಾಗೇ ಕೊಲ್ಲಾಪುರದ (ಪೆಣ್ಣುಪುರ) ಉದ್ಯಾನಕ್ಕೆ ಕಾಪುರುಷರ ವೇಷದಲ್ಲಿ ಬಂದನು. ಮಾಯೆಗೆ ಈ ವರ್ತಮಾನ ಹೋಯಿತು. ಅವಳು 'ಕರೆತನ್ನಿ' ಎಂದು ಭಟರಿಗೆ ಆಜ್ಞಾಪಿಸಿದಳು. ಇವರಿಂದ ಕಾರ್ಯ ಸಾಧನೆಯಾಗಲಿಲ್ಲ. ಅಸುರ ಸಂತತಿಯನ್ನು ಕಳುಹಲಾಯಿತು. ಅವರು ಬಂದು ಭಾವಜಾಂತಕಹರನನ್ನು ಕರೆಯಲು ಅವನು ನಸುನಗುತ ಭಿಕ್ಷುಕ ನಾಗಿ ಕರಪಾತ್ರೆವಿಡಿದು ದೇವಾಲಯದಲ್ಲಿ ಪ್ರವೇಶಿಸಲು ಹೊರಬಾಗಿಲಲ್ಲಿ ಕಾವಲಿದ್ದ ಬ್ರಹ್ಮ ಆತನನ್ನು ಬಿಡಲಿಲ್ಲ. ಅಲ್ಲದೆ ಅವನು ಮುಳಿತು ಕರವಾಳ ವನ್ನು ಬೀಸಿದನು. ಆದರೆ ಬ್ರಹ್ಮನ ಅಜ್ಞಾನ ಅಳಿಯಿತು. ಮರುಳಸಿದ್ಧೇಶನ ಪಾದಕ್ಕೆರಗಿ ಭಕ್ತಿಯಿಂದ ಬೇಡಿಕೊಂಡನು. ಈ ರೀತಿ ಮರುಳಾದ ಬ್ರಹ್ಮ

ನನ್ನು ಕಂಡು 'ನನ್ನ ನಿವಾಸದಲ್ಲಿ ಇರುಹೋಗು' ಎಂದು ಆಜ್ಞಾಪಿಸಿದನು. ಆ ಮೇರೆಗೆ ಬ್ರಹ್ಮನು '**ಕೇತನಹಳ್ಳಿ**' ಎಂಬ ಪುರಕ್ಕೆ ಬಂದು ಕಡೆವಾಗಿಲಲ್ಲಿ ಮರುಳಸಿದ್ಧೇಶನ ಕಾಪಿಗಾಗಿ ನಿಂತನು. ನಡುಬಾಗಿಲಲ್ಲಿ ನಿಂತಿದ್ದ **ಕಾಲ ಭೈರವನು** ಮೃಡನಿಗೆ ಒಳಗೆ ಹೋಗಲು ಬಿಡದೆ ಆರ್ಭಟಿಸಿ ಖಡ್ಗವನ್ನೆತ್ತಿ ನಿಂತನು. ಉಡುಪತಿಯು ಇದನ್ನು ನೋಡಿ ನಕ್ಕು 'ಜಡಮತಿಯೆ ನಿನ್ನ ಸತ್ವವೆಷ್ಟೋ ? ಶಾಪ ಹಿಡಿ' ಎಂದನು. ಇದನ್ನು ಕೇಳಿ ಭೈರವದೇವನಿಗೆ ಆಶ್ಚರ್ಯವಾಯಿತು. ಬೆರಗಾಗಿ ನಿಂತ ಆತನನ್ನು ಮರುಳಸಿದ್ಧೇಶನು ಕರುಣ ದಿಂದ ನೋಡಿ 'ನಮ್ಮ ಹೊರಬಾಗಿಲಲ್ಲಿ ಕಾಪಿನಾಳಾಗಿ ನೀನಿರು' ಎಂದು ವರವಿತ್ತನು. ಒಳಬಾಗಿನಲ್ಲಿ ನಿಂದ **ಜಟ್ಟಿಗನು** ಶಿವನನ್ನು ಒಳಗೆ ಹೋಗಲು ಬಿಡದೆ ಖಡ್ಗವನ್ನೆತ್ತಿ ಹೊಡೆಯಲು ಅವನ ಶಿರವೇ ಕಳಚಿ ಬಿತ್ತು. ಹರನ ವರ ದಿಂದ ಆ ಶಿರವು ಪುರಹರನ ಅಪರಭಾಗದಲ್ಲಿ ಬರಲು, ಅವನು ಮರುಳೇಶನ ಕೃಪೆಪಡೆದು ಆತನ ಕಾಪಿನಾಳಾದನು. ಈ ರೀತಿ ಮೂರು ಬಾಗಿಲುಗಳನ್ನು ಕಳೆದು ಮುಂದೆ ಬರಲು ಈ ವರ್ತಮಾನ ಮಾಯೆಗೆ ಹೋಯಿತು. ಮಾಯೆ ಸಿದ್ಧಳಾದಳು. ಅವಳ ಸಹಾಯಕ್ಕೆ ತಾರಕ, ಗಜಾಸುರ, ಧೀರದಕ್ಷ, ಬ್ರಹ್ಮ, ಘನಸಿದ್ಧಿಯನ್ನು ಪಡೆದ ನವಕೋಟಿ ಸಿದ್ಧರು, ಕಪಿಲವರ್ಣದ ಕಾಳರಕ್ಕಸಿ ಯರು, ಲವಲವಿಕೆಯಿಂದ ಬಂದು, 'ದೇವಿ ಬೆಸಸು' ಎಂದು ಬೇಡಿ ಮರುಳ ಸಿದ್ಧನನ್ನು ಭವನೆಂದರಿಯದಲೆ ಅವನ ಸುತ್ತುವರಿದರು. ಅವನು ನಸುನಗೆ ಯೊಂದನ್ನು ನಕ್ಕು ತರಳೆಯರನ್ನು ನೋಡಿದಾಗ ಶಶಿಕಿರಣ ಸೋಂಕಿದ ಕಾಂತ ಕಲ್ಗಳಂತಾಯಿತು ಅವರ ಸ್ಥಿತಿ. ಅದಲ್ಲದೆ ಇನ್ನೊಂದು ಆಶ್ಚರ್ಯ ವೆಂದರೆ ವಿಷಮತೆಯ ಭಾವವೆಲ್ಲವೂ ತೊಲಗಿ ಶಾಂತಿ ನೆಲಸಿತು. ಮರುಳ ಸಿದ್ಧೇಶನ ಕಾಂತಿ ಮಸಗುತ್ತಿರಲಾಗಿ ಒಂಬತ್ತುಸಾವಿರ ಸತಿಯರು ವಿರಹಾ ನಲದಲ್ಲಿ ಬೆಂದು ಬೇಗುದಿಗೊಂಡರು. ಸಿದ್ಧೇಶನ ಸುತ್ತಲೂ ಪಸರವಿಡಿ ದೊಪ್ಪುವಂತಿರಲಾಗಿ ಅವರು ಉಟ್ಟಿದ್ದ ಸೀರೆಗಳೆಲ್ಲ ಕಳಚಿ ಬಿದ್ದುಹೋದುವು. ಬಟ್ಟಬಲ್ಮೊಲೆಯನ್ನು ಕುಬುಸದಿಂದ ಮುಚ್ಚುವುದನ್ನು ಕೂಡ ಅವರು ಮರೆತುಹೋದರು. ಸ್ತ್ರೀಯರ ಈ ಸ್ಥಿತಿಯನ್ನು ನೋಡಿ ಚಂದ್ರಶೇಖರನು ಗಹಗಹಿಸಿ ನಕ್ಕನು. ಆದರೆ ಈ ಸತಿಯರು ಈತನ ಬೆನ್ನ ಬಿಟ್ಟರೇನು ? ಅವ ನನ್ನು ಹಾಗೇ ಹಿಂಬಾಲಿಸಿದರು. ಈ ಪರಿಯ ವಿರಹಾಂಕುರದಿಂದ ನೊಂದ

ಸತಿಯರನ್ನು ಕಂಡು ಕಾಪಾಲಿ, ಕರಪಾತ್ರೆ, ಲಾಕುಳ, ಕೋಲು ಇವುಗಳನ್ನು ಧರಿಸಿ ಎದುರಿಗೆ ನಿಂತನು. ಈ ರೀತಿ ಭಿಕ್ಷು ವೇಷದಲ್ಲಿ ಶಿವನಿರಲು ಮಾಯೆ ಬಂದು ಅವನನ್ನು ನೋಡಿ ಮುಗುಳುನಗೆ ನಕ್ಕಳು. ಅವಳ ಇಚ್ಛೆ ಪೂರೈಸ ಬೇಕಾಗಿತ್ತು. ಅಣಿಮಾದಿ ಸಿದ್ಧರನ್ನು ತೃಣಮಾಡಲು ಬಲ್ಲ ಶಕ್ತಿಯುಳ್ಳ ಅವಳು ವಿಷವನ್ನು ಸಟ್ಟುಕದಲ್ಲಿ ತಂದು 'ಇದನ್ನು ಬಡಿಸುವೆ; ಉಣ್ಣು ತ್ತೀಯಾ?' ಎಂದು ಮರುಳಸಿದ್ಧನಿಗೆ ಕೇಳಿದಳು. ಆತನು ಸಿದ್ಧನಾಗಿ 'ನೀಡು ಮತ್ತಷ್ಟು ನೀಡು, ಹಸನಾಯ್ತು ಈ ಭಿಕ್ಷೆ. ಇದನ್ನು ಮಾಡಿದವ ರಾರು? ಹೇಳು' ಎಂದು ಉತ್ತರಿಸಿದನು. ಇಷ್ಟೇ ಅಲ್ಲ ಆತನು ಗುರುವಿ ನಾಜ್ಞೆಯಿಂದ ಮಾಯೆಗೆ 'ತುಂಬಿದ್ದ ವಿಷವನೆಲ್ಲವ ನೀಡು, ಉಂಡು ಬಿಡು ತ್ತೇನೆ. ನಮ್ಮ ಸತ್ವವನ್ನಾದರೂ ನೋಡು' ಎಂದೆನ್ನುತ್ತ ಮಾಯೆಯ ಮುಖ ನೋಡಿದ. ಅವನಿಗೆ ಕೋಪ ಆವರಿಸಿತ್ತು. ಭ್ರಮರಕ್ಕೆ ವೈರಿಯಾದ ಚಂಪಕ ಪುಷ್ಪದಂತಿದ್ದ ಅವಳ ಮೂಗನ್ನು ಹಿಂದುಮುಂದು ನೋಡದೆ ಕೊಯ್ದು ಹಾಕಿ ದನು. ಈ ವರ್ತಮಾನ ಕ್ಷಣಾರ್ಧದಲ್ಲಿ ಎಲ್ಲೆಲ್ಲೂ ಹಬ್ಬಿತು. ಜೋಗಿಣಿಯ ರೆಲ್ಲ ಈತನನ್ನು ಮುತ್ತಿದರು. ಕರಟನಿಗೂ ಹಲವರು ಈ ಸುದ್ದಿಯನ್ನು ಒಯ್ದರು. ಕರಟಾಸುರನು ನವನಾಥಸಿದ್ಧರ ಸೈನ್ಯದೊಂದಿಗೆ ಬಂದು ಮರುಳ ಸಿದ್ಧೇಶ್ವರನೊಂದಿಗೆ ಯುದ್ಧ ಹೂಡಿದನು. ಭಯಂಕರ ಕದನ ನಡೆಯಿತು. ಗುರುರೂಪವನ್ನು ಹೊಂದಿದ ಮರುಳಸಿದ್ಧೇಶ್ವರನು ಕರಟಾಸುರನೊಂದಿಗೆ ಕರವಾಳ್ಗಳಿಂದಲೂ ಸುರಗಿಯಿಂದಲೂ ಬಿರುಸಾಗಿ ಯುದ್ಧ ಮಾಡಿದನು. ಮಾಯಾಕೋಳಾಹಳನಾದ ಮರುಳೇಶನು ಕರಟನಿಗೆ ಖಡ್ಗದಿಂದ ನಸುತಿವಿ ಯಲು ಅವನ ಬಾಯಿಯಿಂದ ರಕ್ತ ಧಾರೆಧಾರೆಯಾಗಿ ಹರಿಯಲಾರಂಭಿಸಿತು. ದೇಹ ಧರೆಗುರುಳಿತು, ಪ್ರಾಣ ಹಾರಿಹೋಯಿತು. ದೇವತೆಗಳಿಗೋ ಆನಂದವೇ ಆನಂದ. ಅವರೆಲ್ಲ ಮರುಳನನ್ನು ಕೊಂಡಾಡಿದರು. ಹೂವಿನ ಮಳೆಯನ್ನೇ ಸುರಿಸಿಬಿಟ್ಟರು. ದಿಗ್ದೆಸೆಗಳೆಲ್ಲದರಲ್ಲೂ ದುಂದುಭಿಗಳು ಮೊಳ ಗಿದುವು. ಶಾಕಿನಿ ಡಾಕಿನಿಯರು ನೆರೆದರು. ಸುರಿದ ನೆತ್ತರ ಕಾಲುವೆ ಕಂಡು ಉಬ್ಬಿ ಅದಕ್ಕೆ ಕಾರಣನಾದ ಮರುಳೇಶನನ್ನು ಬಾಯ್ತುಂಬ ಹೊಗಳಿದರು. ಸತ್ತುಬಿದ್ದಿದ್ದ ಕರಟನ ತಲೆಯನ್ನೂ ಕೈಕಾಲ್ಗಳನ್ನೂ ಕತ್ತರಿಸಿ, ಮಾಂಸ ವನ್ನು ಕಿತ್ತು, ಕರುಳುಗಳನ್ನು ಉಜ್ಜಿ ತೆಗೆದು, ಆ ಮೃತಶರೀರವನ್ನು

ಅಶುದ್ಧವಾಗುವಂತೆ ಮಾಡಿ, ನರದ ನೇಣುಗಳಿಂದ ಬಲಿದಾಯತವ ಮಾಡಿ, ಕರದಲ್ಲಿ ಹಿಡಿದಿದ್ದ ಕುಡುಗಳಿಂದ ಕರಡೆಯ ಬಾರಿಸುತ್ತ ಆ ಮರುಳ್ಗಳು ಕುಣಿದಾಡಿದುವು.

ಆದಿಶಕ್ತಿಯನ್ನು ತನ್ನ ನಿವಾಸಕ್ಕೆ ಕಳುಹಿಸಿ, ಹೆಂಗಳೆಯರ ಭಂಗಪಡಿಸಿ, ನವನಾಥ ಸಿದ್ಧರೆಲ್ಲರನ್ನೂ ಕುರಿಗಳನ್ನು ಮಾಡಿ, ಮಾಯೆಯ ಬೆನ್ನೆಲುವ ಕಿತ್ತು ಅದನ್ನೇ ವೀಣೆಯ ಕೋಲುಮಾಡಿ ಎರಡು ಸ್ತನಗಳನ್ನು ಕೊಯ್ದು ಅವನ್ನೇ ವೀಣೆಯ ಕಾಯಿಮಾಡಿ ಹಲ್ಗಳನ್ನು ಮುರಿದು ಅವುಗಳನ್ನೇ ತಂತಿಯನ್ನು ಹಿಡಿಯುವ ಹಲ್ಲುಗಳನ್ನಾಗಿಸಿ, ಸಪ್ತಸ್ವರದ ವೀಣೆಯನ್ನು ನುಡಿಸುತ್ತ ಪನ್ನಗಾಭರಣನಾದ ಮರುಳೇಶ್ವರನು ಚೆನ್ನೆಯರೊಡಗೂಡಿ ತನ್ನ ನಿವಾಸಕ್ಕೆ ತಿರುಗಿ ಬಂದನು. ತಾನು ನಿಂತ ಸ್ಥಳದಲ್ಲಿ ಕೈಯ ಕತ್ತಿಯನ್ನು ಹಾಕಿ, ಘನಲಿಂಗವನುಪಾಯದಿಂ ಬಲಿದು ಆ ಸ್ಥಳಕ್ಕೆ ಕಾಳ್ಕಜ್ಜಿನಿ ಎಂದು ಹೆಸರಿಟ್ಟು ಮಾಯಾಕಾರನಾದ ಆತನು ಮೆರೆದನು. ಆ ಊರು ನಿಜಕ್ಕೂ 'ಪರಮ ಆನಂದರಿರುತಿಹ ನಿತ್ಯದುಪ್ಪರಿಗೆ' ಯಾಯ್ತು. ಈ ರಮ್ಯವಾದ ತಾಣದಲ್ಲಿ ಮಹಾಮಹಿಮನಾದ ಮರುಳಸಿದ್ಧೇಶನು ಮೆರೆದನು. ಮಾಯೆಯ ಪವಾಡವನ್ನು ಗೆಲಿದ ಆತನ ನಿವಾಸವು ಉಜ್ಜನಿಪುರವೇ ಆಯಿತು.

## ಸಂಧಿ ೫

ಅನಂತರ ತೆಲುಗುಬಾಳಿಗೆ ಬಂದು ಮರುಳಸಿದ್ಧೇಶ್ವರನು ಒಕ್ಕಲಿಗ ಸಿದ್ದನನ್ನು ಕರುಣಿಸಿದನು. ತೆಲಗುಬಾಳಿನ ಸಂತತಿಯೆಲ್ಲ ಈತನನ್ನು ಚಾಂಗು! ಭಲರೆ! ಎಂದು ಹೊಗಳಿತು. ಅವರಿಗೆ ಮಠವನ್ನು ಕೊಟ್ಟು ಗುರುಸೇವೆಯನ್ನು ಮಾಡಿರೆಂದು ಹರಸಿದನು.

ತನ್ನ ಗುರುವರೇಣ್ಯನಾದ ರೇವಣನನ್ನು ಕಂಡು ಆತನ ಚರಣಕ್ಕಭಿವಂದಿಸಿ, ಸುಶಾಂತ ಮಲ್ಲೇಶ್ವರನ ವರವನ್ನು ಪಡೆದನು.

ಕಗ್ಗಲ್ಲಪುರದ ಕೇತನಹಳ್ಳಿ ಮಧ್ಯದೊಳು ಇದ್ದ ಕಾಡು ತನಗೆ ಹಿತಕರವೆಂದು ಮರುಳಸಿದ್ಧೇಶನಿಗೆ ತೋರಿತು. ತಾನು ನಿಂತ ಸ್ಥಳದ ಮಣ್ಣಿನ ಯೋಗ್ಯತೆಯನ್ನು ಒರೆಹಚ್ಚಿ ನೋಡಲು ವಾರಣಾಸಿಯಿಂದಲೂ ಮತ್ತಿತರ

ಸುಕ್ಷೇತ್ರಗಳಿಂದಲೂ ಮಣ್ಣನ್ನು ತರಿಸಿ ತೂಗಿ ನೋಡಿದಾಗ ಯಾವದೂ ಇದಕ್ಕೆ ಸರಿಬಾರದಾಯಿತು. ರಾಮೇಶ್ವರದ ಮೃತ್ತಿಕೆಯನ್ನೂ ತರಿಸಿ ತೂಗಿ ನೋಡಿದನು. ಅದೂ ಸರಿಬೀಳಲಿಲ್ಲ. ಆಗ ತಾನು ನಿಂತ ಸ್ಥಳವೇ ಘನ ನೆಂದರಿತನು. ಪ್ರೇಮದಿಂದ ಹೊಗಳಿದನು. ಗುರುನಿರೂಪದಂತೆ ಆ ಪುರ ದೊಡೆಯುನನ್ನು ಕರೆಯಿಸಿ 'ವರಕೈಯ್ಯಲಿಪ್ಪತ್ತು ನಾಲ್ಕು ಚೌಕದ ಧರೆಯನು ಪಣವನಿತ್ತು' ಕೊಂಡುಕೊಂಡನು. ಕಲಿಯುಗದಾದಿಯು ಪ್ರಾರಂಭವಾಗು ತ್ತಿದ್ದುದನ್ನು ಕಂಡು ಅಣಿಮಾದಿ ಅಷ್ಟಸಿದ್ಧಿಯನ್ನು ವಿಾರಿ, ಯೋಗದಲ್ಲಿ ಲೀನವಾಗಬೇಕೆಂದು ನಿಶ್ಚಯಿಸಿ ಭೂಮಿಯಲ್ಲಿ ನಿಕ್ಷೇಪವಿಡಲು ಆಜ್ಞಾಪಿಸಿ ತಾನು ಸಮಾಧಿಸ್ಥನಾದನು.

ಈ ರೀತಿ ಮರುಳನು ಸಮಾಧಿಸ್ಥನಾದ ಹೊಲದಲ್ಲಿ **ಮರುಳಗೊಂಡ** ನೆಂಬವನು ಭೂಮಿಯಲ್ಲಿ ಉಳುತ್ತಿರಲಾಗಿ, ಸಿದ್ಧೇಶನ ತಲೆಗೆ ರಂಟೆಯ ಕುಳವು ತಾಗಿತು. ಅದರಿಂದ ಆತನಿಗೆ ಗಾಯವೂ ಆಯಿತು. ಕೂಡಲೇ 'ಪಾಪರೂಪಿನ ಕರ್ಮಗಳು ನೀವು ಹೋಗಿ' ಎನ್ನುತ್ತ ಶಾಪವಿತ್ತನು. ಇದರ ಪರಿಣಾಮವಾಗಿ ಅವರು ಪುನಃ ಪುನಃ ಉದಯಿಸಿ ಬಂದು ಮರುಳೇಶನನ್ನು ಬೇಡಿಕೊಳ್ಳಲು ಅವನಿಗೆ ಕರುಣೆಯಿಂದ ವರವಿತ್ತನು.

ವಿಶ್ವದಲ್ಲಿ ತನಗೊಂದು ದೇವಾಯತನವಾಗಬೇಕೆಂದು ಬಯಿಸಿ ಜಕಣಾ ಚಾರ್ಯರನ್ನು ಕರೆಯಿಸಿ ಮುಕ್ಕಾಲು ಮೂರು ಘಳಿಗೆಯಲ್ಲಿ 'ದೇವಾಲಯ' ವನ್ನು ನಿರ್ಮಿಸು ಎಂದು ಆಜ್ಞಾಪಿಸಿದನು. ದೇವನಾಜ್ಞೆಯಾಗುವುದೊಂದೇ ತಡ ದೇಗುಲವು ಸಿದ್ಧವಾಯಿತು. ಒಂದು ಕೋಣೆಯಲ್ಲಿ ಹಲಗೆಯ ಕಡು ಗಲಿ ವೀರೇಶನು ನೆಲಸಿದನು. ಅಭೂತಪೂರ್ವವಾಗಿ ಮೈವೆತ್ತು ನಿಂತ ಶ್ರೀ ಸಿದ್ಧೇಶ್ವರ ದೇವಾಲಯದಲ್ಲಿ ೧೬ ಕೋಣೆಗಳು ಏರ್ಪಟ್ಟವು. ಈ ದೇವಾ ಲಯದಲ್ಲಿ **ಸೂರ್ಯಸಿಂಹಾಸನದ ಮಠಪತಿಗಳು ಶೋಭಿಸಿದರು.** ಅವ ರೆಲ್ಲರಿಗೆ ಇಲ್ಲಿ ನೆಲೆಯಾಯಿತು. ಅದೊಂದು ಮಹಾಕ್ಷೇತ್ರವಾಯಿತು. ಸಹಸ್ರ ಜನ ಭಕ್ತರು ಇಲ್ಲಿರಲು ಅನುಗೈದರು. ಮರುಳಸಿದ್ಧೇಶ್ವರನ ಅಪರಭಾಗದಲ್ಲಿ ಗದ್ದುಗೆಯ ರಾಮಿತಂದೆಗಳು ನಿಂತರು. ಇದರಂತೆ ಹಳೆಯ ಬೀಡಿನಿಂದ ಬಂದ ಬಳಿಗಾರನಾದ ಶರಣನಿಗೂ ಅಪರಭಾಗದಲ್ಲಿ ಸ್ಥಾನ ಸಿಕ್ಕಿತು. **ಜಟ್ಟಿಗ ನಿಗೆ** ತನ್ನ ಎಡದ ಕಟ್ಟೆನಲ್ಲಿ ಸ್ಥಲವನ್ನಿತ್ತು 'ಕಪ್ಪಕಾಣಿಕೆಗಳಿಲ್ಲ ನಿನಗೆ ಸಲ್ಲಲಿ'

ಎಂದು ವರವಿತ್ತನು. ದೇವಾಲಯದ ಶಿಖರಾಗ್ರದಲ್ಲಿ ಮೆರೆವ ಅರುವತ್ತು ಮೂವರು ಪುರಾತನರು ಶೋಭಿಸಿದರು. ಭಕ್ತಸಂತತಿಯೆಲ್ಲ ಮಹಾಮಹಿಮನಾದ ಮರುಳೇಶನನ್ನು ಮನಸಾರ ಹೊಗಳಿತು.

ದೇವಸ್ಥಾನದ ಶಿಖರಾಗ್ರದಲ್ಲಿ 'ಸುಣ್ಣದ ಪವಾಡವನು ಗೆಲಿದ ಸಿದ್ಧೇಶ್ವರಂ ತಣ್ಣಗಾಗಲಿ ಎಂದು ವರುಷಕಾಲಂಗಳೊಳು ಎಣ್ಣೆಯನು ಎರೆದು' ಭಕ್ತಜನವೆಲ್ಲ ಓಂನಮೋ ಎಂದು ವಂದಿಸುವುದು. ಅನೇಕರು ಹುಣ್ಣಿಮೆಯ ಕಾಲದಲ್ಲಿ ಹರಕೆಯ ಮಾಡುವರು. ಮರುಳಸಿದ್ಧೇಶ್ವರನ ಮಹಿಮೆ ಅಖಂಡವಾಗಿ ಹಬ್ಬಿತು.

### ಸಂಧಿ ೬

ಉಜ್ಜನಿಯಪುರವು ಅಬ್ಜಭವನಿಂದಲೇ ನಿರ್ಮಾಣವಾದಂತೆ ಶೋಭಿಸಿತು. ಪುರದ ಸೌಂದರ್ಯವಂತೂ ವರ್ಣನಾತೀತ.

ಕಾಲಹರ ಕರ್ಮಹರನಾದ ಸಿದ್ಧೇಶ್ವರನು ಓಲಗದೊಳು ಶರಣಾಳಿಯಿಂದ ಕೂಡಿ ಸಮತೆಯಲ್ಲಿರಲು ಓಲಗಕ್ಕಾಗಿ ಕಾಳದಂಡಿಗೆ, ವೀಣೆ ಮೊದಲಾದ ವಾದ್ಯಮೇಳದೊಂದಿಗೆ ಶೃಂಗಾರವೇ ಮೈವೆತ್ತು ಬಂದಂತಿದ್ದ ಸ್ತ್ರೀಯರು ಬಂದರು. ದೇವರೆದುರು ನರ್ತನಕ್ಕೆ ಪ್ರಾರಂಭವಾಯಿತು. ನಾಲ್ಕನೆಯ ಮನೆಯಲ್ಲಿ ಸ್ವರವನ್ನು ಸಂಯೋಜಿಸಿ ದಿವ್ಯ ನರ್ತನವನ್ನವರು ಪ್ರಾರಂಭಿಸಿದರು. ಇತ್ತ ಮತ್ತೆ ಕೆಲವರು ವಚನಗಾಯನಕ್ಕೆ ಮೊದಲು ಮಾಡಿದರು. ಈ ರೀತಿಯಾಗಿ ಭಕ್ತಸಂತತಿ ದೇವದೇವನ ಮಹಿಮೆಯನ್ನು ಪರಿಪರಿಯಿಂದ ಹೊಗಳಿ ಹಾಡಿ ಆತನ ಸೇವೆಯಲ್ಲಿ ಲೀನರಾದರು. ಆಗುಹೋಗಿಲ್ಲದ ಅಪ್ರತಿಮನಾದ ಸಿದ್ಧೇಶ ತ್ಯಾಗಿಗಳಿಗೆ ತನ್ನ ನಿವಾಸದಲ್ಲಿ ಸ್ಥಾನವಿತ್ತು ತಾನು ಯೋಗಾಸನದಲ್ಲಿ ಶೋಭಿಸಿದನು.

## ಮರುಳಸಿದ್ಧನ ಗ್ರಂಥಗಳು

ಮರುಳಸಿದ್ಧ 'ದಾರುಕ ಭಾಷ್ಯ'ವೊಂದನ್ನು ರಚಿಸಿರುವುದಾಗಿ 'ವಿಭೂತಿ' ಪತ್ರಿಕಾ ಸಂಪಾದಕರು ಅಭಿಪ್ರಾಯ ಪಡುತ್ತಾರೆ. ಶ್ರೀಕರ ಭಾಷ್ಯದಲ್ಲಿ ಇದರ ಬಗ್ಗೆ ಉಲ್ಲೇಖವಿಲ್ಲ. ದಾರುಕಭಾಷ್ಯ ಸಿಕ್ಕಿಲ್ಲ.

ಮರುಳಸಿದ್ಧ ವಚನಕಾರನೆಂದು ತಿಳಿಯಬರುತ್ತದೆ. ಅರವತ್ತೆಂಟು ಸಾವಿರ ವಚನಗಳನ್ನು ಮರುಳಸಿದ್ಧ ಬರೆದಿದ್ದಾನೆಂದು ಸಿದ್ಧರಾಮ ತಿಳಿಸುತ್ತಾನೆ. ಈ ಬಗ್ಗೆ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರು * ಹೀಗೆ ಹೇಳುತ್ತಾರೆ.

" 'ರೇವಣ್ಣ ಪ್ರಭು' ಎಂಬ ಅಂಕಿತವುಳ್ಳ ಒಂದು ವಚನ ದೊರೆತಿದೆ. ಈ ವಚನವು ಮರುಳಸಿದ್ಧೇಶ್ವರನಿಗೆ ಸೇರಿದಂತೆ ತಿಳಿದುಬರುತ್ತದೆ. ಇವನು ವೀರಶೈವಾಚಾರ್ಯರ ಪಂಚಕರಲ್ಲೊಬ್ಬನು. ಶ್ರೀಪತಿ ಪಂಡಿತನು ತನ್ನ 'ಶ್ರೀಕರ ಭಾಷ್ಯ'ದ ಪ್ರಾರಂಭದಲ್ಲಿ ಮರುಳಸಿದ್ಧನನ್ನು ಸ್ತುತಿಸುವಾಗ 'ಸವ್ಯಗ್ರೇವಣ ದೇಶಿಕೇಂದ್ರ ಧೃತಷಲ್ಲಿಂಗಾವಧಾನೋಜ್ವಲಂ' ಎಂದು ಹೇಳಿರುವುದರಿಂದ ಈತನು ರೇವಣಸಿದ್ಧನ ಶಿಷ್ಯನೆಂದು ತೋರಿಬರುವುದು. ಮರುಳದೇವ ಎಂಬೊಬ್ಬನು ವಚನಗಳನ್ನು ಬರೆದಿರುವನೆಂದು 'ಕವಿಚರಿತೆ' ಯಲ್ಲಿ (I ೨೦೦) ಹೇಳಿದೆ. ಆದರೆ ಇವನ ಅಂಕಿತವನ್ನು ಅಲ್ಲಿ ಕೊಟ್ಟಿಲ್ಲ. ಆದುದರಿಂದ ಮರುಳಸಿದ್ಧನು ಆ ಮರುಳದೇವನೆ ಎಂದು ನಾವು ಹೇಳಲಾರೆವು. ಈ ಮರುಳಸಿದ್ಧೇಶ್ವರನ ವಚನಗಳೆಲ್ಲವೂ ಪೂರ್ಣವಾಗಿ ದೊರೆತರೆ ಅವನ ಗುರು ರೇವಣಸಿದ್ಧನ ವಿಚಾರವಾಗಿ ಏನಾದರೂ ಸಂಗತಿಗಳು ತಿಳಿದು ಬರಬಹುದು; ಅವನ ಶಿಷ್ಯನ ಉಕ್ತಿಯೆಂದು ನಾವು ಅದಕ್ಕೆ ಪ್ರಾಮಾಣ್ಯವನ್ನು ಕೊಡಬಹುದು. ಇವನು ಯಾವ ಕಾಲದಲ್ಲಿದ್ದನು ಎಂಬುದನ್ನು ಹೇಳಲಾರೆವು. ನಮಗೆ ಸಿಕ್ಕಿದ ಒಂದು ವಚನವನ್ನು ಇಲ್ಲಿ ಕೊಡುತ್ತೇವೆ.

" ಆಲಿಸುವ ಶ್ರವಣವು ಮೇಲೆ ಆಕಾಶವನಡರಲು ಉಲುಹು
ನಿರ್ಭೂತಚಿತ್ತ ಸಮಾಧಾನವೆಯ್ದಲು ಕಾಲಕರ್ಮ ಭವಂಗಳ
ಗೆಲುವುದಿದೇನು ಸೋಜಿಗವು ಹೇಳಾ ರೇವಣ್ಣ ಪ್ರಭುವೆ "

**ವಿಮರ್ಶೆ :** ದೇವಸುತ ಹೆಚ್ಚು ಬಳಕೆಯಲ್ಲಿಲ್ಲದ ಈ ವಸ್ತುವನ್ನು ಆಯ್ದುಕೊಳ್ಳುವುದಕ್ಕೆ ಅವನ ಭಕ್ತಿಯೂ, ಸಂಪ್ರದಾಯ ಪ್ರೇಮವೂ ಕಾರಣವಾಗಿರಬಹುದು. ಆದರೆ ಮರುಳಸಿದ್ಧನಂತಹ ಮಹಾವ್ಯಕ್ತಿಯ ಜೀವನ

---

* ಕೆಲವರು ವಚನಕಾರರು "—ಪ್ರಬುದ್ಧ ಕರ್ನಾಟಕ, ಸಂ. ೧೯, ಸಂ. ೧, ಪುಟ ೧೯.

ಚರಿತ್ರೆಯನ್ನು ಬರೆಯುವ ಪಾಂಡಿತ್ಯ, ಪ್ರತಿಭೆ ದೇವನಲ್ಲಿಲ್ಲವೆಂಬುದು ನಿರ್ವಿವಾದ. ದೇವನಿಗೆ ಹರಿಹರ ರಾಘವಾಂಕರ ಕಾವ್ಯಗಳ ಪರಿಚಯ ಸಂಪೂರ್ಣವಾಗಿತ್ತು. ಪ್ರಾಯಶಃ ರಾಘವಾಂಕನ 'ಸಿದ್ಧರಾಮ ಚಾರಿತ್ರ' ವನ್ನು ನೋಡಿ ಹಾಗೇ ತಾನೂ ಮರುಳಸಿದ್ಧನ ಚಾರಿತ್ರವನ್ನು ಬರೆಯ ಬೇಕೆಂದು ಇವನು ಮನಸ್ಸು ಮಾಡಿರಬೇಕು. ರಾಘವಾಂಕನ ಉಪಮೆ ಗಳನ್ನೂ ಹಿಡಿನುಡಿಗಳನ್ನೂ ನಿರ್ದಾಕ್ಷಿಣ್ಯವಾಗಿ ಬಳಸಿಕೊಂಡಿರುವ ದೇವ ಅವನ ಹೆಸರನ್ನು ಎತ್ತದಿರುವುದು ಸೋಜಿಗವಾಗಿದೆ. ಈ ಕಾವ್ಯದ ಬಗ್ಗೆ ಶ್ರೀ ದೇವೀರಪ್ಪನವರು* ಹೇಳಿರುವ ಮಾತುಗಳನ್ನು ನಾವು ಪೂರ್ಣವಾಗಿ ಅನುಮೋದಿಸುತ್ತೇವೆ.

"ಈ ಕೃತಿಯು ಮುಖ್ಯವಾಗಿ ಚರಿತ್ರೆ ಎಂದು ಹೇಳಬಹುದಾದರೂ ಇದರಲ್ಲಿ ಕಾವ್ಯಗುಣಗಳಿಲ್ಲದೆ ಇಲ್ಲ. ಅಲ್ಲಲ್ಲಿ ಕವಿಯ ಪಾಂಡಿತ್ಯವೂ ಪ್ರತಿಭೆ ಯೂ ನಮ್ಮ ಕಣ್ಣಿಗೆ ಗೋಚರವಾಗುವುವು. ಗ್ರಂಥದಲ್ಲಿ ಬರುವ ಕೆಲವು ಉಪಮೆ ರೂಪಕಾದಿಗಳು ಅಲಂಕಾರಾದಿಗಳು ಮನಮೋಹಕವಾಗಿವೆ. ಓದಿ ದರೆ ಚಿಕ್ಕಮಕ್ಕಳಿಗೂ ಅರ್ಥವಾಗುವಷ್ಟು ಸರಳಶೈಲಿಯಲ್ಲಿ ಬರೆಯುವುದು ಕವಿಯ ಒಂದು ಮುಖ್ಯ ಗುಣ. ಗ್ರಂಥದಲ್ಲಿ ಎಲ್ಲಿಯೂ ಪ್ರಕೃತ ವಿಷಯಕ್ಕೆ ಸಂಬಂಧಪಡದ ಕಥೆಗಳೂ ಉಪಕಥೆಗಳೂ ಆಖ್ಯಾನಗಳೂ ಬಂದಿಲ್ಲ. ಓದುಗ ರಿಗೆ ತಲೆಬೇನೆ ತರುವ ವರ್ಣನೆಗಳೂ ಬಂದಿಲ್ಲ. ಆದರೆ ಮರುಳನು ಹುಟ್ಟಿದ್ದು, ಅವನು ಊರು ಬಿಟ್ಟದ್ದು, ಅವನ ಪವಾಡ ವರ್ಣಿತವಾಗಿರು ವದೇ ಹೊರತು ಅವನ ನೈತಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಯು ನಿರೂ ಪಿಸಲ್ಪಟ್ಟಿಲ್ಲ. ಒಟ್ಟಿನಲ್ಲಿ ಇದು ಉತ್ತಮ ತರಗತಿಯ ಕಾವ್ಯವಲ್ಲವೆಂದು ಹೇಳ ಬಹುದು."

ಮರುಳಸಿದ್ಧನ ಕಥೆ ಐದನೆಯ ಸಂಧಿಗೇ ಮುಗಿಯುತ್ತದೆ. ಕವಿ ಅನವಶ್ಯಕವಾಗಿ ಆರನೆಯ ಸಂಧಿಯೊಂದನ್ನು ಸೇರಿಸಿ ಉಜ್ಜಯಿನಿ ಪುರವರ್ಣ ನೆಯ ವ್ಯಾಜದಲ್ಲಿ ತನ್ನ ಶೃಂಗಾರಪ್ರಿಯತೆಯನ್ನು ಪ್ರದರ್ಶಿಸಿದ್ದಾನೆ. ದೇವ

---

* ಸಿದ್ಧಲಿಂಗ ಚಾರಿತ್ರ: ಲಿಂ. ವಿ. ಸಂ. ಪತ್ರಿಕೆ. ಸಂ. ೨, ಸಂಚಿಕೆ ೩, ಪುಟ ೨೯.

ನಲ್ಲಿ ಇತಿಮಿತಿಜ್ಞಾನ ಚೆನ್ನಾಗಿ ಕೂಡಿದೆಯೆಂಬುದಕ್ಕೆ ಸಂಶಯವಿಲ್ಲ. ಅನೇಕ ಸ್ಥಳಗಳನ್ನು, ಪವಾಡಗಳನ್ನು ದೃಶ್ಯಗಳನ್ನು ವರ್ಣಿಸಿದರೂ ಎಲ್ಲಿಯೂ ಬೆಳಸದೆ ಮಿಂಚಿನ ವೇಗದಲ್ಲಿ ಹೋಗಿದ್ದಾನೆ. ಇದೇ ವಸ್ತುವನ್ನು ಬೇರೆ ಕವಿ ಇದರ ನಾಲ್ಕರಷ್ಟಾದರೂ ಬೆಳಸಿ ಹದಗೆಡಿಸುತ್ತಿದ್ದ.

ದೇವ ಪಂಡಿತ ಕವಿಯೆಂದು ಒಪ್ಪುವುದು ಕಷ್ಟ. ವ್ಯಾಕರಣ ಛಂದಸ್ಸುಗಳಲ್ಲಿ ಅವನ ಪ್ರಾವೀಣ್ಯ ವೊಟಕೆ. ಶಿವಸ್ತುತಿ ರೂಪವಾದ ಹಲವು ಪದ್ಯಗಳಲ್ಲಿ ಯಾವದೂ ಮನಸ್ಸು ಮುಟ್ಟುವುದಿಲ್ಲ. ಹರಿಹರನ ಉತ್ಕಟ ಭಕ್ತಿಯನ್ನು ಕಂಡು ಅವನ ರಗಳೆಗಳ ರಸಗಂಗೆಯಲ್ಲಿ ಮಿಂದವರಿಗೆ ದೇವನ ಶುಷ್ಕ ವರ್ಣನೆಗಳು ನೀರಸವಾಗಿ ಕಾಣುವುದರಲ್ಲಿ ಸಂದೇಹವಿಲ್ಲ.

ಗದ್ದುಗೆಯ ರಾಮಿತಂದೆಯ 'ಗುರುಬೋಧೆ' ಉಪಲಬ್ಧವಿಲ್ಲದಿರುವಾಗ ದೇವನ ಈ ಕಾವ್ಯವಾದರೂ ಇರುವುದು ನಮ್ಮ ಭಾಗ್ಯ. ವೀರಶೈವಾಚಾರ್ಯ ಪಂಚಕರಲ್ಲಿ ಒಬ್ಬರಾದ ಮರುಳಸಿದ್ಧರ ಬಗ್ಗೆ ಇವನು ಅನೇಕ ವಿಷಯಗಳನ್ನು ಸಂಗ್ರಹಿಸಿದ್ದಾನೆ. ಈ ಮರುಳಸಿದ್ಧನೇ ಆಚಾರ್ಯರಲ್ಲಿ ಒಬ್ಬರಾದ ಮರುಳಾರಾಧ್ಯರೋ ಅಲ್ಲವೋ ಎಂಬ ವಿಷಯ ತೊಡಕಿನದು. ಇದರ ಚರ್ಚೆ ಅನವಶ್ಯಕ ರೋಷ ಕೋಪಗಳಿಗೆ ಮೂಲವಾಗುವುದರಿಂದ ನಾವು ಅದಕ್ಕೆ ಕೈಹಾಕುವುದಿಲ್ಲ. ಆದರೆ ದೇವನ ಕಾವ್ಯದಲ್ಲಿ ನಿರೂಪಿತವಾಗಿರುವ ವಿಷಯ, ಸ್ಥಳಗಳಿಗೂ ಉಜ್ಜಯಿನಿಯ ಅವಶೇಷಗಳಿಗೂ ಹತ್ತಿರದ ಬಾಂಧವ್ಯವಿರುವುದನ್ನು ಈ ಮೊದಲೇ ಸೂಚಿಸಲಾಗಿದೆ.

ವೀರಶೈವ ಕವಿಗಳು, ಪುರಾಣಕಾರರು ಸಾಮಾನ್ಯವಾಗಿ ತಮ್ಮ ಕಥೆಯನ್ನು ಕೈಲಾಸದಿಂದಲೇ ಆರಂಭಿಸುವುದು ರೂಢಿ. ಮಹಾಪುರುಷರು ಭೂಮಿಯಲ್ಲಿ ಅವತರಿಸುವುದಕ್ಕೆ ಕೈಲಾಸದಲ್ಲಿ ಅವರಿಗೆ ದೊರೆತ ಶಾಪವೇ ಕಾರಣವೆಂದು ಕಥಿತವಾಗುತ್ತದೆ. ದೇವ ಶಾಪಪ್ರಸಂಗವನ್ನು ಉಪಯೋಗಿಸದೆ ಹರ ಉಮೆಯರಿಗಾದ ಸ್ಪರ್ಧೆ, ಬಲಾಬಲಗಳ ಪ್ರಶ್ನೆಯನ್ನು ಮುಂದೊತ್ತಿ* ತನ್ನ ನಾಯಕನ ಮಹತ್ವವನ್ನು ಮೊದಲೇ ಸ್ಥಾಪಿಸಿದ್ದಾನೆ.

---

* ಹರಿಹರ ಚಾಮರಸರು ಅಲ್ಲಮಪ್ರಭುವಿನ ಜನನಕ್ಕೆ ಇದೇ ಕಾರಣವನ್ನು ಹೇಳುತ್ತಾರೆ. ದೇವ ಈ ವಿಷಯವನ್ನು ಹರಿಹರನಿಂದ ಎತ್ತಿಕೊಂಡಿರಬಹುದೇ?

ಮುರುಳಸಿದ್ಧನಾಗಿ ಬರುವ ಚರಲಿಂಗಮೂರ್ತಿ ಮರ್ತ್ಯಲೋಕವನ್ನು 'ನರಲೋಕದ ಇರವು ಪುಣ್ಯದ ಬೀಡು' ಎಂದು ತಿಳಿದಿರುತ್ತಾನೆ. ಇದು ಸ್ವಾರಸ್ಯವಾದ ಸುಧಾರಣೆ. ಮುರುಳಸಿದ್ಧ ಶಾಪಗ್ರಸ್ತನಾಗಿ ಮರ್ತ್ಯಲೋಕಕ್ಕೆ ಬರದೆ, ಒಂದು ಮಹತ್ಕಾರ್ಯವನ್ನು ಸಾಧಿಸುವುದಕ್ಕೆ ಬಂದನೆಂಬ ಅಂಶ ಕಥಾನಾಯಕನ ಪಾತ್ರಕ್ಕೆ ಹೆಚ್ಚಳವನ್ನುಂಟುಮಾಡುತ್ತದೆ.

ಆದರೆ ಶಿಲಾದಮುನಿ ಪ್ರಕರಣವನ್ನು ಹೇಳುವಾಗ ಈ ವಿಚಾರದೃಷ್ಟಿ ದೇವನಲ್ಲಿ ಕಾಣೆಯಾಗಿದೆ. ಶಿವಪೂಜೆಯ ಸಮಯದಲ್ಲಿ ಶಿಲಾದನ ಹೆಂಡತಿ ಸುಪ್ರಭೆ ಋತುವಾದಳೆಂಬ ಕಾರಣದಿಂದ ಹೊಲೆಯರಲ್ಲಿ ಜನಿಸು ಎಂದು ಶಾಪ ಪಡೆಯುತ್ತಾಳೆ. ನಿಸರ್ಗ ನಿಯಮಕ್ಕನುಗುಣವಾಗಿ ಋತುವಾದುದು ಆಕೆಯ ತಪ್ಪಲ್ಲ. ಇದನ್ನು ತಿಳಿಯದೆ ಆಕೆಗೆ ಶಾಪಕೊಡುವ ಮುನಿ ಶುದ್ಧ ರೂಕ್ಷನಾಗಿರಬೇಕು. ಹೊಲೆಯರ ಹೊಟ್ಟೆಯಲ್ಲಿ ಮುರುಳಸಿದ್ಧ ಹುಟ್ಟಿದ ಎಂದು ನೇರವಾಗಿ ಹೇಳದೆ ಮುನಿ ವೃತ್ತಾಂತವನ್ನು ಕಲ್ಪಿಸಿ ಆ ಮೂಲಕ ಪಾವಿತ್ರ್ಯತೆಯನ್ನು ಕಲ್ಪಿಸಲು ಕವಿ ಯತ್ನಿಸಿದ್ದಾನೆ.

ಮುಂದೆ ಕಥೆ ಪವಾಡಗಳ ಹಳಿಗಳ ಮೇಲೇ ಸಾಗಿದೆ. ಪವಾಡಗಳನ್ನು ಅಕ್ಷರಶಃ ನಂಬಿ 'ಇವು ಹೀಗೆಯೇ ನಡೆದಿರಬೇಕು' ಎನ್ನುವುದು ವಿಚಾರಕ್ಕೊಪ್ಪದ ಮಾತು. ಆದರೆ ಪವಾಡಗಳು ನಿಸರ್ಗಾತೀತವಾದುವೆಂದು ಅವುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಲೂ ಬಾರದು. ಚರಿತ್ರೆ ಪವಾಡ ಎರಡೂ ಹಾಸುಹೊಕ್ಕಾಗಿ ಈ ಕಾವ್ಯದಲ್ಲಿ ಸಾಗಿದೆ. ಚರಿತ್ರೆಯ ಕೆಲವೇ ಅಂಶಗಳಿಂದ ಪ್ರಾಚೀನ ಕವಿಗಳು ಪವಾಡ ಪುರಾಣವನ್ನು ಹೇಗೆ ಕಟ್ಟುತ್ತಿದ್ದರೆಂಬುದನ್ನು ಗಮನಿಸಬೇಕು. ಬಾಲಕನಾಗಿದ್ದಾಗಲೇ ಮುರುಳ ಪವಾಡಗಳನ್ನಾರಂಭಿಸುತ್ತಾನೆ. ಈ ಸ್ಥಿತಿಯನ್ನು ಮುಟ್ಟಬೇಕಾದರೆ ಮುರುಳನಿಗೆ ಒದಗಿದ ಸಹಾಯ ಸಂಪತ್ತು ಯಾವದು ? ಯಾವ ಗುರುವಿನ ಕಟಾಕ್ಷದಿಂದ ಈ ಸಿದ್ಧಿಗಳು ಲಭಿಸಿದವು ಎಂಬುದನ್ನು ಕವಿ ವಿವರಿಸುವುದಿಲ್ಲ. ಹುಟ್ಟುವಾಗಲೇ ಅಜೇಯ ಶಕ್ತಿಗಳನ್ನು ಪಡೆದೇ ಮುರುಳಸಿದ್ಧ ಪ್ರಪಂಚದಲ್ಲಿ ಕಾಲಿಡುತ್ತಾನೆ. ಆದರೆ ಊರನ ಶಾಂತಿಗಾಗಿ ಕುರಿಕೋಣಗಳನ್ನು ಕಡಿದು ಮಾರಿಹಬ್ಬವನ್ನು ಆಚರಿಸಲು ಬಾಚಿಗೌಡ, ಊರಿನವರು ಸಿದ್ಧರಾದಾಗ ಮುರುಳ ಅದನ್ನೆದುರಿಸಿದುದು, ಬೇತೂರಿನಲ್ಲಿ ಬ್ರಾಹ್ಮಣರ ಯಾಗವನ್ನು ಕೆಡಿಸಿದುದು ಎರಡು

ಪ್ರಕರಣಗಳಲ್ಲಿ ಮರುಳಸಿದ್ಧನ ವ್ಯಕ್ತಿತ್ವ ದೃಗ್ಗೋಚರವಾಗುತ್ತದೆ. ಹಿಂಸಾತ್ಮಕವಾದ ಮಾರಿಹಬ್ಬ, ಯಜ್ಞಯಾಗಾದಿಗಳನ್ನು ಎದುರಿಸಿ, ಖಂಡಿಸಿ ತನ್ನ ಅಪಾರ ಜೀವಕಾರುಣ್ಯವನ್ನು ಮರುಳಸಿದ್ಧ ಹೊರ ತೋರಿದ್ದಾನೆ. ರೂಢಿಯ ಅಜ್ಞಪದ್ಧತಿಗಳನ್ನು ಕಡೆಗಾಣಿಸಿ ಸುಭದ್ರವಾದ ಸರ್ವಜೀವ ದಯಾಪರತೆಯನ್ನು ತೋರುವ ಧರ್ಮ ಹಿರಿದೆಂದು ಮರುಳಸಿದ್ಧನ ಮತವಾಗಿತ್ತು.

ದೇವ ಕೊಲ್ಲಾಪುರದ ಮಾಯೆಯ ಮೂಗುಹರಿದ ಪ್ರಕರಣಕ್ಕೆ ವಿಶೇಷ ಮಹತ್ವ ಕೊಟ್ಟಿದ್ದಾನೆ. ಮರುಳಸಿದ್ಧನ ಬಗ್ಗೆ ಬರೆದಿರುವ ಎಲ್ಲ ಕವಿಗಳೂ ಕೊಲ್ಲಾಪುರದ ಮಾಯೆಯ ಗರ್ವಭಂಗದ ಘಟನೆಗೆ ವಿಶೇಷ ಪ್ರಾಧಾನ್ಯವನ್ನು ಸಹಜವಾಗಿ ಕೊಟ್ಟಿದ್ದಾರೆ. ಇಲ್ಲಿ ಮಾಯೆನ್ನುವ ಹೆಣ್ಣಿನ ಮೂಗು ಹರಿದನೆಂದು ಭಾವಿಸುವುದಕ್ಕಿಂತ ಮಾಯೆಯೆಂಬ ಭಾವನೆಯನ್ನು ಭಂಗಗೊಳಿಸಿ 'ಮಾಯಾಕೋಲಾಹಲ'ನಾದ ಎಂದು ತಿಳಿಯುವುದು ಸೂಕ್ತ. ಜಿತಕಾಮನಾದ ಮರುಳಸಿದ್ಧ ಲೋಕವನ್ನೇ ವಿಭ್ರಾಂತಿಗೊಳಿಸಿದ್ದ ಮಾಯೆ ಮತ್ತು ಅವಳ ಪರಿವಾರವನ್ನು ಲೀಲಾಜಾಲವಾಗಿ ಗೆದ್ದದ್ದು ಲೋಕಕ್ಕೆ ಮಾದರಿಯಾಗಿದೆ.

ದೇವ ಕವಿಯ ಕಾವ್ಯವನ್ನು ವಿಚಾರದೃಷ್ಟಿಯಿಂದ ನೋಡಿದಾಗ ಕೆಲವು ಮಹತ್ವದ ವಿಷಯಗಳು ಹೊರಪಡುತ್ತವೆ.

೧) ಮರುಳಸಿದ್ಧ ಬಾಲ್ಯದಿಂದಲೂ ಹಿಂಸಾತ್ಮಕದ ಆಚಾರಗಳ ಕಡು ವಿರೋಧಿ. ಅವುಗಳನ್ನು ಖಂಡಿಸಿ ಭಕ್ತಿಮೂಲವಾದ ಧರ್ಮವನ್ನು ಪ್ರಸಾರ ಮಾಡಿದ.

೨) ಜಾತಿಗಳ ವೈಷಮ್ಯವನ್ನು ತೊಡೆದುಹಾಕಲೆತ್ನಿಸಿದ. ಹೊಲೆಯ ಹದಿನೆಂಟು ಜಾತಿಗಳ ಎಲ್ಲರ ಹೃದಯಪೀಠದಲ್ಲಿಯೂ ಮಂಡಿಸಿರುವವನು ಒಬ್ಬನೇ ಪರಮಾತ್ಮ ಎನ್ನುವುದು ಮರುಳಸಿದ್ಧನ ದೃಢ ವಿಶ್ವಾಸ. *

---

* ಕಡೆಯು ಮಾತೇನು ಹದಿನೆಂಟು ಜಾತಿಯುನೆಲ್ಲ ।
ಒಡನುಣಿಸಿ ಪಂಚಭೂತಾತ್ಮವದು ಒಂದೆನಿಸಿ ।
ಒಡಲ್ಪಿಡಿದ ಪಂಚೇಂದ್ರಿಯಗಳೊಂದು
ಗುಡಿ ಪಿತ ವೃಡ ತಾನು ತಾನೆನುತಲಿ ॥

೩) ಕುಟಿಲ ಸಿದ್ಧಿಗಳನ್ನು ನಿರಾಕರಿಸಿದ. ಇವುಗಳಿಂದ ಮನುಷ್ಯನ ಪತನವಾಗುವುದೇ ವಿನಾ ಅಭ್ಯುದಯವಾಗುವುದಿಲ್ಲ. ಮನುಷ್ಯ ಆತ್ಮೋತ್ಕ್ರಾಂತಿಯ ಪಥದಲ್ಲಿ ಮುಂದೆ ಹೋಗದಂತೆ ಮಾಡಲು ಅಣಿಮಾದಿ ಅಷ್ಟ ಸಿದ್ಧಿಗಳು ಅಡ್ಡಿಯಾಗುತ್ತವೆ.

೪) ಭಕ್ತಿಯೇ ಈಶ್ವರ ಸಾಕ್ಷಾತ್ಕಾರಕ್ಕೆ ಪರಮ ಸಾಧನ.

ಮರುಳಸಿದ್ಧ ಹೊಲೆಯರ ಪ್ರಶ್ನೆಯನ್ನು ಬಿಡಿಸಲೆತ್ನಿಸಿದ. ಸಮಾಜದಲ್ಲಿ ಇತರ ವರ್ಗಗಳಿರುವ ಸ್ಥಾನಮಾನಗಳು ಅವರಿಗೂ ಇರಬೇಕೆಂಬುದು ಅವನ ಆಸೆಯಾಗಿತ್ತು. ಇವನ ಸಮಾನದೃಷ್ಟಿಗೆ ಸೇವಕರಾದ ಜಟ್ಟಿಗ, ಬೈರ, ಹನುಮ ಇವರಿಗೂ ತನ್ನ ಪಂಕ್ತಿಯಲ್ಲಿಯೇ ಎಡೆಮಾಡಿ ಕೊಟ್ಟುದೇ ಸಾಕ್ಷಿಯಾಗಿದೆ.

ಕನ್ನಡ ಸಮಾಜವನ್ನು ಪುನರ್ನಿಯೋಜಿಸಿ ಅದರಲ್ಲಿ ತುಂಬಿದ್ದ ಅಜ್ಞಾನ, ಹೊಲಬುಗಳನ್ನು ತೊಳೆದು ಸರ್ವಸಮನ್ವಯ ಭಾವವನ್ನು ಬಿತ್ತಲೆತ್ನಿಸಿದ ಮಹಾನುಭಾವ ಮರುಳಸಿದ್ಧನೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ.

# ಮರುಳಸಿದ್ಧ ಕಾವ್ಯ

## ಮೊದಲನೆಯ ಸಂಧಿ

ಶ್ರೀಗುರು ಘನಗುರುಮದ್ಗುರು
ಶ್ರೀ ಗಿರಿಜಾಧೀಶ ಉಜ್ಜಿನಿಯ ಪುರವಾಸ |
ಶ್ರೀ ಗುರುವರನಣುಗಮದಾಪಹ
ಶ್ರೀ ಗುರುಮಲ್ಲೇಶನೀವುದೆನಗತಿಮುದಮಂ ||

ಶಿಲೆಯೊಳಗಗ್ನಿಯು ಶಬ್ದದೊ
ಳುಲುಹಿನ ನಿಃಶಬ್ದಕಳೆಯು ತೋರ್ಪಂತೆಯುತಾಂ |
ಜಲದೊಳು ಪ್ರತಿಬಿಂಬವು
ಬೀಜದೊಳೊಲವಿಂತೋರ್ಪ ತೆರದಿತೋರುವುದೀಕೃತಿ ||

ನೆಲದ ಮರೆಯಲಿ ನಿಧಾನವು
ಬಲುಬಯಲ ಮರೀಚನಂದದಿಂದಲಿ ತಾ ಕಂ |
ಗಳ ಮರೆಯುಬೆಳಗಿನಂತಃ
ಪರತರ ಗುರುಮೂರ್ತಿ ತನ್ನೊಳೊಲವಿಂ ತೋರ್ಕುಂ ||

ಇಂತಪ್ಪ ನಿರ್ಲೇಪಲಿಂಗವು ಚರಮೂರ್ತಿಯಾದನದೆಂತೆನೆ :
ಶ್ರೀ ಸಕಲ ಸರ್ವಜೀವರಾರಾಧ್ಯನುಜ್ಜಿನಿಯ ವಾಸ ಮಲ್ಲೇಶ |
ಕೊಲ್ಲಾಪುರದ ಮಾಯೆಯ ಮೊಲೆ ಮೂಗನರಿದ ಸುರರಂ
ಗೆಲಿದ ಮಹಿಮೆಯ ವಿಲಾಸಮಂ ಬಣ್ಣಿಸುವೆನು ||

ಚರಣ ಹರಿನೇತ್ರ ಪೂಜಿತಪಾದಪದ್ಮಗಳ
ಚರಣವಸುರರ ಮೆಚ್ಚಿ ನಾಟ್ಯವಾಡಿದ ಪಾದ
ಚರಣರಸತಳದತ್ತಲತ್ತಗೋಚರಿಪ ಅಡಿಚರಣ ಶರಣರು ಪೂಜಿಪ |
ಚರಣಸುರಮುನಿಗಣಂಗಳ ಚಿತ್ತದಿವ್ಯಪದ
ಚರಣ ಕಿಂಪುರುಷಪೂಜೆಗೆಯ್ದು ಉಂಗುಟಂ
ಚರಣ ಕುಹುಕರ್ಜಯಿಸಲೂರಿ ನಿಂದುದೆಕಾಲುಚರಣಕ್ಕೆಶರಣುಶರಣು||೧||

ಮಧ್ಯದೊಳು ಭೂಲೋಕವಿಂತುದಿಸಲುರೆನಾಭಿ
ಮಧ್ಯದೊಳು ಗಿರಿಜಾತೆಗಾವಾಸವಿರಲು ತನು
ಮಧ್ಯದೊಳಗಷ್ಟದಳಕಮಲತೋರುತ್ತಿರಲಭೇದ್ಯಕ್ಕೆ ಭೇದ್ಯವಾಗಿ |
ಸಿದ್ಧಸಾಧಕರೆನಿಪ ನವಕೋಟಿ ಸಿದ್ಧರನು
ಮುದ್ದು ಮಂತ್ರವನು ಪರಿಹರಿಸಿ ಕುರಿಮಾಡಿದವ
ಸಿದ್ಧನುಜ್ಜನಿಯ ಮಲ್ಲೇಶನೂರ್ಜಿತನಾಭಿಮಧ್ಯಕೇತನ ಬಯಲೊಳು ||೨||

ಶಿರದೊಳುಂ ಸುರನದಿಯು ತಾಳಿ ಮತ್ತಾದರದಿ
ಕಿರುಜಡೆಯುಯೊತ್ತೊತ್ತಿನಿಂ ತಾರೆಯೆಡೆಯೆಡೆಗೆ
ನೆರೆವೆರೆಯ ಕಾಂತಿಪಸರಿಪದಿವ್ಯತನುತೋರೆ ಮಿರಗುವೆಳೆನಗೆಯ ಚಲ್ವ |
ಉರಿಗಣ್ಣು ಛಟಛಟತ್ಕಾರ ಗುಳುಗುಳುರವದ
ಗರಳ ವಿಷಭುಗಿಭುಗಿಲು ಸಿಮಿಸಿಮಿತ್ಕಾರಂ ಹೃ
ತ್ಕರ ಕೊನೆಯೊಳುಶರಣಸಂತತಿಯುಸಲಹುಶ್ರೀಗಿರಿಯಮಲ್ಲೇಶಶರಣು ||೩||

ತ್ರಿವಿಧಗುರುಲಿಂಗಜಂಗಮದ ಕಳೆಯುಂ ತಾಳ್ದು
ತ್ರಿವಿಧವಾಸಂ ಕಾಲು ನಾಭಿ ಶಿರಸಗಳೆಂಬ
ತ್ರಿವಿಧಪುರಕಾಳ್ಕುಜ್ಜನೀಪರ್ವತಗಳೆಸೆವ ತ್ರಿವಿಧವಾಸದೊಳು ನಿಂದು |
ತ್ರಿವಿಧಪುರಮಂ ಗೆಲಿದು ತ್ರಿವಿಧಮಲಮುಂ ಮೀರಿ
ತ್ರಿವಿಧಾತ್ಮರೂಪನೇಕೋದೇವನೆಂಬ ಶ್ರುತಿ
ತ್ರಿವಿಧಮತ್ತ್ರಣವ ಪಂಚಾಕ್ಷರಿಯ ರೂಪಶಿವನೆಮಗೀವುದಿಷ್ಟ ಫಲವ ||೪||

ಶ್ರೀಗಿರಿನಿವಾಸ ಗಿರಿಜೇಶ ನಿರ್ವಾಣಸುರ
ವಾಗೀಶ ಹರಿಸುರಪನತಚರಣ ನಿಷ್ಕಳ ನಿ
ರಾಗಮ ಶ್ರುತಿವಿತತಿ ದುರ್ಲಭ ನಿರಾತಂಕನು ಯೋಗಿ ಜನಮನಪ್ರಿಯನು |
ಭಾಗೀರಥೀಧರ ಕಪರ್ದನಮೃತಾಂಶುಕರ
ನಾಗುಹೋಗಿಲ್ಲದಪ್ರತಿಮ ಗುರು ಮಲ್ಲೇಶ
ಶ್ರೀಗಿರಿನಿವಾಸನುಜ್ಜಿನಿಕಾಳ್ಕೆಯೊಳಗೆಸವ ನಾಗಭೂಷಣ ಸಲಹುಗೆ ||೧||

ಗಿರಿಜೆಗರೆ ಮೈಯ್ಯಿತ್ತು ಹರಿಗರ್ಧತನುವನುಂ
ಶರಣರೊಳು ಬೆರೆದಂಬರದೊಳುಕಾಯುಂ ನೆರೆದು
ಉರಗನಂತಳುಕಿಟ್ಟು ಕರಿಯುದೆಸೆಯೊಳ್ ಬಿಟ್ಟು ಸುರನದಿಯು ಸಾಗರದೊಳು|
ನೆರಪುತಂ ಶಿಖಿಯ ದಾವಾನಲನೊಳಿಂಬಿಟ್ಟು
ಗರಳವಂ ನುಳಿದುರಗಾದಿಗಳಿಗೊರವಿತ್ತು
ನಿರುಪಮನಿರಾಲಂಬಪರಮಗುರುಮಲ್ಲೇಶ ಮೆರೆದನುಜ್ಜಿನಿಪುರದೊಳು||೨||

ಗೋಪಗೋಪನು ಗೋಪನತಚರಣನದ್ವಯನು
ಗೋಪಗೋಪ ಕಳಾಪಗೋಪನೆಲೆಯಿಂದೆಸವ
ಗೋಪಗೋಪ ಸಹಸ್ರಕಿರಣಾಂಶುಕಳೆವರ ನಿರೂಪ ನಿರವಯನಿರುಪಮ |
ಗೋಪವಾಹನನೇ ಗೋಪೂಜಿತ ಸರೋಜಪದ
ಗೋಪಗೋಪ ಸುರಕ್ಷ ಗೋಪಸುರರಮೃತಕರ
ರೂಪ ಸಿದ್ಧೇಶನೊಲಿದೆಮ್ಮರಕ್ಷಿಸು ತ್ರಿವಿಧತಾಪಹರ ಲಿಂಗ ಶರಣು ||೩||

ಶಿವಗಿವರ್ಸರಿಯೆ ಹರಿಗಿರಿ ವೈರಿಯುಜಗಿಜಂ
ಶಿವಗಿವರ್ಸರಿಯೆ ದಾನವದೈತ್ಯ ಪುರತ್ರಯಂ
ಶಿವಗಿವರ್ಸರಿಯೆ ಕಾಮಾಂಧಮಾಯಾಕರ್ಮರವಿರಳ ಪರಬ್ರಹ್ಮಗೆ |
ಶಿವವಾಸ ನೆಲೆವಾಸ ಶಿವಮೌಳಿಸಲೆಕಳಾ
ಶಿವಮುಖ ತಿರಸ್ಕಾರಂ ಶಿವವೃಕ್ಷವೆಸರೆ ಘನ
ರವಿಶಶಿ ಶಿಖಿನೇತ್ರಯಕ್ಷ ಮನಸಿಜವೈರಿ ಶಿವಮೂರ್ತಿ ಸಲೆಹೆಮ್ಮನು ||೪||

ಉಡುನಾಥನೆಡೆಯೊಳಿಡಿದಿರ್ದ್ದ ಜಡೆ ಪರಿವೇಷ
ಘುಡುಘುಡಿಪ ಶಿರಮಾಲೆಯಿಂ ತಳರ್ವಮೊಳಗಿನಿಂ
ಕಡೆಗಣ್ಣ ಕಾಂತಿ ಸಂಜನಿಪಪೊಳರ್ವೆಳೆಮಿಂಚು ನಿಡುಪುಬ್ಬು ಸುರಚಾಪದ |
ಕಿಡಿನಯನ ಘರ್ಷಣೆಯೊಳುದುರ್ವಾರಿಕಲ್ಗಳಂ
ತೊಡನೆಸುರನದಿಯು ನಡುಸರುಬಿರ್ದವಂತಾಗ
ಮೃಡಪೊಡವಿದಣಿದಮೃತಫಲಬತ್ತ್ರದಂತಾಗ ಕೊಡುತಿರ್ದಶರಣಜನಕೆ||೯||

ವಿಘ್ನೇಶ ವೀರಭದ್ರನು ಕುವರ ಷಣ್ಮುಖನು
ವಿಘ್ನವನು ತಾರದೀಕೃತಿರಚನೆಯ ನಿವಾತ
ಸುಜ್ಞಾನ ಮನದೊಳಿಂಬಿಡುತ ಘನರಾಗವನು ಭಗ್ನವಿಲ್ಲದೆಕೃತಿಯೊಳು |
ಸುಜ್ಞಾನ ಸನ್ಮತಿಯನಮೃತಕಳೆವೆರೆದ ಸ
ರ್ವಜ್ಞ ಸಮತೆಯನು ಕ್ಷಮೆದಮೆಶಾಂತಿ ಕರವೀವ
ವಿಘ್ನೇಶಪಿತ ಸತ್ಯನಿತ್ಯ ನಿರುಪಮಮೂರ್ತಿಯಾಜ್ಞೆಯಿತ್ತುರೆ ರಕ್ಷಿಸು ||೧೦||

ಫುಲ್ಲಶರಹರಭಕ್ತರೆಲ್ಲ ಕರುಣಾಳುಗಳು
ಕಲ್ಯಾಣದೊಳಗುಳ್ಳ ಶರಣಸಂಖ್ಯಾತರಿವ
ರೆಲ್ಲರಪದಾಂಬುಜ ಪರಾಗದೊಳು ಮನಭೃಂಗ ತಲ್ಲಿಯ್ಯವೆರೆದಾಗಳು |
ಅಲ್ಲಮಂ ಅಜಗಣನು ಹುಲ್ಲಮಾರುವ ಶರಣ
ಕಲ್ಲನಂದಿಯ ಮೆಯ್ಸದವರು ಕಲಕೇತಯ್ಯ
ಬಿಲ್ಲಮನು ಬಿಜ್ಜಯ್ಯಕಲ್ಲಯ್ಯ ಗುರುಶರಣ ಬಲ್ಲಾಳವಮಾದಿರಾಜ ||೧೧||

ದಂಡಾಧಿನಾಥ ನಿಂಡೆಯಶಾಂತ ಕಡುಗಲಿಯು
ಗುಂಡು ಬ್ರಹ್ಮಯ್ಯ ಹೆಂಡದ ಮಾರಿತಂದೆಗಳು
ಪಂಡಿತಾರಾಧ್ಯ ಕಲಿಗಣನಾಥ ಚಾರಮನು ಚಂಡೇಶನತಿಭಕ್ತನು |
ಗುಂಡಯ್ಯನಮರಗುಂಡದ ಮಲ್ಲಿನಾಥ ವಿಷ
ಉಂಡುದಂ ಮರಳಿಸಿದಲಂಡ ಪಶುಪತಿಗಳು
ದ್ದಂಡಧರಗಂಡುಗೊಡಲಿಯಮೊನೆಯಿಡುವರಪದಪುಂಡರೀಕಕ್ಕೆರಗುವೆ
[ ||೧೨||

ಹರನನೊಲಿಸಿದ ಕವಿಗಳ ವರಪಾದಾಂಬುಜಾ
ಕರ ಕರಸುತೇಜಶಶಿಕಾಂತಿ ಭೌಮಾನದೊಳು
ಇರೆಸೌಮ್ಯಗುಣಗುರುತ್ವದೊಳುಕವಿರಚನೆಯಿಂಶೌರ್ಯಗುಣವಿಡಿದಾಗಳು |
ಉರಗಭೂಷಣನವರ ಸಿದ್ಧಪ್ರಸನ್ನ ಗುರು
ಹರಿಯಣ್ಣಯ್ಯ ಮಲುಹಣನು ಬಾಣನುದ್ಭಟನು
ಕೆರೆಯ ಪದ್ಮರಸ ಕೇಶಿಯುು ಹಲಾಯುಧಶೂಲಿವೆರೆದಷ್ಟಮೂರ್ತಿಯಾಗಿ
[ ||೧೩||

ಕರ್ಣಾಟ ಭಾಷಾಪ್ರದೀಪಿಕೆಯನುಸುವರ್ಣಾ
ಪರ್ಣವರ ಪ್ರತಿಸಮಾಸಂ ಕಬ್ಬರಸವು ಸಂ
ಪೂರ್ಣವಾಗಿರೆ ವಿರಚಿಸುವೆ ಕೇಳ್ವಕೋವಿದರುಕರ್ಣದೊಳುಸವಿದಾಗಳು |
ವರ್ಣಕಂ ವಸ್ತುಕವಿದೆಂದೆನಲು ನಿಮ್ಮ ಹೃ
ತ್ಕರ್ಣಿಕಾ ಮಧ್ಯದೊಳು ನೆಲಸಿ ಸಂಪದವನಭಿ
ವರ್ಣಿಸುವೆಪರಮಾಮೃತವ ಶರಣರುಗಳ್‌ಸವಿದು ನಿರ್ಣೈಸಿಧನ್ಯರಹುದು
[ ||೧೪||

ಭವರೋಗ ದುಃಖ ತಾಪತ್ರಯದೊಳಳಿವವರ
ಯುವರಾಜ ನಿಂದ್ರ ಮನ್ಮಥ ಕರ್ಣನೆಂದೆನಿಸಿ
ಸವಿನುಡಿಗಳಿಂದ ನುತಿಗೆಯ್ದು ಪಲ್ಗಿರಿದಾಗಯುವೆಯಲುಗದೀಕ್ಷಿಸುತ |
ಭವರೋಗ ವೈದ್ಯನಂ ನುತಿಸಿ ಸುಖಿಯಾಗದಿಹ
ಕವಿಗಳಂ ಕಾಯದಿಷ್ಟೆಗೆ ಪೊಗಳಿ ಬಾಯಾರಿ
ಶಿವಕವಿತೆಗಳನುಳಿವ ನರಕವಿತ್ವದ ನರರು ನರಕದೊಳಗಾಳುತಿಹರು ||೧೫||

ಎಸೆವಷ್ಟಾದಶ ವರ್ಣದರ್ಥಾಲಂಕಾರ ರಸ
ಪೊಸಕಾವ್ಯಚದುರು ಲಕ್ಷಣ ಪ್ರಾಸುಪದರೀತಿ
ವಿಷಮ ಸಮಗಣನೇಮವೆಸವ ವರ್ಣಂಗಳೊಳಗೆಸೆವಪ್ರಾಕಾರಂಗಳು |
ಪಶುಪತಿ ಸ್ವಯಂಭು ಬಾಳ್ಗುಳಿಯ ಕಲಿದೇವನಿಂ
ತುಸುರಿದೊಲು ದೇಪಪೇಳ್ದಂ ಹರನ ಕೃತಿರಸವ
ನೊಸೆದು ಲಾಲಿಸಿ ತಿದ್ದಿಕೇಳುವರ ಪದಧೂಳಿಪಸರಿಸುವುದೆನ್ನತನುವ||೧೬||

ಸಿದ್ಧಲಿಂಗನ ಚರಿತ್ರವ ಪೇಳ್ವೆನಿಂತಿದನು
ಗದ್ದುಗೆಯ ಸ್ವಾಮಿತಂದೆಯು ಶರಣ ಸಂತತಿಗೆ
ಉದ್ಧರಿಸಿಪೇಳ್ದಗುರುಬೋಧೆಯಮಹಾತ್ಮೆಯನುಹೃದ್ಯದೊಳ್ ನೆರೆಭಾವಿಸಿ|
ಬುದ್ಧಿಯಿಂ ಮನಚಿತ್ತ ಕರಣ ಕಳೆಯೋಳ್ತೀವಿ
ಮುದ್ದುಮಂತ್ರವ ಬಲ್ಲ ಸಿದ್ಧಸಾಧಕರ ನೆರೆ
ಗೆದ್ದುಕೊಲ್ಲಾಪುರದಮಾಯೆನಾಸಿಕವಿಂದ ಸಿದ್ಧಲಿಂಗನಕೃತಿಯನು ||೧೭||

ಹೇಮವುದಿಸಿದನಿಲಯ ರಂಗುಮಾಣಿಕದಟವಿ
ಸಾಮಜಾಳಿಗಳ ಸಂಚರ ಪಕ್ಷಿಮೃಗವಾಸ
ಭೂಮಿಜಂಗಳ ಹರಹು ಖಗಕುಲಂಗಳ ನೆರಹು ಪೂವಗಾಲೆಯು ಸೋಂಪಿ
ಸೋಮಸೂರಿಯ ಕಾಂತಿಯಿಂದ ಶೈಲದ ಘನವ [ನಿಂದ|
ನಾಮಹಾಗಿರಿಯು ಪೆರ್ಮೆಯೊಳೊಪ್ಪಿ ಮೆರೆವುತಿರೆ
ಕಾಮಿಸಿದ ಕಾಮ್ಯಂಗಳನೀವ ಸುರತರುವೆಸೆಯೆ ಭೂಮಿಗದು ಪೊಸತೆನಿ
[ಸುತ ||೧೮||

ಅಳವಡಿಸಿ ಕಾಷ್ಟಜ್ಯೋತಿಗಳಿಂದ ಬೆಳಗುತಿರೆ
ತೊಳಗುವ ಶಿಲಾಜ್ಯೋತಿ ಕಂಗಳಿಗಗೋಚರವು
ಬೆಳಗುವತೃಣಜ್ಯೋತಿಮಂಗಳಾಮಯವಾಗೆ ಪಲವು ವರ್ಣದಜ್ಯೋತಿಯ|
ನೊಳಕೊಂಡುದಾಜ್ಯೋತಿನಿಧಿಮಯವನಿಂ
ತೊಳಕೊಂಡುದಾಜ್ಯೋತಿ ಗಿರಿಜ್ಯೋತಿ ಶೈಲಗಳ
ನೊಳಕೊಂಡುದಾಜ್ಯೋತಿ ಲಿಂಗಪ್ರಭೆ ಗಿರಿಯನುಂಬೆಳಗೆ ಶಿವಶರಣನಂದು
[ ||೧೯||

ಮೃಗರೂಪಿಲೆಸವ ಶೈಲಂಗಳ ಸಗಾಡಿಕೆಯು
ಖಗರೂಪಸನಾಂತ ಗಿರಿಮಯದಿಂದ ರಂಜಿಸುತ
ಮೃಗರೂಪಪೋಲ್ವಮೃಗಶಾಕೆಮಯ ಘನದಿಂದಲಘಟಿದಸಮಗುಣದಲಿ|
ಖಗರೂಪಸನಾಂತ ಲತೆಗುಲ್ಮ ವಲ್ಲರಿಗಳಿವು
ಸೊಗಸಿಮಿಗೆ ಸಂಚಾರಚರಿಸುವಾ ವನಜಾತಿ
ಪೊಗುಮಿಗೆಯುನೊಳಗೊಂಡು ಮೆರೆದುದಾಕುಲಶೈಲ ನಗಜೇಶನನುಮತ
[ದೊಳು ||೨೦||

ತರುಶಾಖೆಗಳನೇರಲುರೆ ಲೋಕಕಾಣಿಸುವ
ಗಿರಿಶಿಖರಗಳನೇರಲೂರ್ಧ್ವ ಜಗವದು ತೋರೆ
ತರುಗಳಂಮೇಲೇರೆ ಖೇಚರತ್ವವನೈದಿ ಗಿರಿಸ್ವರ್ಗಪಥವ ತೋರೆ |
ತರುರೂಪು ಮಾರ್ಗಮೆನೆ ತನ್ನವೋಲ್ಮಾಳ್ಪತರು
ಗಿರಿರೂಪಮಾರ್ಗಮೆನೆ ತದ್ರೂಪಮಾಳ್ಪಗಿರಿ
ನರಮಯಂ ಗಿರಿಮಯಂ ತರುಮಯಂ ಎಸೆವ ಶ್ರೀಗಿರಿಮಹಿಮೆ ತಾನೆಂ
[ ತುಟೊ ||೨೧||

ಗಿರಿಯ ಘನ ತಾನೆಂತು ತರುಗಳುಂ ಪಾಲ್ಕರೆಯೆ
ತರುಮಹಿಮೆತಾನೆಂತು ವರಶಾಖೆ ಘೃತವೊಸರೆ
ಸರುದಾರಿಯಲ್ಲವುಂ ಸಾರಸವಿ ಮಧುವೊಸರೆ ಬಿರುಗಲ್ಲುಗುಡದೋಲಿರೆ |
ಕಿರುಮುಳಲವಟ್ಟೆಲುಂ ಸಾರಸರ್ಕರೆಮಯಂ
ಪರಮಪುರುಷರಿಗೆ ಫಲಪಕ್ವಂಗಳಿಂದೀವ
ಪರಿಚಾರಕರು ವನಂಗಳಲಿ ಮೆರೆವುತ್ತಿರಲ್ ಹರನಾಜ್ಞೆಯಿಂಗಿರಿಯೊಳು
[ ||೨೨||

ಹರನಗಿರಿಯೊತ್ತಿನೋಳ್ ಪಾತಾಳನದಿಮೆರೆಯೆ
ತರತರಂಗಾವಳಿಗಳಿಂ ತೋರ್ಪ ತ್ರಿವಳಿಯಿಂ
ಸೊರೆಯುಕಿರುತೆರೆಯು ಬೊಬ್ಬುಳಿಕೆ ಜಳಕಣಗಳಿಂ ಮೊರೆವಗಂಭೀರದಿಂದ |
ಹರಿವ ಹಿಂಗುವ ಕೊಡುವಗಲ್ವ ತಡಿಯೊತ್ತತಾಂ
ಮುರಿದಡದ್ದುರ್ ಹೊಯ್ಲುಲುರವಣಿಸಿ ವಾಸರಿಸುತಂ
ಕಿರುಮುಳಲು ಸೊರೆಯು ಶೈಲಾಲಯದಿ ಮೆರೆಯಿತ್ತು ಗಿರಿಯೊಳಾಗಂಗೆ
[ ಪರಿದು ||೨೩||

ಆ ಗಿರಿಯೊಳುಂ ಮೆರೆವಗಂಗೆಯ ವಿಶೇಷಮುಂ
ಭಾಗೀರಥೀ ಸಿಂಧುನದಿ ಸರಸ್ವತಿ ಚಂದ್ರ
ಭಾಗೆ ಕಾಳಿಂದಿ ನರ್ಮದೆ ಯಮುನೆ ಗೋದಾವರೀ ಶಬರಿಸುರಪೂಜಿತೆ |
ನಾಗಸೌವರ್ಣೆ ಮಲಹರಿ ಕೃಷ್ಣೆ ಭವನಾಸಿ
ಗೋಗಾಯುನದಿ ಗಂಡವತಿ ಸಾಂದ್ರ ನದಿಗಳಿವು
ಯೋಗ್ಯದಿಂದಿರಲು ಮೆರದಳು ಗಂಗೆ ಗಿರಿಯೊಳುಂನಾಗಭೂಷಣನಾಜ್ಞೆ
[ ಯಿಂ ||೨೪||

ಆವನಾನೋರ್ವ ನೋಡಿದಡವನ ಜನ್ಮವಂ
ಪಾವನಂಗೈಯ್ದು ದುಷ್ಕರ್ಮಮಂ ಛೇದಿಸುವ
ತೋಮರವು ಚಕ್ರವಾಯೆಯ ಬಸುರಸೊಡೆಹೊಯ್ವಕಾವಳದ ಘಟಿಯು
ತೀವಿದಘಕೋಟಿ ಬಣಬೆಯ ಭಸ್ಮಮಂ ಮಾಳ್ಪ [ವೊಲು |
ಪಾವಕಂಮಲವ ಮಲದೋಷತ್ರಯುವ ಕಳೆವ
ಸಾವಿರಾಂಶುಗಳ ರವಿಯೆನೆ ಮೆರೆದಳಾಗಂಗೆ ಭಾವಿಸಲುಶ್ರೀಗಿರಿಯೊಳು
[ ||೨೫||

ಕುವಲೇಂದ್ರದೊಳು ವನಸ್ಪತಿಗಳಿಂದೊಪ್ಪುತಿರೆ
ಬಿದಿರುಬೆತ್ತಂನೆಲ್ಲಿ ಕನ್ನೆಲ್ಲಿಕಡವಡವು
ಬದರಿ ಬಂಗರಳಿತಂಡಸ ತಡಸು ಬೆಳ್ಳಾಲ ಚದುರ ಚಂದನಗಳಿಂದ|
ಮಧುಫಲತಾರೆ ನೇರಿಲು ಹೊನ್ನೆ ಸುರಹೊನ್ನೆ
ತದುಕುಲೆದ್ದುಂಬರ ಔದುಂಬರಂ ಹಲಸೆಲೆವ
ಮದನಫಲ ಬನ್ನಿ ಮಾವಿಂಮಾವುವಟವೃಕ್ಷಮೊದವಿ ಆಗಿರಿಯೊಳೆಸೆಯೆ
[ ||೨೬||

ಹರಿಯಂತೆ ಹರನಂತೆ ತರುಕುಲದ ಸಾಲಿನಿಂ
ಪರಮೇಷ್ಠಿಯಂತೆ ಸುರಪತಿಯಂತೆ ನೆರದೊದವಿ
ತರಣಿಯೋಲ್ ಚಂದ್ರನೋಲ್ ಸೀತೋಷ್ಣಕರದಿಂದ ವರತಾರೆಯಿರವ
ಸುರರಂತಮೃತವಿತ್ತು ವರಭೂತಕ್ಕೆಣೆಯಾಂತು [ ಪೋಲ್ತು |
ಸುರಸತಿಯ ಪೆರ್ಮೆಯಿಂ ಪಡೆದು ಸಿರಿದೇವಿಯಂ
ಗಿರಿಸುತೆಯ ನಾಮವೆಸೆದಿರಲು ತದ್ಗಿರಿ ವನಂ ಪರಿಕಿಸಲು ಗಿರಿಯೊಳೆ
[ ಸೆಯೆ ||೨೭||

ಮೊಲವಿಂಡು ಒಂಟೆ ಮುಂಗುಲಿ ಮುಸುಲಿ ವ್ರಜದಿಂದ
ಹರಿಣಿಮಂಡಲ ಚಿತ್ರಕಾಯ ಕಪಿನಿಕರದಿಂ
ಕರಡಿ ಸೂಕರ ಬೆಕ್ಕು ಘನಖಡ್ಗ ಮೃಗವಿಂಡು ಸರಟನೇಹಮೃಗಂಗಳ |
ಶರಭ ಪೆರ್ಬುಲಿ ಸಿಂಹ ಗಜವ್ಯಾಘ್ರ ಭೇರುಂಡ
ಪುರುಷಮೃಗ ಶರಭ ಸಾರಗ ಕೊಂಡಗುರಿಗಳಿಂ
ನರಿ ಶಶಕ ವೃಕ ಕರ್ತೃ ಗುರು ಸಮೂಹಗಳಿಂದಗಿರಿವರಂಕಣ್ಗೆ ಸೆದುದು
[ ||೨೮||

ಅರೆಗಿಳಿಗಳಿಂ ಗಿಳಿಗಳಿಂ ಪವುಸೆ ಪಾರಿವಂ
ಪರಪುಟಂ ನವಿಲು ಶಿಬಿ ಬಕ ಕ್ರೌಂಚ ಗೀಜಿಗಂ
ಕುರಟ ಲಾವುಜೆ ಗೌಜ ಹಸು ಬಹಂಗಂ ಬೆಳುವಪಿರಿಯಖಗದಿಂದನೆರವ |
ಹರಡೆ ಚಾದಗ ಕಾಕ ಗಿಡುಗ ಕಕ್ಕರ ಹದ್ದು
ಉರಿಗಣ್ಣ ಘೂಕ ಮಿಾನ್ಬುಲಿ ಗೊರವ ಶಂಬೂಕ
ನೆರೆಯಬೂದಂ ಚಂದ್ರವಕ್ಕಿ ಕುಕ್ಕುಟದಿ ಗಿರಿವರನಿರಲು ಮುನಿಪಜ್ಕ್ಯ
[ ಯಿಂ ||೨೯||

ಬಲಿದ ಪದ್ಮಾಸನದಿ ಬಂದಿವಿಡಿದಾಧರದಿ
ತೊಳಪ ಕುಂಡಲದ ಮುಗುಳ್ನಯನಾಂಜುಳಿವೆತ್ತ
ಸುಲಿಪಲ್ಲುಕೆಂಜೆಡೆಯುಭಸಿತಧೂಮಾಂಗಪ್ರಜ್ವಲಿಸುತಿಹತನುಕಾಂತಿಯ |
ಮೊಳೆತು ಹುತ್ತಿಂದೊಳಗೆ ಬೆಳೆದು ಕುಜಲತೆಯು ಕೆಲ
ಕೊಲೆವ ಭರಕಂದೇಹದೊಳ್ ಬೀಟಿವರಿದು ಸುಳಿ
ವರಲೆ ಮೂಷಕ ನಕುಲ ಫಣಿಕುಲಂನೆಲನೋಡಲಿಳಿದಿರ್ದಜಡೆನಖಗಳ
[ ||೩೦||

ಆಧಾರವಾದಿಯೆನಿಪಾರು ಚಕ್ರಗಳೊಳಗೆ
ಭೇದಿಸುತ ಪಂಚಭೂತಗಳು ಮನವೆಂಬುದನು
ವೇದಷಡ್ಡಶದ್ವಾದಶಂಷೋಡಶ ದ್ವಿದಳವಾದ ಪ್ರಣವವ ಬೆರೆವುತ |
ಆದವ್ಯವತ್ತೊಂದು ಲಿಖಿತ ವರ್ಣಗಳನುವ
ಮುಹದೇವಿಯಜ ವಿಷ್ಣು ರುದ್ರ ಶಿವ ಗುರುವೆಂಬ
ವಾದಿದ್ಯೆವಂಗಳನುಪ್ರಣವಸ್ವರೂಪದೊಳುವೇದಿಸುತ ತಪದೊಳಿರಲು||೩೧||

ಕಂದಮೂಲಾದಿ ಫಲವಂತಪ್ಪ ಪೂಗೊಯ್ವ
ಸ್ಯಂದನಂ ಮಾಳ್ಪರುದ್ರಾಕ್ಷಿಯಿಂ ಸರಗೊಳಿಪ
ವಂದನಂಗೈವ ವಲ್ಕಲವೃಂದವಂ ತೊಳೆವ ಮೌಂಜಿ ಮೇಖಲೆಗಟ್ಟುವ |
ಸಂಧಿಸುತ ಯಜ್ಞೋಪವೀತದಿಂ ಸುಪಥವನು
ಬಂಧಿಸುತ ಜಡೆಗೆ ಸೋಂಕುವ ಸಮಿತೆಗಳ್ ತಪ್ಪ
ವಂದದ ಭಸಿತವಿಡುವ ಚಂದದ ಮುನೀಶ್ವರರ ವೃಂದಾವಾ ಗಿರಿಯೊಳೆ
[ ಸೆಯೆ ||೩೨||

ಮೃದುವಾಕ್ಯವಿಡಿದು ಲಕ್ಷಣ ಲಕ್ಷಣಾಂಶುಗಳ
ವಿದಿತ ವೇದಾರ್ಥಘೋಷದ ಶಾಸ್ತ್ರಸಂಗತಿಯು
ಪದಪಿಂ ಪುರಾಣ ತರ್ಕವು ಮಂತ್ರದಾಳಾಪದುದಿತದುಪನಿಷದರ್ಥದ |
ಮದನಹರ ಪೂಜೆಯುಂ ಮಾಡುತಿಹ ನಿತ್ಯಸೇ
ಮದ ಷೋಡಶುಪಚಾರ ಹೋಮವಂ ಮಾಡುತೀ
ಸದಮಲಂಚಿತ್ತ ಮುನಿಗಳವೊತ್ತವಿರಲತ್ತ ಕುವಲೇಂದ್ರ ಮೆರೆದುದಂದು
[ ||೩೩||

ಹರಿಯೊಡನೆ ಮೊರೆವ ಕರಿಯುಂ ವ್ಯಾಘ್ರ
ನೆರವಿಯುಂ ಹರಿಣಂಗಳುಂ ಚೆಲ್ಲವಾಡುತಿರೆ ಶರಭನುಂ
ಭರದಿ ಭೇರುಂಡನೊಳು ಸೆಣಸಿ ಶರಭದೊಳ್ಪುಲ್ಲೆಸೆರೆ ಸರಸವಾಡುತಿರಲು |
ಬರುಹಿ ಸರ್ಪಂಗಳೊಡನಾಡುತಿರೆ ಮುಂಗುಲಿಯು
ನಿರದಟ್ಟುತಿರೆ ಮೂಷಕಂಗಳುಂ ವೈರದಂ
ತರವುಳಿದು ಶಾಂತಿಯೆಡೆಗೊಂಡು ಮುನಿಶಾಂತಿಯಿಂಗಿರಿಶಾಂತಿ ಕರಮೆರೆ
[ ದುದು ||೩೪||

ಆ ಗಿರಿಯೊಳುಂ ಮುನಿಗಳತ್ಯುಗ್ರತಪದಿಂದ
ಯೋಗಿಗಳು ಹರನ ಧ್ಯಾನಾರೂಢರಾಗಿ ಸಲೆ
ಭೋಗಿಗಳುಷಡುವರ್ಣರುಚಿಯು ಹರಗರ್ಪಿಸುತ ಚೇಗಿಗಿಡದಲೆಮನವನು|
ಆಗಮಾರ್ಥದ ಶೈವಪೂಜೆ ಸಮವಿಡಿದಾಗ
ಬಾಗಿ ಶಿರವೂರಿ ಪದವೆತ್ತುತಿಹ ತಪವೇರಿ
ನಾಗಕಂಕಣನಂತರಂಗದೊಳು ನೆಲೆಗೊಳಿಸಿಸಾಧಿಸುವ ವ್ರತಿಗಳಿರಲು||೩೫||

ಮುನಿಗಳು ಮುನಿನಾಥನುಂ ಮುನಿಶ್ರೇಷ್ಟನುಂ
ಮುನಿವರೇಣ್ಯನು ಮುನಿಕುಲಕಮಲ ದಿನಪನುಂ
ಮುನಿಕುಮುದಚಂದ್ರಂ ಚಕೋರ ಹಿಮಕರನು ಮುನಿ ಶೀಲಾದನುಂ
ಅನುನಯದಿ ಶಿವನನರ್ಚಿಸುತ ತ್ರಿಕಾಲದೊಳು [ಮಿರುತಲು |
ಮನಮೊಲಿದು ಮಷ್ಟವಿಧ ಷೋಡಶೋಪಚಾರದೊಳು
ಘನಲಿಂಗವನು ಪೂಜೆಗೈದು ಪ್ರೀತ್ಯರ್ಥದಿಂ ವನಿತೆ ಪರಿಚಾರದೊಳಗೆ||೩೬||

ಪತಿಗೆ ಹಿತಸತಿಯರುಂಧತಿಗೋರಗೆ ಸರ
ಸ್ವತಿಗೆ ಮತಿಯುತಿ ಚದುರಿನಿಂದ ರೂಪಿನೊಳು ರತಿ
ಯತಿ ಚಮತ್ಕೃತಿಯೊಳುಂಗಂಗೆಯುಂ ಗಾಯತ್ರಿಯರಿಗೆಸಮನೆಂದೆನಿಸುತ|
ನುತಿಯೊಳುಂ ಪರಮರೋಹಿಣಿಗೆ ಮಿಗಿಲೆಣೆಯಾಂತು
ಪತಿಭಕ್ತಿಯೊಳು ಸದಾಗತಿಯೆಂದು ನಡೆವ ಮುನಿ
ಪತಿಯ ಸತಿ ಪತಿವ್ರತೆಯೆನಿಸಿ ನಡವುತಿರಲಿತ್ತಲತಿಶಯದ ಸಮಗುಣದಲಿ
[ ||೩೭||

ವರಮುನಿಯ ಪೂಜೆಗಂ ಅರೆವಿರಿದ ಮೊಗ್ಗೆಯುಂ
ತಿರಿದು ಕಪ್ಪೊಗದ ಚೆಲುವಿಡಿದ ಬಿರಿದರಳನುಂ
ಪರಿಮಳಂ ವಗದೆಸಳು ಮುರುಳ್ವದಶಮಂ ಪರಿಮಳಂ ಸರಿದರಳ|
ತರಣಿ ಕಿರಣಂತಳರದೆಳೆಪುಪ್ಪಿನರಳ್ಗಳಂ
ಮುರುತ ಕಾಲ್ಪೊಳಿಯಂ ಸತಿಯರ ಪರಾಗಮಂ
ಬಿರಿಮೊಗ್ಗೆಯರಳಮುನಿಪತಿಯಶಿವಪೂಜೆಗಂ ತರುಣಿಯೆಡೆ ಮಾಡುತಿರಲು
[ ||೩೮||

ಪಿರಿದುಫಲಪದವೀವ ಶಾಪಾನುಗ್ರಹ ಸಮರ್ಥ
ಪರಿಪೂರ್ಣ ನಿತ್ಯಪರಮಾನಂದ ಸತ್ಯನುತ
ವರಮುನೀಶ್ವರ ಶಿಲಾಧರನು ಹರಪೂಜೆಯುಂ ಚರಿತಮಿಗೆ ಮಾಡುತಿರಲು|
ಇರಲಷ್ಟವಿಧಪೂಜೆ ಷೋಡಶುಪಚಾರದೊಳು
ಪರಮನಡಿಗಳನರ್ಚಿಸುತ ಸುಖಂಯಿರುತಿರಲು
ವರಸತಿ ಶಿವಾರ್ಚನಂಗೆಯ್ವುತತ್ಕಾಲದೊಳು ಭರದಿ ಋತುಕಾಲವಾಗೆ||೩೯||

ಮುಂಡಿಯತೊಡಿಕಿಸುತ ನಡುಗುತ ಲಜ್ಜೆಯಿಂದಲಡಿ
ಯಿಡುತ ಕರದೋಳ್ ಸೀರೆಯಂ ಪಿಡಿದುಕೊಂಡು ತೊಡೆ
ನಡುಗುತ್ತಲವುಕಿ ನಡುವುತ್ತಲಡಿವೆಜ್ಜೆಯಿಂದೊಗುವ ರುಧಿರಾಂಬುವಿಂಗೆ|
ಜಡಿದು ಮೊಗರಸವಾರಿ ಸೊಗದು ಕಂಪೊರೆಯೇರು
ತೊಡಸೊಡನೆ ತೆಳುವಟ್ಟೆಯೊಳು ಸೂಲೆದೋರೆ ಮೈ
ದೊಡವನಿವರಿಸುತ ರಜಸ್ವಲೆಯಪ್ಪ ಭಾವಮಂ ಪಡೆದಿರಲುಮುನಿಯರಿತನು
[ ||೪೦||

ಎಲೆ ನೀರೆ ಹರಪೂಜೆಯಂ ಮಾಳ್ಪ ಸಮಯದೊಳು
ಕಳೆಯಳಿದು ಕರಮಾಜಿಮಾಳ್ಪರೆ ನೀನೀಗೆ
ಹೊಲೆಯಾಗಿ ಹೊಲೆಜನ್ಮದಲಿಜನಿಸುಹೋಗೆಂದುಚಲಿತಶಾಪವನೀಯಲು |
ಕುಲವಿಲ್ಲದಚಲನೊಳು ಬಾಳು ಹೋಗೆಂದೆನಲು
ಲಲನೆ ನುಡಿದಳು ಶಾಪ ಪರಿಪಡುವುದೆಂತೆನಲು
ನೆಲೆಯಹುದುಹರನುಮೆಯಕಥನದಿಂಬಲವಂತಜನಿಸುವನುಹೋಗೆಂದನು
[ ||೪೧||

ಎನುತಲಭಿಶಾಪಮಂ ಮುನಿನುಡಿದನಾಸತಿಗೆ
ವನಿತೆ ನೀಪೋಗಿ ಮರ್ತ್ಯದೊಳು ಕರುಗಲ್ಲೆಂಬ
ಜನಪದಕ್ಕಧಿಪ ಪ್ರಭುಬಾಚಣನ ಭೃತ್ಯನೆಂದೆನಿಪ ಕುಲಹೀನನೋರ್ವ |
ಅನಘ ನೀನವನಾತ್ಮದೊಳು ಜನನವಾಗಲಾ
ಘನಮಹಿಮ ನಿನ್ನ ತನುಮನಕೊನೆಯೊಳುದಿಸುವನು
ನಿನಗಿದುಂ ಸದ್ಯಫಲವೆಂದು ಮುನಿನುಡಿದನಾ ವನಿತೆಯುಂ ಬೀಳುಕೊಡುತ
[||೪೨||

ಮತ್ತಮಾಮುನಿ ನುಡಿದನಾ ಸತಿಗೆ ಪೂರ್ವದೊಳು
ಭೃತ್ಯನೆಂದೆನಿಪ ಶಿಷ್ಯಗೆ ಗುರುವಿರೋಧದೊಳು
ಯತ್ತಿನಸ್ತ್ರಿಯ ಮೆಟ್ಟಿತಿರಿತಂದು ಪುಷ್ಪೆನುತಲತ್ಯಂತ ಕೋಪದಲಿ |
ಮರ್ತ್ಯಕಂ ಪೋಗಿ ಕಗ್ಗಲಪ್ರಭು ಬಾಚಣನ
ಭೃತ್ಯನಾಗಿರು ಕೂಗಿಮಾರಪೆಸರಿಂದ ವರ
ವಿತ್ತುಕಳುಹಿದನವನ ಕೃತ್ತಿವಾಸನ ಮಹಿಮೆ ಸತ್ಯವದುಸಹಜವೆಂದು||೪೩||

ಎಂದು ಮುನಿನುಡಿಯೆ ಸತಿಬಂದಳಾಪುರವರದ
ನಂದನ ತಟಾಕಕೂಪಂ ಚೆಲುವಿನಿಂದೆಸೆಯೆ
ಕಂದರ್ಪ ವೀರನರಲಂಬಿನನೆಯಂತೆಸೆವ ಬಾಂದೊರೆಯ ಪರಿಕಾಲ್ಗಳ |
ಚಂದ್ರಕಾಂತಂಗಳಂತೆಸೆವ ಕಗ್ಗಲ್ಲ ಪುರ
ಹಿಂದೆ ಹರ್ಮ್ಯಗಳೋವರಿಯ ರಾಜಬೀದಿಯೊಳು
ನಿಂದು ನೋಡಿದಳಿಂದುಧರನು ಬಹನೆನುತಾಗ ವಂದಿಸಲುಸಂಧಿಸಮಯ||
[ ||೪೪||

## ಎರಡನೆಯ ಸಂಧಿ

---

ಆದಿಮಧ್ಯಾವಸಾನಂಗಳ
ಸಾಧಿಸುವರ್ಗಿನ್ನು ಸಾಧ್ಯವಾಗದ ಮಹಿಮ
ನಾದಕಳಾಬಿಂದ್ವತೀತನು
ಮಹಾಧವನುಜ್ಜನಿಯ ವಾಸ ಶ್ರೀ ಮಲ್ಲೇಶ||

ಆದಿಮಧ್ಯಾವಸಾನಕ್ಕೆಳಸದ
ನಾದಿಮೂರುತಿಯು ಲೀಲಾವಿ
ನೋದಗಳಿಂದಲಿ ನಾದವಿದೂರನು ಅಗಣಿತ
ಭೇದಿಸುವಂತರಿಗೆ ಭೇದ್ಯವಹ ಮಹಾಮಹಿಮಾ ||

ಇಂದು ಕಲಾವತಂಸನೆ
ಚಂದದಿ ಪೊಂದಿರ್ದಘವ ಕಳೆವ ಮಹಿಮನೆ
ಕುಂದುಕೊರತೆಗಳ ನೋಡದೆ
ಬಂದೆಮ್ಮನು ಸಲಹು ಗುರು ಶ್ರೀ ಮಲ್ಲೇಶ||

ಆದಿಶೂನ್ಯ ಉದಿಸಿದಂದಾದಿ ಮೂರ್ತಿ
ಅನಾದಿಮೂರ್ತಿಯಿಂ ಪರಶಕ್ತಿ
ಪರಶಕ್ತಿಯಿಂ ನಾದಬಿಂದು
ನಾದಬಿಂದುವಿಂ ಈಶ್ವರಾತ್ಮಶಕ್ತಿ
ಈಶ್ವರಾತ್ಮಶಕ್ತಿಯಿಂ ಶಿವಯಿಚ್ಛಾಶಕ್ತಿ
ಶಿವಯಿಚ್ಛಾಶಕ್ತಿಯಿಂ ರುದ್ರಕ್ರಿಯೆ
ರುದ್ರಕ್ರಿಯಾವಿವಾದಪುಟ್ಟದುದೆಂತೆನೆ || ವಚನ||

ಹರನುಮೆಯ ವಾದಪಸರಿಸೆ ಭೃಂಗಿಯಿಂದಲಾ
ಗಿರಿಜೆ ನರಲೋಕಕಂ ಕಳುಹೆ ತತ್ಸಖಿಯಳಾ
ಹರನುಜ್ಜನಿಯಪುರದಮಲ್ಲಿಕಾರ್ಜುನ ಬರಲುಯಿರೆ ರಜತಗಿರಿಮೆರೆದುದು||

ಇಂದುಕಲೆ ಕಲಕು ತೇಜಸು ಬೆಳಗಿನೊಳು ರಸ್ಮಿ
ಕಂದಿವಿಯೊಳಾಕರಂ ಬೆಳದು ಘನವೆನಿಸಿತಾ
ಮಂದತೆಯೊಳ್ ಕರಿಗಟ್ಟಿಕದಡು ಬೆಳದುದು ಸದಾನಂದಮಯುವಾಯು
ಕುಂದಕುಸುಮಗಳ ಚಲಬಂಧನವ ಮಲ್ಲಿಪೂ [ವಾಯ್ತು।
ಚಂದನಾಮರ ಸಿಂಧು ಜಲಶ್ರಿತ ಸಮಾಂಶುಗ
ಳ್ನಿಂದು ಘನರೂಪಾಯ್ತೊಯೆಂಬಂದದಿಂದಲುರೆ ರಜತಾದ್ರಿಕಂಗೆಸದುದು
[॥೧॥

ಹರುಷದ ತವುರ್ಮನೆಯೋ ಸರದ ಚಿಂತಾಮಣಿಯೊ
ಸುರಮಹೀಜವಪಡದ ಧರಣೀತಳಂಗಳೊ
ಪರಿಕಿಸಲು ಕಡವರದ ಕಡದೆರೆದ ತಾಣಮಂದಿರವೊ ಮಂಗಳದುದಾರ।
ಬೆರದಂತ ಸಿದ್ಧರಸವೊಸರ್ವಸದನವೊ ಕಳಾ
ಭರಿತ ಪಂಚಾಕ್ಷರಿಯ ಪ್ರಣವಮಂಗಳದ ಮನೆ
ಗುರುತರವೆನಿಪ್ಪ ಕಲಧೌತ ಶೈಲಂ ಮೆರೆಯೆ ಪರಿಪೂರ್ಣರುಚಿ ಕಳೆಯೊಳು
[॥೨॥

ಇಂದ್ರನೀಲಂ ಮರಕತದ ಮೌಕ್ತಿಕದ ಕಳೆಗ
ಳಿಂದು ಮಾಣಿಕ್ಯ ಪ್ರಭೆಯೊಳು ಪ್ರವಾಳದ ಬೆಳಗಿ
ನಿಂದ ರವಿಕಾಂತ ಮಣಿಗಣ ಖಚಿತ ಲಾಲಿತ್ಯವಿಂದು ಕಳೆಬೆಳಗಿನಿಂದ।
ಸಾಂದ್ರರುಚ್ಯಸ್ತಾನವೆಸವ ಮಂಟಪದೊಳಗೆ
ಚಂದ್ರನಿದ್ದನು ರತ್ನಮಯ ಸಿಂಹಪೀಠದೊಳು
ಬಂದು ಗಿರಿಜಾತೆ ಮೆರೆದಳು ವಾಮಭಾಗದೊಳು ಕುಂದಣದ ಪುತ್ರಿಕೆ
[ಯೊಲು ॥೩॥

ಇರುತಿರಲು ರಜತಾದ್ರಿವಾಸದೊಳು ಪರಮಾತ್ಮ
ನಿರುಪಮ ನಿರಂಜನ ಪರಾಪರ ನಿರಂತಕನು
ಪರತತ್ವ ಪರಿಪೂರ್ಣ ವಾಙ್ಮನಕಗೋಚರನಗಮ್ಯ ನಿರ್ಮಳ ರೂಪನು।
ಪರಶಿವ ಪರಬ್ರಹ್ಮ ಪರಮನುಪಮಾತೀತ
ನಿರವಯ ನಿರಾಕುಳ ನಿರಾಸ್ಪದ ನಿಶ್ಚಿಂತ
ಗಿರಿಶಿರೋವಾಸನುಂ ನತಸತ್ಯಪರಮಹಿಮ ಗುರುಮೂರ್ತಿ ಮೆರದನಂದು
[॥೪॥

ಪಶುಪತಿ ಶ್ರೀರುದ್ರ ಶಂಕರಂ ಸರ್ವಜ್ಞ
ಶಶಿಧರ ಸುಭದ್ರನುಂ ನತನಿತ್ಯ ಪರಮಾತ್ಮ
ವಿಷಕಂಠ ಬಾಳನಯನಂ ತ್ರಿಪುರಹರನನಘನಪ್ರತಿಮನ ಪ್ರಮೇಯ |
ವೃಷಭವಾಹನನತ್ಯತಿಷ್ಟದ್ದಶಾಂಗುಲನು
ಕುಸುಮಶರದಹನ ಭಸಿತಾಂಗ ಮಂಗಳಕಳೆಯು
ಪಸರಿಸುವ ತನುಮೂರ್ತಿ ತ್ರಿಶೂಲ ಕಪಾಲದಿಂದೆಸೆದು ಗುರುಲಿಂಗ
[ಮೆರೆದ ||೫||

ಪುಂಡರಿಕದಳನಯನನರ್ಚಿತಪದಂ ಮತ್ತ
ಪುಂಡರಿಕ ಚರ್ಮಾಂಬರಂಗ ಕಳೆವೆರದ ತನು
ಪುಂಡರಿಕ ವಸನಾಜಿನಂದುಳ್ಳಡೇಂ ಘನಚಂಡಾಂಶು ತೇಜವೆಸೆವ |
ಪುಂಡರಿಕೋದ್ಭವ ಶಿರಸ್ಕರನಮೃತಕರನು
ಪುಂಡರಿಕವಾದಿ ಘನಮೂರ್ತಿ ಖಂಡೇಂದುಧರ
ಪುಂಡರಿಕವರ ಪರಾಪರಮಾತ್ಮ ಕಾಲಹರ ಚಂಡಿಯುರಸಂ ಮೆರೆದನು ||೬||

ಹರನೋಲಗಂ ವೃಷಭಗಣರಸಂಖ್ಯಾತರಿರೆ
ಹರಿಯಜರು ಸುರಪ ಸುರ ವಿದ್ಯಾಧರಾಳಿಯಿಂ
ಗರುಡ ಗಂಧರ್ವ ಯಕ್ಷರು ಪಿಶಾಚರು ಚರರುಮರುತಪತಿಯಾದಿಯಿಂದ|
ತುರಗವದನರು ಗುಹ್ಯಕರು ಸಿದ್ಧ ಸಾಧ್ಯಖೇ
ಚರರುರಗವದನ ಹರಿಮುಖ ಮಹೋರಗರತ್ತ
ನೆರದುದೀಪರಿ ಪಙ್ಕ್ತಿ ಸುರಸಂತತಿಯೊಳಾಗಯಿರಲಭವಮೆರದನಂದು
[ ||೭||

ಖಂಡಪರಶುವಿನೋಲಗದೊಳೆಸೆವ ಮುನಿಗಳು
ದ್ದಂಡ ಶಾಪಾನುಗ್ರಹ ಸಮರ್ಥರೊಳಗೆ ಮಾ
ರ್ಕಂಡೇಯ ಪರಾಶರ ದಧೀಚಿ ಭೃಗು ಶುನಕತ್ರಿ ಮಾಂಡವ್ಯಮುನಿಗಳಿಂದ|
ಪುಂಡರಿಕನುಪಮನ್ಯುಸನಕ ಕಶ್ಯಪ ಜನ್ಹು
ಭಾಂಡಕನಗಸ್ತ್ಯ ಪೌಲಸ್ತ್ಯ ಪೌಲೋಮ ಋಷಿ
ಕೌಂಡಿನ್ಯಕಚ ವತ್ಸ ಸನಕನುಂ ನಾರದರು ವಿಶ್ವಮಿತ್ರ ವಶಿಷ್ಠರು ||೮||

ಸಿಂಧು ಸರಸ್ವತಿ ಯಮುನೆ ಕಾವೇರಿ ಸದಮಲಾ
ನಂದ ಕುರುಗಯೆ ಪ್ರಯಾಗೆಯು ನರ್ಮದಾನದಿ ಕ
ಳಿಂದಿ ಮಲಹರಿ ಭೀಮರಥಿ ಕೃಷ್ಣೆ ಭವನಾಸಿ ಗಂಡವತಿ ಸುರಪೂಜಿತ |
ಮಂದಾಕಿನೀ ಮುದದ ವೃಂದನದಿ ನಾರಿಯರ
ರುಂಧತಿಯರತ್ರಿ ಗಾಯತ್ರಿ ಸರಸ್ವತಿ ರಮೆಗ
ಳಿಂದ ಪುರಹರನೋಲಗಂ ಮೆರೆಯೆ ಗಿರಿಜಾರವಿಂದಕರಮೆರದನಂದು ||೯||

ನವರಸಂಗಳ ಕಳೆಯೊಳುಂ ಭೃಂಗಿಯಾಡುತಿರೆ
ಪವಣರಿದು ನಂದಿಕೇಶ್ವರ ಮೃದಂಗಂ ಕಮಲ
ಭವತಾಳಮಟ್ಟೆಯಟತಾಳ ಜಂಪೆಗಳನುವ ಕಿವಿಗಮೃತ ಸುಖಸಾರವ |
ಭವಳಿ ಮಲಹರಿ ದೇಶಿ ಶುದ್ಧ ಸಾಳಗಗೌಳ
ವಿವರ ವರ್ಣಗಳ ತುಂಬುರನರ್ತಿಸಲು ಸದಾ
ಶಿವ ಗಿರಿಜೆಕುವರಗಣಪರ ನೋಡಿ ನಗುವ ಭವಹರನೆಮಗೆ ಯಿಷ್ಟಾರ್ಥವ
[ ||೧೦||

ಅಂಗತಾಣಂಗಳೆಲ್ಲವ ನಡುಗಿಸುತ ಬಸುರ
ಪೊಂಗಿಸುತಲೊಲದೊಲದು ವಕ್ಕುಳಿಸಿ ಮೇಲುವಾ
ದ್ಯಂಗಳಿಗೆಬೆಚ್ಚುತಾಡುತ ಬೆರತು ಬಾಯ್ದೆರೆದು ಕುಂಗಿಕುಣಿವುತಲಾಡುತ|
ಕಂಗಳುಗಳರೆದೆಗೆದು ಮೆಳ್ಳಿಸುತ ಹಲ್ಲುಗಿರಿ
ದುಂಗುಟಂಗಳನೂರಿ ನಡನಡದು ನಡುಗುತಂ
ಭೃಂಗಿ ನಗಿಸಿದ ನೇಡಿಸುತ್ತ ಶಿವನಿದಿರೊಳುಂ ಹಿಂಗದೊಲದಾಡುತಿರಲು
[ ||೧೧||

ಹರಿನಯನ ಚರಣ ಪ್ರಭಾಕರವ ನೆರೆ ತೋರಿ
ಕರಶಿರವ ಜೋಲ್ದುಳಿದ ವಳಯಾಕರವ ಬೀರಿ
ಉರಗನಂ ಸುತ್ತಿರ್ದ ಉರುತರದ ಮಹಿಮೆಯಂ ತಿರುಗಿ ತಿರ್ರೆಂದುಲಿವುತ |
ಗರಳ ವಿಷಮುಂ ನೀಂಟಪರಿದು ಬಿದ್ದ ವಸರವ
ಚರಿಸಿ ಭಿಕ್ಷಾಟನಂಗೆಯ್ದು ಪರಿಭಾವವನ
ಹರಿಯೊಡನೆ ಜೋರವಿದ್ಯಂಗೆಯ್ದು ಪೌರುಷವನೆರೆ ತೋರಿ ತೋರಿ ನಗಿಪ
[ ||೧೨||

ದಕ್ಷ ಸಂಹಾರವನು ಮಾಡಿದ ಪ್ರತಿಜ್ಞೆಯನು
ಅಕ್ಷಿಯಿಂ ಪುರಮೂರ ಪುಡಿಗೈದ ಪೌರುಷವ
ಇಕ್ಷುಕೋದಂಡನಂ ಉರುಪಿದ ಸಮಸ್ಯವನು ರುಕ್ಮಾಪತಿಯಧರಿಸಿದ |
ಅಕ್ಷ ಮಾಲೆಗಳನವಧರಿಸಿದವತಾರವನು
ಸೂಕ್ಷ್ಮರೂಪಿನೊಳು ಬೆಡಗಿನ ಬೆಡಗನುರೆ ತಾಳ್ದು
ರಕ್ಷಿಸುವ ಶಂಭುವೆನುತಂ ನಾಂಟ್ಯದೊಳು ತೋರಿಸು ಕ್ಷೇಮಕುಶಲವರಿದು
[ ||೧೩||

ಈಶ ಸರ್ವೇಶ ಪರಮಾನಂದ ವರಗಣಾ
ಧೀಶ ಭವಹರ ಭಕ್ತವತ್ಸಲ ಕೃಪಾಕರನೆ
ವಾಸವಾದಿ ಪ್ರಕರಮಣಿಮು ಕುಟಮುಂಡಿತ ವಿಶೇಷಧೂಮಾಂಗ ಭಸಿತ |
ಮೇಷವಾಹನ ಸುಧಾರೋಚಿ ದಿನಕರನೇತ್ರ
ಭೂಸತೀವಲ್ಲಭ ಸುನೇತ್ರ ಪದದತಿಗಾತ್ರ
ಭಾಸುರ ಕಳಾಕಳ ವಿಶೇಷರಂಜಿಪ ರಮ್ಯನೀಶರಕ್ಷಿಸುಗೆಮ್ಮನು ||೧೪||

ಕಾಯಜಾಂತಕ ಕರುಣಿಕರಶಿರ ಶ್ರೇಷ್ಠ ನಿ
ರ್ಮಾಯ ನಿರುಪಮ ನಿತ್ಯಸತ್ಯ ಜಗದಾಧಾರ
ಮಾಯಾರಿ ದಂಡಧರ ಹರ ಪುಂಡರಿಕವಸನ ಹರಯುಸುತ ಹರಸಿನೆಗದು |
ಮಾಯಾಕೋಳಾಹಳ ಮಾಯಾಮುದತಿಮಿರ ಹರ
ಮಾಯಾ ಮೃದುವಾದ್ಯದೊಳು ಭಂಗಿಸಿದ ನಿಃಕಾಯ
ಜೀಯ ದೇವರದೇವ ಸಲಹೆನುತ ಭೃಂಗಿಯು ಬಾಯ ಮುರಿಕಿಸಿ ನಗಿಸಿದ
[ ||೧೫||

ಗಿರಿಜೆ ನುಡಿದಳು ಮಾಯಾ ಕೋಳಾಹಳನೆಂಬುವಿದು
ನಿರುತವೆ ಪರಶಿವಂ ಪರಶಕ್ತಿಯಿರಲಲ್ಲಿ
ಬೆರದು ಈಶ್ವರನಾತ್ಮಶಕ್ತಿಯೊಳು ಕೂಡಿವನ ಬಿರುದು ಬಿಂಕಗಳೇತಕೆ |
ಹೊರನೂಕಿ ಶಿವನಿತ್ಯಶಕ್ತಿಯು ಸಮೇತದಿಂ
ದಿರನೆ ರುಪ್ರ ಕ್ರಿಯಾಶಕ್ತಿಯಾಳು ಲೋಕವರಿ
ದಿರನೆ ಮಾಯಾಮಯದ ನದಿಯೊಳುಂ ಮುಳುಮುಳುಗಿನಿರವಯನು
[ ತಾನೆಂಬುವ ||೧೬||

ಸಡಗರವದೇಕಿನ್ನು ಬಿರಿದು ಬಿಂಕಗಳೇಕೆ
ಉಡುನಾಥ ಕಳೆಯನ್ನ ಮುಖಕಾಂತಿಯಿಂ ಪಡೆದು
ಜಡೆಮುಡಿಯು ಕಟ್ಟಿನ್ನ ಕಾಲಾಟದೊಳಗಣದು ಪಿಡಿದ ಪಾಶವದಾರದು |
ಕುಡಿದ ವಿಷವಾರಿಂದ ಉದಯುವಾದುದು ಕೇಳು
ನಡುತೊಡೆಗಳಿನ್ನ ಕುಲವಹುದೆಂದು ತಾ ಮುನ್ನ
ಮೃಡನೆ ಮೃತ್ಯುಂಜಯುಂ ತನ್ನೊಳುಂ ಜಯಸಿದನೆ ಬಡಿವರವದೇಕೆನಿಮಗೆ
[ ||೧೭||

ವಿವರಿಸಲ್ ಭೈರವಂ ಉದಿಸಿದ್ದುದೆನ್ನಮಯ
ಕುವರನುಂ ನೆರೆ ಜನಿಸಲಾರಿಂದಲಾಯ್ತು ಕೇಳ್
ಅವಿರಳ ಪರಬ್ರಹ್ಮನೆಂಬ ಹನುಮಂತನುಂ ನೆವದಿಂದಲೆನ್ನ ಮಯುವು |
ಶಿವನಸುತ ಗಣನಾಥನೆಂಬುದಿದು ಮಾಯುವ
ಲ್ಲವೆ ನಿಮ್ಮ ಮಾಯಾ ಕೋಳಾಹಳನೆಂಬುದಿದು
ಸರಿಬರುವ ಮಾತೆ ಕಾಯುಂ ತನ್ನದಹುದು ಜೀವಂನಿಮ್ಮದೆಂದುದಾಗಿ||೧೮||

ತಾನು ವಾರಣಾಸಿಯೊಳ್ವಿಶಾಲಾಕ್ಷಿಯೆನಿಸಿದುರ್
ತಾನು ನೈಮಿಷೆಯೊಳು ಲಿಂಗಧಾರಣೆಯುವಾಗಿ
ತಾನು ಲಂಕಾಪುರದೊಳುಂ ಶಂಕರಿಯುದೆಂದೆನಿಸಿ ಕೊಲ್ಲಾಪುರದ ಲಕ್ಷ್ಮಿ
ಏನೆಂಬೆ ಜ್ವಾಲಂಧರದೊಳು ಮಹದೇವಿಯೆನೆ [ ಯಾಗಿ |
ಏನೆಂಬೆ ಕುಬ್ಜಕಾಪುರದಲ್ಲಿ ಕನ್ಯೆತಾ
ನೇನೆಂಬೆ ಸಿಂಹಳದೊಳತಿ ಸಿಂಹಿಕಾದೇವಿ ಚಿತ್ರಕೂಟದಿ ಮಾಲಿಕೀ ||೧೯||

ಧರೆಯರಿಯೆ ಕಾಮುಪುರದೊಳಗೆ ಕಾಮೇಶ್ವರಿಯು
ಗಿರಿಯು ಪರ್ವತದೊಳುಂ ರೌದ್ರೇಶ್ವರಿಯು ನೋಡೆ
ಭರದಿಂದ ಯೋಗಿಣೀಪುರದಿ ಯೋಗಿಣಿಯಾಗಿ ಹಿಮಾಲಯುದಿಭೀಮೇ
ವರೆಯಲುಜ್ಜನಿಯೊಳುಂ ಮಹಂಕಾಳಿ ತಾನಾಗಿ [ ಶ್ವರೀ ||
ಇರುತಿಹೆನು ಕೊಲ್ಲೂರೊಳುಂ ಮುಖಾಂಬಿಕೆಯಾಗಿ
ಮರೆಯು ಮಾತೇಕೆ ಸಾನಿಲ್ಲದಿಲ್ಲದ ಠಾವಿಲ್ಲ ಮರುಳುಭೃಂಗಿಯೆ ಕೇಳೆಲೊ
[ ||೨೦||

ಇಂತು ಶ್ವೇತದ್ವೀಪದೊಳು ಪದ್ಮವಾಸಿನಿಯು
ಸಂತತಂ ಮೇರುವೆಯೊಳತಿ ಸುಪ್ರಭಾದೇವಿ
ಕಾಂಚಿಯಾಪುರದೊಳುಂ ಕಾಮಾಕ್ಷಿಯೆನೆ ತನಗನಂತವಾಗಿಹವುನಾಮ |
ಕಂತುಹರನೆಂಬುದುಂ ಲೋಕೋಪಕಾರವಿರ
ಲಂತರಂಗದೊಳು ಮನಸಿಜ ಭಸ್ಮ ಮಾಯಾವಿರ
ಲೆಂತು ಮಾಯಾಕೋಳಾಹಳನೆಂಬೆಯ್ಯೆ ಭೃಂಗಿ ಪಂಥಪಾಡೇಕೆ ನಿನಗೆ
[ ||೨೧||

ನಗಸುತೆಯು ಬಿಸುಸುಯ್ಲ ಬಿರುದುಳ್ಳ ಧ್ವನಿಗೇಳಿ
ನಗುತಲೀಶ್ವರ ಭೃಂಗಿಯುಂ ತಿರಸ್ಕರಿಸುತಲಿ
ಅಘಹರಂ ಅಜಸುರ ಪ್ರಮುಖರಂ ಕಳುಹುತಂ ಮುಗುಳ್ನಗೆಯ ಮಂದ
ಮೊಗೆಯೆ ಭೃಂಗಿಯು ಕಳುಹುತಗಜಾತೆಯೋಳ್ನುಡಿದ [ ಸ್ಮಿತ |
ಸಗುಣ ನಿರ್ಗುಣನಿರಾಧಾರ ನಿರ್ಲೇಪನುಂ
ಯುಗಜುಗದ ಗಣನೆಯಿಲ್ಲದಪ್ರತಿಮನಿನ್ನ ಬಗೆವೆನೇ ಸಾಕು ಸಾಕು ||೨೨||

ಪನ್ನಗಾಭರಣನೊಳು ನುಡಿದಗಳಾಗಿರಿಜಾತೆ
ಎನ್ನ ಗುಣದಿಂದ ದೈವತ್ವ ಜಗದುನ್ನತಿಯು
ಎನ್ನಿಂದ ಗಿರಿಜೇಶನೆಂಬ ನಾಮುವದಾಯ್ತು ಎನ್ನೇಕೆ ಮರೆಯುವಾತು |
ನಿನ್ನಗುಣ ನಿರವಯನು ನಿರ್ಲೇಪನೆಂಬೆಯಾ
ಉನ್ನತದ ರೂಪುಗುಣ ಕರಣಂಗಳೆನ್ನದಾ
ಗನ್ನಕದ ಮಾತಿದೇತಕೆ ಜಡೆ ತೊಡೆಯೊಳೊಂದಿ ಕನ್ನೆಯೊಡನಿರುತಿರುತಲು
[ ||೨೩||

ಎನಲು ಗಿರಿಜಾತೆಯುತ್ತರವ ಕೇಳುತಲಾಗ
ಮನದೊಳುಂ ನೆನದ ನಿರುಪಮ ನಿತ್ಯ ನಿರ್ಗುಣನು
ಜನನಮರಣಗಳಿಲ್ಲದಪ್ರತಿಮನಕಳಂಕ ಘನಕೆಘನ ಪರಮಾತ್ಮನು |
ಮನದೊಳುಂಕಿನಿಸು ನಸುಗೋಪವಂ ತಾಳ್ದು ಘನ
ತನುಮನಂ ರೂಪು ಯೌವನಗುಣಗಳಳಿದವಂ
ನೆನೆಯಲಿಲ್ಲದ ಘನವ ಮಾಯಾತಮಂಧದೊಳು ಸಿಲುಕುವನೆ ಪರಮ
[ ಯೋಗಿ ||೨೪||

ವಾಕುದೋಷಂ ಮನದೊಳಧಿಕ ಕ್ಲೇಶವನುಡಿದ
ರಾಕುಧರತನುಜೆಯವಿವೇಕನುಡಿಯಂ ಕೇಳಿ
ಶ್ರೀಕಂಠನುಡಿದ ವಾಕ್ದೋಷ ಪರಿಯಲ್ಲಿಮರ್ತ್ಯಲೋಕದೊಳುಜನಿಸಿ ನಿನ್ನ|
ಶ್ರೀಕಾರಗೆಡಿಸಿ ಭಂಗಿಸಿ ನಾಸಿಕಂ ಪರಿದು
ಮಾಕಾಳಿಯೆಂಬ ಪೆಸರಂ ನುಡಿಸುತಾಮೇಲೆ
ಕಾಕುಮಾಡುವೆ ಮರ್ತ್ಯಲೋಕದೊಳು ಜನಿಸೆಂದು ಲೋಕಮಾತೆಯ
[ ಕಳುಪುತ ||೨೫||

ಗಿರಿಜಾತೆಯಂ ಕಳುಪುತಂ ಪರಮನುಡಿದನಾ
ಧರಣೀತಳದೊಳಗಧಿಕ ಕೊಲ್ಲಾಪುರದೊಳೋರ್ವ
ಕರಟನೆಂಬಸುರನವನುದರದೊಳು ಜನಿಸುನೀ ವರವಿದಂ ನಿನಗೆನುತಲಿ |
ಹರ ಕಳುಪೆ ಗಿರಿಜೆಬಂದಳು ವಿನೋದಮನಾಂತು
ವರದೇಶಬೇಡಿದನೀವ ಸಂಪದವಾಸ
ಸುರನಪೋರಗ ಪ್ರಕೃತಿ ಮದ ಕ್ಲೇಶಪುರಕೆ ಬಂದಳುಬಂದಳು ||೨೬||

ಕೊಲ್ಲಾಪುರದ ವಿಸ್ತರಂಗಳವು ನವರತ್ನ
ಕಲ್ಲಿನಿಂ ಬಿಗಿದ ಭಿತ್ತಿಯೊಳುಲಿವ ಮಣಿದೆಸೆಗ
ಳಲ್ಲಿಗಲ್ಲಿಗೆ ಕೊತ್ತಳಾಳ್ವೇರಿಗಳು ಸುತ್ತದಲ್ಲಿಡಿದ ಸುಪತಾಕೆಯು |
ಎಲ್ಲದೆಸೆಯೊಳಗಂಬುಗಂಡಿಡೆಂಕಣೆಗಳುಂ
ಜಲ್ಲುತಿಹ ಹುರಿಮಳಲು ಕಾದೆಣ್ಣೆ ಕೊಪ್ಪರಿಗೆ
ಬುಲ್ಲೈಸುತಿರೆ ಮೆರೆದುದಸುರಪುರವಾವ್ಯೈರಿದಲ್ಲಣವೆನಿಸಿ ಮೆರೆದುದು ||೨೭||

ಹರ್ಮ್ಯಗಳೋವರಿಗಳಿಂದಲೊಪ್ಪುವ ವಿಶ್ವ
ಕರ್ಮನಿರ್ಮಿತ ಭದ್ರಸಾಲು ನಿಳಯಗಳು ಘನ
ಪೆರ್ಮೆ ಮಣಿಗಣ ಖಚಿತಲಾಲಿತ್ಯ ಮಂಟಪದಿ ನಿರ್ಮಿಸಿದಚಿತ್ರಕಳೆಯು |
ಕರ್ಮಕದು ಸುಸ್ಥಿರದ ವಾಸವೆನಲಸುರರ ತ
ವುರ್ಮನೆಯೆನಿಸಿ ತೋರಲಾಪುರದ ಘನವಗಜ
ಚರ್ಮಧರನೇಬಲ್ಲ ನದರಭಿಪ್ರಾಯ ಸಮವರ್ಮವನಾರ್ಬಲ್ಲರು ||೨೮||

ಆ ಪುರವನಾಳ್ವ ಕರಟಾಸುರನುಮೆಂಬವನು
ಪಾಪವೇ ಮೂರ್ತಿಗೊಂಡಂತೆ ಯಧಿಪತಿಯೆನಿಸಿ
ರೂಪ ಯೌವನಗುಣವು ಕ್ಷುದ್ರತ್ವವನೆ ತಳೆದು ಕಾಪಿಡಿದ ಪುತ್ರಿಕೆಯೊಲು |
ಕೋಪ ಪುಸಿ ಕ್ರೋಧ ಮತ್ಸರ ಮಾಯಾದುರ್ಮತ ಉ
ಮಾಪತಿಯೊಳುಂ ಸೆಣಸುವುಜ್ವಲ ಪ್ರತಾಪದಿಂ
ಭಾಪುಭಾಪೆನುತ ಪುರವರದೊಳಿರೆ ಘನವನಾನೇಪೇಳ್ವೆನವನುಗ್ರವ ||೨೯||

ಅವನ ಸತಿಯೆನಿಪ ಮಾಯಾದೇವಿಯುದರದೊಳು
ಧ್ಭವಿಸಬೇಕೆಂದು ಗಿರಿಜಾತೆ ಮಾಯಾರೂಪಿ
ನವತರಿಸಿ ಬಾಲಲೀಲೆಯೊಳುದಿಸಿ ಚಲುವಪ್ಪ ಭವನಸೋಲಿಪಕಳೆಯೊಳು |
ನವಕಾಂತಿ ಪಸರಿಪ ದಿವ್ಯತನುತೇಜ
ಯುವತಿಗಂ ಕುಚಚೂಚುಕಂದೋರುತಿಲಾಗ
ಯುವರಾಜ ಪಟ್ಟಮುಂ ಕಟ್ಟಿದಾನವನಾಗಲವಳ್ಕುರುಹಬಣ್ಣಿಸಿದನು ||೩೦||

ಪದನಖದಕಾಂತಿ ಮದಮುಖರಿಡುವ ಮುಖರಸಂ
ಪದಗುಲ್ಫ ಸದುಹೃದಯರೆದೆಯನುಚ್ಚುವ ಗುಂಡು
ಮುದದಿ ಕಣಕಾಲು ವಿಟಮೃಗವ ನಿಡುವರೆಗೋಲು ಸುದತಿಯುರರಂಭ
ಮದದಂತಿಯೆಂಬ ವಿಟಗಜವ ಕಟ್ಟುವ ಸ್ತಂಭ [ಗಂಭ
ಮದನಮಂದಿರದರ್ಥಮುಂ ನಯನ ಪ್ರೀತ್ಯರ್ಥ
ವೊದವಿ ತ್ರಿರೇಕಾಳಿ ಜಲವಳಿಯೊಳು ಮುಳುಗಿ ಪುದಿದಿರ್ದ ನಾಭಿಗೊಳದಿ
[||೩೧||

ಅರಸಂಚೆಯೋಲ್ವಿಟ ಕುಲಂ ಮುಳುಗಿ ಬಳಲ್ದಾ
ಗುರುಕುಚದ್ವಯ ಕಮಲದಿನಿಬಂದಕದ್ರುಕುತಂ
ಧರೆ ಚಂದ್ರಬಿಂಬಾಧರದಮೃತವ ಸವಿದೊಡನೆ ತರುಣಿಯುಂಪೊಗಳಿಬಳಿಕ |
ಅರೆವಿರಿದ ಚಂಪಕದ ಪೆಂಪುನವಗಂಪನಾ
ವರಿಸಿ ಕುವಲಯುದಕ್ಷಿಸವಿನೋಟದೊಳು ಸಿಲ್ಕಿ
ಧರೆವರೆಯ ನೊಸಲೊಳುಂ ನೆರೆವೆರೆಯ ಸಾದೊರ್ಲುಂ ಸಿರಿಗಿರಿಯ ಶಿಖ
.[ಯೊಳಿರ್ದ ||೩೨||

ಹೆಂಗಳ ಶಿರೋರತ್ನವೆನಿಪಬಾಲಕಿಯು ಕಳೆ
ಯುಂಗುಟಂ ಶಿರವಾದಿಯೆನಿಪ ಷೋಡಶ ಕಳೆಯ
ನುಣ್ಗುರುಳಕಾಂತಿ ಗೌರವದಂಗಕಳೆನಾಹಿಂಗ ದೀಕ್ಷಿಸಿನೋಡುತ |
ಮಂಗಳಪ್ರದ ಸುಖದ ಸಂಪದದಲೋಲಾಡಿ
ಯಂಗಜಾಂತಕಗೆ ಸರಿಮಿಗಿಲೆಂದು ದಾನವನು
ಕಂಗಳುಂ ಮೂರುಳ್ಳ ಬರಲಿಯೆನುತಾಪುರವ ಶೃಂಗರಿಸವೇಳೆಂದನು ||೩೩||

ಒಡ್ಡಿದಸಿ ಡೆಂಕಣಿಯು ಪಿಳ್ಳಗೋಟಿಯೊಳಂಬು
ವಡ್ಡಾಯುಧಂ ಕರಗಸಂ ಕತ್ತಿ ಪಿಡಿವದ ಸಿ
ಜಿಡ್ಡಿಯೋವರಿ ಕಳ್ಳಗಂಡಿ ಕಾಯ್ದಿಡಿದನುಪುಗುಡ್ಡರುಗಳಾವಯಿಪು |
ಮಡ್ಡಿಕಾಸಿದಕಾಯ್ಪು ಸುತ್ತವಳಯದೊಳಾಗ
ವಡ್ಡಮಲ್ಲೇಶ್ವರ ಮಹೇಂದ್ರಜಾಲವ ತಳೆವು
ತಡ್ಡಹಾಯ್ಪವರ ನಿರಿದರೆಯುಟ್ಟಿ ಸೋಲಿಸುತ ಚಡ್ಡಿಗೊಳ ದಿರುತಿರ್ದನು
[ ||೩೪||

ವಿಷದ ಮಡು ಕೆಂಡಕೊಂಡಗಳಿಂದಲುದ್ಭವಿಸಿ
ಬಿಸಿಯುಣ್ಣೆ ಬೆಂಜೆಯಿಂದೆಸೆವ ಹೆಂಡದ ಕೂಪ
ವಸರ್ವಸಾರಯದೊತ್ತಿಲೆಸೆವ ಬಂಗಿಯುರಾಸಿ ಹಸಿಯುಪ್ಪುಧರ ವಿಡಿದಿರೆ |
ಎಸೆವದುತ್ತುರದಿ ಕಂಪಿಸುವ ಪೊಸಕಾಯಿಂದ
ಹಸಿಯು ಜಾಪತ್ರೆ ಫಲಪಕ್ವವಿಡಿದಿಹ ರಾಸಿ
ಎಸೆದಿರೆ ಲವಂಗ ಹಿಪ್ಪಲಿ ವೀದಿವೀದಿಯೊಳಸುರಪುರ ಕಂಗೆಸದುದು ||೩೫||

ಶೇಷವೆನಿಸುವ ನಾಗಕುಲದಿಂದ ನೆರದೊಡನೆ
ಶೇಷನು ಮಹಾಶೇಷನಂತಕರ್ಕಟಗಳಿರೆ
ವಾಸುಕಿ ಮಹಾಪದ್ಮ ಸಂಕುಳಗಳಿರೆಯುದರೋಳ್ ಸಾಸಿರದ ಮುಖ
ಅಸುರನ ಕಡೆವಾಗಿಲೊಳು ಕಾಯ್ಪುವೆತ್ತಾಗ [ಸರ್ಪನು |
ದೇಸಿಕರು ಶೈವ ವೈಷ್ಣವ ದರ್ಶನಾದಿಗಳ
ಘಾಸಿಮಾಡುತ ಲಂಜಿಸುತ ಕೆಲವರ ಭುಂಜಿಸುತ ವಾಸವನುಪೊಗಲೀಸರು
[ ||೩೬||

ಅಲ್ಲಲ್ಲಿ ಪುರದ ಬಾಗಿಲು ಬಾಗಿಲೊಳಗಾಗ
ಖುಲ್ಲರೆಂಬಸುರ ಸಂತತಿ ನೆರೆದು ಘೂರ್ಮಿಸುತ
ಮಲ್ಲಾಸುರನು ಮಾಯುಮುದವು ಕಾಗೊಂಡಸುರ ಕಲ್ಲೆದೆಯಕಾಣ್ವರೆನಿಪ |
ಹಲ್ಲುದ್ದ ಹಲವಂಗದವನು ಕರಿದಲೆಗನುಂ
ಜೊಲ್ಲುವಾಯ್ಕೆಂಗಣ್ಣು ತೋರಗಿವಿ ದೊಡ್ಡತುಟಿ
ಡೊಳ್ಳು ಹೊಟ್ಟೆಯು ಹಸಿಯುಡಗತಿಂಬ ರಕ್ಕಸರು ಕೊಲ್ಲಾಪುರದಿ ನೆರದಿರೆ
[ ||೩೭||

ಸಾಧಕರು ನೆರದುದಾಪುರ ಮಧ್ಯವೀದಿಯೊಳು
ಆದಿಸಾಥನು ಮಿಾನಸಾಥನ ಸೌರಗರೆನಿಪ
ನಾದಿವಾಗದ್ವೈತ ಗೋರಕಾಸಿದ್ಧರಿವರೀ ಧರೆಯೊಳತ್ಯಧಿಕರು |
ನಾದಮುಯುನುಂ ಪೆಸರ್ವಡೆದ ವಿರೂಪಾಕ್ಷ ಮಿಗಿ
ಲಾದವನು ಮೇಘನಾಥನು ಕ್ಷಣಿಕನೆಂಬವನು
ವಾದಪ್ರಸಂಗದೊಳಗಧಿಕ·ನಾಗಾರ್ಜುನಂ ಮುಂತಾದಸಿದ್ಧರೆಸೆಯೆ ||೩೮||

ಸಿದ್ಧಿಯಂ ಪಡೆದ ಸಾಧಕರೆಸುದಾದಪುರದಿ
ಸಿದ್ಧಸಾಧಕರ್ನೆರದನಲ್ಲಾಳಸಿದ್ಧಮಿಗಿ
ಲ್ಬುದ್ಧಿಯಾತ್ಮನ ಪಡದ ಬಲ್ಲಾಳಸಿದ್ಧನೆರೆಮುದ್ದಿಸೊಳು ಕುಟಿಲ ಸಿದ್ಧ |
ಯುದ್ಧಕೋಳಾಹಳ ಸಿದ್ಧ ನಂಜನಸಿದ್ಧ
ರಿದ್ದರಾ ನಗರದೊಳು ರೇವಣ್ಣ ಸಿದ್ಧಬಹು
ಸಿದ್ಧರಿಂಗಧಿಪ ಗೋರಕಸಿದ್ಧ ನವನಾಥಸಿದ್ಧೆಸೆಯೊಳೊಪ್ಪಿಮೆರೆಯೆ ||೩೯||

ಮಸಿ ಮಾಯಾದೇವಿಯುರ ಸುತ್ತುವಳಯದೊಳ
ಗರವಿಂದಮೊಗಲೋಚನಂ ಕುಮುದದಳನಯುನ
ಕುರುಳ್ದುಂಬಿ ಕಳವೆತ್ತ ಪೆರೆನೊಸಲಕಾಂತಿಯಂ ಸುರಚಾಪ ಮಿಗಿಲಪುವ |
ವರ ಕರ್ನಪಾಲಕಿಯು ಕದಪು ಕಣ್ಗುಡಿವಿಡಿದು
ಯಿರೆದಂತಪಂಕ್ತಿ ಮಂದಸ್ಮಿತಾಧರ ಕಳೆಯು
ಕೊರಳುರ ಕುಚದ್ವಯಂ ನಾಭಿ ನಡುತೊಡೆಗಳಿಂ ಚರಣಮಾಂದಳಿರ
[ ತಳವು ||೪೦||

ಬಿದ್ದ ಮೊಲೆಯುವರು ಕೆಂಗರಿಗಣ್ಣು ಪರಿದಲೆಯು
ಗುದ್ದುಗಣ್ಣಿನ ಮುದ್ದೆ ಮೂಗು ಹರಿಗಿವಿಗಳಿಂ
ತೆದ್ದಬುಜಮೋರೆಯುಗಲ್ ನಿಡಿದೋಳು ಹೆಬ್ಬಸುರಪೇರ್ದೊಡೆಯುನೇಕ
ಉದ್ದುರುಟು ಬಯಲ ಹೋರಟೆ ಬಸವಳಿವ ಹಾಸ್ಯ [ ವಾಂತು |
ಮುದ್ಗರಿಪ ಸೂಳುಪಾಳಿನ ಹೊಯ್ಲು ಮದದಾಟ ................
ಗೆದ್ದವರ ಸೋಲಿಪರು ಸೋಲಿಪರ ಸೇಳಿಪರು ಯಿದ್ದರಿದ್ದೆ ಸೆಯೊಳಂದು
||೪೧||

ಸೀರೆಯಂ ಸೀಳಿ ಮುಂಡೆಗೆ ಸುತ್ತುತೊಲದೊಲದು
ಹಾರವಂ ಹರಿದು ಹಲ್ಮೊರೆದು ಹಣೆಗುಟ್ಟುತಂ
ತೋರಗಣ್ಣಿಂ ನೋಡಿ ನೋಳ್ಪವರನಣಕಿಸುತ ಬಾರವಿಯೆಬಾರೆನುತ |
ಸಾರಿದರ ಮೇಲುಗುಳ್ದು ಮಧುರಸವನೀಂಟುತಂ
ಜಾರವೆಂಗಳ ನಗಿಸಿ ನಾಟ್ಯದೊಳು ಜತಿದೋರಿ
ಹಾರುವರ ಕರಕರದು ಮಲಗೆಂಬ ಮಧುಪ್ರಿಯರು ನಾರಿಯೋಲಗ
[ ದೊಳಿರಲು ||೪೨||

ಇಂತು ಕೊಲ್ಲಾಪುರದ ಬಾಗಿಲೊಳು ನವಸಿದ್ಧ
ಸಂತತಿಯದೊಂಭತ್ತುಕೋಟಿ ದಾನವರೆಯ್ದಿ
ಮುಂತೆ ಪಿಂತೆಡಬಲದಿ ಕಾಯ್ದುವೆತ್ತಾ ಘನವಕಾಂತೆ ಮಾಯೆಯು
ಸಂತಸದಿ ಕರಟಸುರ ಮಾಯರುಹ ನೋಡಿ ಘನ [ ಕಾಪಿಲಿ |
ಕಂತುಹರನಿವಳೆಣೆಯೆ ಕಾಮಾರಿಮಾರಿಯುನ
ಲಿಂತು ಕೊಲ್ಲಾಪುರದ ಮಾಯೆ ಸುಖಮಿರುತಿರುತ ಕಂತುಹರ ನೆಣಸು
[ ಮಿಗಿಲು ||೪೩||

ಕೊಲ್ಲಾಪುರದ ಬಹಿರ್ವನವಳಯುವೀಧಿಯೊಳು
ನಿಲ್ಲದೂದುವ ಕಹಳೆಗಳರವಂ ಮೊಳಗಲಾ
ಸೊಲ್ಲು ಸತಿಯರಿಗಿದಿರು ಗಾಣೆನೆಂಬನಿತನಿತು ಯಲ್ಲದೆಸೆ ದಿಕ್ತಟದೊಳು |
ಫುಲ್ಲನಾಭನು ಫುಲ್ಲಭವ ಪಾಕಶಾಸನರು
ಬಲ್ಲವರು ಭಾವಕರು ಸುಖಮುಖರು ತ್ರಿದಶರುಂ
ಎಲ್ಲ ಮಾಯಾಪಾಶದೊಳುತೊಳಲಿ ಬಳಲುವರು ಜಲ್ಲೆದೆಯಜಡರು ಸರಿಯೆ
[ ||೪೪||

ಹರಿಯುರವನೇರಿ ದ್ವಾರಕಿಯು ಸೂರೆಯು ಮಾಡಿ
ಪರಮೇಷ್ಠಿಯುರುತರದ ಮುಖಮುಚ್ಚಿ ಲಕ್ಷ್ಮೀಸುತ
ನುರುಹಿ ಪರಮೇಶ್ವರನ ಶಿರಮುಡಿಯೊಳಿಂಬಿಟ್ಟ ಸರಿಗಾಣೆನೆಂದೆನುತಲಿ |
ನರಸುರೋರಗ ಪರಿಪರಿಯ ಭಂಗಕ್ಕಿಕ್ಕಿ
ಸುರನಂ ಚರಣಾಯುಧನ ಮಾಡಿ ಕೂಗಿಸುತ
ಸರಿಗಾಣೆ ಹೆಂಗಳೊಳಗಿದಿರಾರದುಂಟೆಂದು ಬಿರುದುಗಳಕಹಳೆ ಚೀರೆ||೪೫||

ಬಿರುದಿನುಕ್ಕಡ ಕಹಳೆರವ ಮೊಳಗಲ್ಡಾದವಂ
ಗಿರಿರಾಜ ತನುಜೆಯು ವಿವಾದವೆನುತಂತಾಗ
ಪುರಹರಂ ನೆನದ ಪೂರ್ವೋತ್ತರದ ಕಥನಂ ಪರಿಹರಿಪೆನೆನುತಾಗಳು |
ವರಿಸಿ ಮಾಯೆಯು ಗರ್ಭಗಳನಿರಿದು ಸಾಪಿಕವ
ದರಿದಸುರ ಪಡೆಯು ಸಂಪರಿಸಿ ತೋರುವೆನೆಂದು
ಗುರುರೂಪಮುಂ ಪಡೆದು ನರಲೋಕಕ್ಕೈದಿಯೆುಸೆ ಚರಲಿಂಗಮೂರ್ತಿಬರಲು
[ ||೪೬||

ಜನನಿಯುಂ ತಾನೆನಿಪ ಘನಮಹಿಮ ಚಿನ್ಮಯನ
ತನುಜನುಂ ತಾನೆನಲು ಜನಕನುಪಮುಂ
ಜನಕನುಂ ಲೋಕತಾಂ ಘನಕೆಘನ ಪರಕೆಪರ ಜನನಮಾತ್ರವದೆಂಬುದ|
ನೆನದೊಡನೆ ಪರವಸ್ತುವಿಂ ಕೃಪೆಯ ಪಡೆದಾಗ
ಜನನಕ್ಕೆ ಬಪ್ಪೊಲುಂ ಲೋಕ ಸೂಚಿತವಾಗಿ
ಅನುನಯದಿ ಪರಶಿವನ ಬೀಳ್ಕೊಂಡು ಬರೆಪರಸಿ ಘನಮಹಿಮ ನುಡಿದ
[ ನಂದು ||೪೭||

ಪರಶಿವಂ ನುಡಿಯ ಲಾಪಶುಪತೀಶ್ವರನೆಂದ
ನರಲೋಕದಲಿ ಜನಿಸಿ ನರಜನ್ಮವನು ತಾಳ
ಲರಿದೆನಲು ತನಗೆಂದು ನುಡಿವುತಿರಲಾ ಮೂರ್ತಿಹರುಷಮಿಗೆಸಂತವಿಸುತ |
ಗುರುಮೂರ್ತಿಯಾಗಿ ನಿನ್ನಂತರಂಗವನೈದಿ
ಸ್ಮರಿಸಿದಿಷ್ಟಾರ್ಥ ಸಿದ್ಧಿಯನಿತ್ತು ಕರುಣಿಸುತ
ನರಜನ್ಮವಂ ಪರಿದು ಘನಕೆಘನವೆನಿಸುವಾ ಮರುಳು ಸಿದ್ಧೇಶನೆನಿಪ ||೪೮||

ಧರೆಯೊಳುಂ ಚರಿಸಿ ಮಾಯೆಯ ಗೆಲ್ವವರವಿತ್ತು
ಪರಶಿವನ ಬೀಳ್ಕೊಟ್ಟು ಪಿಂತೆತಾಬಹನೆಂದು
ಹರುಷಮಿಗೆ ರೇವಣಾಸಿದ್ಧಗುರುವೆಂದೆನಿಪ ಪರಮ ಕಳೆಯಂ ಬೀರುತ |
ಮರುಳನೆಂದೆನಿಸಿ ಮಾಯೆಯ ಸಾಸಿಕವನರಿದು
ಗಿರಿಜಾತೆಯನು ತಿಮಿರಜಾತೆಯನು ಮಾಡುವಾ
ತುರದಿ ನರಲೋಕಕ್ಕೆ ಕಳಪುತಾ ಪರಶಿವನುಮಿರೆ ರುದ್ರಗಣಸಹಿತಲು ||೪೯||

ಇರುತಿತ್ತ ಮರುಳುಸಿದ್ದೇಶ್ವರನು ನಡೆಗೊಂಡು
ನರಲೋಕದಿರವು ಪುಣ್ಯದಬೀಡು ಸುಸ್ಥಲವು
ವರ ರುದ್ರಭೂಮಿ ಪರುಷಣದ ತಾಣ ತವರ್ಮನೆಯು ಬೆರದಶಂಕೆಯ
ಗರುಗವರಚಲಗಿರಿಯಾವಾಸವದು ಸ್ಥಿರವೆಂದು [ ಸೊಡರ್ಚುವ |
ಮೆರವ ವಳೆಯಾಂತರಂತರದ ನೆಲೆಪೀಡೆಂದು
ಪರಮಪಾವನರೂಪಸ್ಥಿರಮನವ ಪಿಡಿದಾಗ ಬರುತ ನೆನದಂನೆನದನು||೫೦||

ಆದಿಯೊಳು ಶೀಲಾದಮುನಿಗೆ ವೃಷಭೇಶ್ವರನು
ಭೇದಮಿಲ್ಲದೆ ಸುತನುಮಾದ ಕಾರಣದಿಂ ಶಿ
ಲಾದಮುನಿಪತಿಯ ಸತಿ ಸುಪ್ರಭೆಯು ಹೃದಯದೊಳಗುದಿಪೆನೆನಲು |
ಆ ದೇವಿಬಂದು ಕಗ್ಗಲ್ಲ ಪುರವರದೊಳಗೆ
ಮಾದಿಗರ ಜನ್ಮವಾದವರ್ಗೆ ಸತಿಯೆನಿಸಿರಲು
ಭೇದವಿಲ್ಲದವರಮನದನುಭವದೊಳಿಂತುವೇದಿಸುವೆಮೆನುತಮಿರಲು||೫೧||

ಕಗ್ಗಲ್ಲಪುರದ ಗೌಡನ ಭೃತ್ಯನೆಂದೆನಿಪ
ನುಗ್ಗುದಾನ್ವರಗಂಡ ನೂರ್ಧ್ವಕಾಲನು ಅಧಮ
ಭರ್ಗನ ಮನೋರಥನ ಭಾವವಳವಟ್ಟಿರಲು ಹೆಗ್ಗಡೆಯ ಕುಲಜಗತನು |
ಹಗ್ಗಹುರಿ ನೇಣು ಮಿಣಿ ಪಾದುಕೆಯ ಮಾಡುತಿರ
ಲೊಗ್ಗುಣದೊಳ್ಳೈತಂದು ಮರುಳು ಸಿದ್ಧೇಶ್ವರನು
ಜಜ್ಜುಗಂಥೆಯುಬಾರಿದಂಡದೊಡನ್ನೈತಂದು ನಿರ್ಗಮ್ಮರ ನಿರತನಾಗಿ ||೫೨||

ಬಾಚಿಗೌಡನ ವರಸುಜಾತನೆಂದೆನಿಸುವನು
ಕೂಚಿಮಾರನು ತನ್ನ ಪಯಿಕದೊಡನಿರೆ ನಿಗಮ
ಗೋಚರನು ಬಂದು ಶರಣುಬೇಡುತಂ ಆಗಯೋಚಿಸುತ ಪರಕೆಯಿತ್ತು |
ರಾಚಮಲ್ಲಣ್ಣನ ಸುಯಾತ್ರೆ ಬರುತಿದೆ ಮುಂದೆ
ಭೂಚಕ್ರದೊಳು ಚರಿಪಮನಸೊದಗುತಿದೆ ನಮಗೆ
ಸೂಚಿಸಿ ಮಹಾಮಹಿಮ ಮಾಯೆರೂಪಿನ ಹರನು ಕೂಚಿಯೊಳು ನುಡಿದ
[ ನಂದು ||೨೪೩||

ಶ್ರೀಗಿರಿಗೆ ಪೋಪಯಣಂ ಸಾಗಿತೆಲೆ ಮಗನೆ
ಆಗಬೇಕೆರೆಡು ಪಾದುಕೆ ನಮ್ಮ ಪದಗಳಿಗೆ
ಬೇಗಮಾಡುವುದೆಂದು ಪರಸಿಭೂತಿಯನಿಡುತ ರಾಗಮಿಗೆಸಂತೋಷದಿಂ |
ಆ ಗುರುನಿರೂಪವನು ತಾಳಿ ಹರುಷದಿ ಮಾರ
ನಾಗ ತನ್ನಯ ಸತಿಯು ಕರೆದಭವ ಪೇಳಿದನು
ಈಗಲೀಕ್ಷಣದೊಳಗೆ ಪೊಲಿಯೆರಡು ಪಾದುಕೆಯ.ನಾಗು ಮಾಡೆಂದನಭವ
[ ||೨೪೪||

ಶಿವನು ಪೇಳಿದ ನಿರೂಪವನಾಂತು ಸತಿಯಳಿಗೆ
ತಿಳುಹಿದನು ಪಶುಚರ್ಮವೆಂತೊಲಿವ ಶಿವಪದಕೆ
ವಸಿತೆ ಮಾನ್ವರ ಚರ್ಮದಿಂದ ಪೊಲಿಯೆಂದೆನಗೆ ಅಭವಪ್ಪಣೆಯಿತ್ತು
ಅವಗೆಂತು ಮಾಡುವೆನದೆಂತು ಚಿಂತೆಯೊಳಿರಲು [ ಪೋದ |
ಯುವತಿ ನುಡಿದಳು ತನ್ನ ಮೊಲೆಗಳಂ ಕೊಯ್ದೀಗ
ಶಿವಗೆ ಪಾದುಕೆಯ ಮಾಡೆಂದು ಬೆಸಸುತ್ತಿರಲ್ಕವ ಕೊಯ್ದು ಮಾಡಿ
[ ಮೇಲೆ ||೨೪೫||

ತನುಮನಂಸವೆದು ಮಾರನು ಸತಿಯುಸಹಮಿರಲು
ಘನಮೂರ್ತಿಬಂದು ಪಾದುಕೆಯಾದವೇ ಮಗನೆ
ಎನುತಿರಲು ಸತಿಪತಿಗಳೊಂದಾದ ಮನಸಿನಿಂ ತನುಮನಸಮರ್ಪಣೆಯಲಿ|
ಮನಸಿಜಹರಂಗೆ ಪಾದುಕೆಯ ಮೆಟ್ಟಿಸಲಾಗ
ಮನಮೆಚ್ಚಿ ಮಾರಹರ ಬೇಡುವರವೆಂದೆನಲು
ತನುಜರಿಲ್ಲದ ಬಾಳು ಮನೆ ಪಾಳುಮೆನುತಾಗಲಣುಗನಂ ಬೇಡಲವರು
[ ||೨೪೬||

ತರಳರಿಲ್ಲದ ಬಾಳು ಕರಿಯೋದ ವೃಕ್ಷದೊಲು
ಸುರಲೋಕವಿಲ್ಲ ನರಕವು ತಪ್ಪದವರ್ಗಿನ್ನು
ತರಳರುಂ ಕಾಯೆಂಬದಾಯೆಂಬ ಪರಿವಿಡಿಯಲ್ ಪಿರಿದುಬಂದಪ್ಪುತಿರಲು|
ಉರಕೆದೊಳಂ ಪೊರೆದು ಗುರು ಕುಚಂಗಳೆಂಬೆರಡು
ತೊರದ ಮೊಲೆಯುಣುತ ಕುರುಳ್ಗಳ ಪಿಡಿದು ಪರಿದಾಗ
ತರಳನಂ ಪಿಡಿದಪ್ಪಿ ಮುದ್ದಿಸದವಳ ಜನ್ಮ ಪರಮುಪಾತಕವೆಂದರು ||೧೭||

ಮಕ್ಕಳಾದರೆ ನಿಮಗೆ ದುಃಖ ಬಹುದೆಲೆ ಮಗನೆ
ಮಕ್ಕಳಾದರೆ ಮರಣಗಾಲ ನಿಮಗೆನುತಾಗ
ಮುಕ್ಕಣ್ಣ ಬೆಸಸೆಬಹುದೀಗ ಬರಲೆನುತಾಗ ವಕ್ಕಣಿಸಿ ನುಡಿವುತಿರಲು |
ಕಕ್ಕುಲತೆ ಜೀಡ ಉಳಿದಾದವರವನು ಕೇಳಿ
ಮಿಕ್ಕಪದವೀವೆ ಸೌಖ್ಯದಿ ಬಾಳಿರೆನುತ ಹರ
ಮಕ್ಕಳ್ ಫಲವಿಲ್ಲ ಬಂಜೆವಂಶಿಗಳೆನುತಲಿಕ್ಕಿದನು ಬಹುವಚನವ ||೧೮||

ಆ ನುಡಿಯ ಕೇಳುತವರೇನು ಬಂದರು ಬರಲಿ
ನೀನೆ ಮಗನೆಮಗಾಗೆ ಮೇಲೆ ಮರಣಂಬರಲಿ
ಹೀನ ಮನಸಿಲ್ಲ ನಿಮ್ಮಾಣೆ ಪುನರಪಿಯಾಣೆ ಮಾನವರ ಮದವಳಿಯಲಿ |
ಏನಾದಡೆಂಬ ಮನಸಿನ ಕಳೆಯನುಳಿದಾಗ
ನಾನೆ ಮಗನಹೆನೆಂಬ ಘನಶಂಕೆ ವಿಡಿದಾಗ
ಭಾನು ತೇಜಸನವರ ಬೀಳ್ಕೊಟ್ಟು ಗಮನಿಸಿದನೇನೆಂಬೆನವರಿತ್ತಲು ||೧೯||

ನಿಷ್ಠೆವಿಡಿದಿರ್ದ ಸುಪ್ರಭೆ ಸೋನೆಯುದರದೊಳ
ಗಷ್ಟಕಳೆಗಳ ನಿಮಿರ್ಚುತ ಮದನಕೊನೆಯೊಳುಂ
ಸೃಷ್ಟಿಯರಿಯಲು ಪಿಸೋದವ ತಾಳ್ದು ಹಿತವನಿಂಬಿಟ್ಟು ನರಲೋಕ
ಶ್ರೇಷ್ಠತ್ವ ತನಗದೆಂದುಂ ಪಡೆದ ಜನನಿಗಂ [ ಚರದಿಂ |
ಇಷ್ಟಪದಗಳನೀವ ಕರುಣೋದಯದ ಪದವ
ನಿಷ್ಠೆಮಿಗಲೀವ ಗುರುಮೂರ್ತಿ ಜನಿಸುವ ಜನನವಷ್ಟದಳ ಕಮಲದೊಳಗೆ
[ ||೨೦||

ಅಮೃತಕಳೆಯುಳ್ಳ ತನುಮನ ಕೊನೆಯ ಗರ್ಭದೋ
ಳಮರ್ದ ತನುರಸಬಲಿದು ಮನ ತೃಪ್ತಿಯಾಗಲಾ
ರಮಣಿಗುತ್ತಮ ಭಕ್ತಿಶೀಲನಂ ನೆನಹಿಡಿದು ಸಮಗುಣದ ಸಂದೋಹದಿ |
ಕಮಲಮುಖಿಯಂಗ ಪ್ರಜ್ವಲಿಸಲು ನಿರಾಕಾರ
ನಿರ್ಮಿದ ಶರೀರಾಂಗ ತನು ಬೆಳ್ಪುದೋರುತಿರೆ
ಸಮಗುಣಂ ಸಮಧಾತು ಮೆರೆದು ಮನಮಿರಲಾ ತಮಹರದು ಬೆಳಗು
[ ದೋರೆ ||೬೧||

ಕಚಪ್ರಚಯ ನಿರ್ಮಿದಂಕುರಂದೋರೆಯುಪಚರಕೆ
ರುಚಿಯ ರುಚಿಯಾಗಿ ಗಂಧವಂಗಡಿಸುತ ಮನಂ
ಕುಚಚೂಚುಕಂಗಳುಂ ನೀಲವರ್ಣವನೆಯ್ದೆ ಶುಚಿಮನಂಬಿಣ್ಪುದೋರೆ |
ಅಚಲಮೂರ್ತಿಯ ರೂಪು ಬಲಿದು ಮನಕೊನೆಯೊಳುಂ
ದುಚಿತಗುಣವೆರಡೊಂದುಗೂಡಿ ವಿಶ್ರಮಿಸುತಿರೆ
ಶಚಿಯರುಂಧತಿಯರುಂ ಬಂದು ತೂಪಿರಿಯೆ ಗುರುಕುಚೆಯತನುಮನ
[ ತಾಪವ ||೬೨||

ಮಂದಗಮನೆಯ ಮಧ್ಯಮನದ ತ್ರಿರೇಖಾಳಿ
ಯೊಂದೊಂದು ಬೇರ್ಪಡದ ನಾಭಿ ಸರಸಿಜದಳಗ
ಳೊಂದೊಂದ ನಟಿಸುತಂ ಬಡಭಾಷೆ ಪಲ್ಲಟಿಸಲಿಂದು ಕಳೆಕೂಡಲೊಡನೆ |
ಬಂಧಿಸಿದ ಕಳೆಗಳುಂ ಬಲಿದು ಬೆಳ್ಪಾಗೆ ಮನ
ಸಂದು ಕೋಮಲ ಗಾತ್ರೆಗಂ ಬಲ್ಪು ಸರಿದೋರೆ
ಮಂದಗತಿ ಕದಪಿನಿಂ ಮನಮುಳುಗುತೇಳುತಲೆನಿಂದುತಾ ಬಿಸುಸುಯ್ಯಲು
[ ||೬೩||

ಆಧಾರ ಚಕ್ರಚೌದಳ ಪದ್ಮಗಳನುಳಿದು
ಸ್ವಾದಿಷ್ಠಾನದ ಷಡುದಳಂಗಳಂ ಮಿಗೆ ಕಳೆದು
ಭೇದಿಸುತ ಮಣಿಪೂರಕಂ ದಶದಳಂಗಳನು ನಾದಚಕ್ರಗಳ ಮೀರಿ |
ಆದಿ ಅನಾಹತ ಚಕ್ರದ್ವಾದಶದಳಂಗಳನು
ಬೋಧಿಸಿ ವಿಶುದ್ಧಿ ಷೋಡಶಪದ್ಮದಳಗಳೊಳು
ನಾದಭ್ರೂಮಧ್ಯಾಜ್ಞ ಚಕ್ರದ್ವಯದಳಗಳೊಳುವೇದಿಸುತಲುಲ್ಲಾಸದಿ||೬೪||

ಮೇಲೆಸೆವ ಸಹಸ್ರದಳಪದ್ಮದೊಳು ನಿಂದಾಗ
ಸಾಲುಪಶ್ಚಿಮದ್ವಾರ ಗ್ರಂಥಿಗಳನುಚ್ಚಳಿಸಿ
ಕಾಲಹರ ಬಾಲಲೀಲೆಯನಟಿಸುತಂ ನಲಿದು ಬಾಲೆಗೆ ಪ್ರಸನ್ನನಾಗಿ |
ಮೂಲೋಕಧರ ಬಾಲವಿಗ್ರಹದಲುದಿಸಿದನು
ಲೀಲೆ ಕೀರ್ತಿಯ ವಾರ್ತೆ ಪಸರಿಸಲು ದನುಜ ಹೃ
ಚ್ಛೂಲ ಕೊಂಡಂತೆ ಹವ್ವನೆ ಹಾರಿ ಬಿದ್ದರೆಲೆ ಕಾಳರಕ್ಕಸರ್ಪಡೆಯೊ ||೬೫||

ಅಪ್ರಮೇಯನಪ್ರಸೂನಂ ಮನಕೊಸೆಯೊಳುದಿಸೆ
ಸುಪ್ರಭಾದೇವಿ ತರಳನನು ಬೀಳ್ಕೊಳುತಾಗ
ತತ್ಪ್ರಭೆಯ ಬೆಳಗಿನಿಂ ಬೆಳಗುವ ಕುಮಾರನಂ ಸತ್ಪಥದೊಳಿರಿಸುತಾಗ |
ಸುಪ್ರಸನ್ನತೆಯಾಗಿ ಶಾಪಮಂ ಕಳೆದು ನೆರೆ
ಯಾ ಪ್ರಭಾಕರೆ ಶಿಲಾದನ ಹೊರಗೆಯ್ದು ತಿರೆ
ಸುಪ್ರಭಾಮೌಳಿ ಕರುಣವು ನಿನಗೆ ಆಯ್ತೆಂದು ಬಾಷ್ಪವಂತೊಡೆದಾಗಳುಂ
[ ||೬೬||

ಸುರನರೋರಗಗರಸುರ ವಿದ್ಯಾಧರಾಳಿಯುಂ
ಗರುಡ ಗಂಧರ್ವ ಯಕ್ಷರು ಪಿಶಾಚರು ಚರರು
ಹರಿಯಜರು ಸುರಪಮನುಮುನಿಗಳುಂ ತಾವಿನ್ನು ಚರಣತಳದಡಿಗಾಣದ |
ಪುರಹರನ ಚರಣಮಂ ನೀಕಂಡೆಯೆನುತಾಗ
ತರುಣಿಯುಂ ಸಂತೈಸಿ ಮುನ್ನಿನಾವಾಸದೊಳ
ಗಿರಿಸಿಯೆ ಶಿಲಾದಮುನಿವರತಪದೊಳಿರುತಿದ್ದರ್ಗಿರಿಶಿಖರದಗ್ರಮೊಳಗೆ||೬೭||

ಕೃಷ್ಣನ ಕಳೋಧರ ನಿಜೋಷ್ಣೋನ್ನತ ವಿಭೂಷ
ಕೃಷ್ಣ ಪೂಜಿತ ಚರಣ ಜಿಷ್ಣು ವಿಗಗೋಚರನೆ
ಕೃಷ್ಣಗಳ ಜಿಷ್ಣು ಸ್ವರದಿಂದೆಸೆವ ಕೃದ್ಧರನೆ ಜಿಷ್ಣು ಮನ್ಮಥ ಮದಹರ |
ಕೃಷ್ಣ ಘನನೇತ್ರ ತಜ್ಜಿಷ್ಣು ಮದಹರದಜಿನ
ಕೃಷ್ಣಾದಿ ಋಷಿನಮಿತ ಜಿಷ್ಣು ವಿಗೆ ಸಾಯಕವ
ಕೃಷ್ಣಕರ ಕೃಷ್ಣಶಿರ ಸಂತುಷ್ಟಿಯಿಂವೆಸೆವ ಅಷ್ಟತನುಮೂರ್ತಿಸಲಹು
[ ||೬೮||

# ಮೂರನೆಯ ಸಂಧಿ

---

ಬಾಲಾರ್ಕತೇಜಧರ
ಭಾಳಾಂಬಕಗಂಬಿಕೆಯೊಳು ವಿವಾದಂ ಜನಿಯಿಸೆ
ಲೀಲೆಮಿಗೆ ಬಾಲಕೇಳಿಗೆ
ಕಾಲಾಂತಕ ಬಂದ ನಮ್ಮ ಗುರು ಸಿದ್ಧೇಶ ||

ಏನೆಂಬೆಗಿರಿಜಾ ವಿವಾದದುದಯ ಸಂದೋಹದಿಂದಾಗಲಾ
ಭಾನುತೇಜಹರಂ ಮರಳ್ಮನಿಸಿನಿಂ ಕಿನಿಸಿನಿಂ ಸಂತಾಪದಿಂ
ಮಾನಿಸಿಪುದಂ ಮರುಳ್ನಟನೆಯಿಂದಂ ಬೇಗ ಪರಿಹರಿಸುತಂ
ತಾನೊಪ್ಪಿರ್ದನು ಬಾಲಲೀಲೆ ನಟನದಿಂ ಮರುಳ್ಗುರುಸಿದ್ಧನು ||

ದಕ್ಷಮುಖಹರಂ ಋಕ್ಷಪತಿಧರಂ ಅಕ್ಷಮಾಲಾಧರಂ
ಬಿಕ್ಷುಕವೇಷಸಾಕ್ಷಾನ್ಮಹೇಶ ತಕ್ಷಕಭೂಷ ನಕ್ಷಮಣಿಭೂಷ
ಉಜ್ಜಿನಿಪುರಾಧೀಶ ಮರುಳಸಿದ್ಧೇಶ ಬಾಲಕೇಳಿಗೆ ಬಂದನಕ್ಕಿಯಿಂ ||

ಲೀಲೆಮಿಗೆ ಬಾಲೆಗೆ ಪ್ರಸನ್ನವಾದನುಪಮನು
ಬಾಲಲೀಲೆಯ ಘನವನರುಹಿ ಶರಣರಿಗಾಗ
ಸಾಲುಶಾಸನಲಿಂಗ ನಟನಾಟಕವನಾಡಿ
ಬಾಲಶಶಿಧರ ಮೆರೆದನು ||

ಕಾಲಹರ ಕಮಸಹರ ದುರಿತಹರ ಭವನಾಶ
ಶೂಲಧರ ಸೂಕ್ಷ್ಮಧರ ಅಣುವಿಗಣುವಿಂತಾನೆ
ಜ್ವಾಲರವಿ ಶಶಿನೇತ್ರ ಜಲಕನ್ನೆ ಶಿರವೆತ್ತ ಸಾಲುಮುಖದನ ಪೆತ್ತನೆ |
ಪಾಲಿಸುವಭಕ್ತವತ್ಸಲ ಕೃಪಾಕರ ರುಂಡ
ಮಾಲಾಧರಂ ಮನಸಿಜಾಂತಕನೆ ಮಲಹರನೆ
ಘೂಳಿಕೊಳಾಧರಂ ಸಲಹು ಸಲಹೆಲೆದೇವ ಲಾಲಿಸೈ ಕರುಣದಿಂದ ||೧||

ಶಶಿವದನೆ ಪೋಗಲತ್ತಂ ಯಿತ್ತಲಭವಂ
ಶಿಶುಸಮರ್ಥಂ ಶೈಶವದೊಳಿರಲು ಬಳಿಸಂದು
ವಸುಫಣೀಂದ್ರಂ ಫಣಾಮಣಿ ಚ್ಛತ್ರವೆತ್ತಿರಲು ವಿಷರುಹಾದಳಾಗಳೊ
ಅಸಮನೇತ್ರಂ ಮೃದು ತಳ್ಪವಾಸುಗಳಾಗೆ [ ಲಿದು |
ಎಸೆವ ತರುಲತೆ ತಂಬೆಲರ ಸೂಸುತಿರೆ ಮೇಲೆ
ಮಸುಳಿದಕಾಂತಿಮ್ಯೆಯೊಳ್ನಿಂದು ಕಳೆಯಾರೆಶಿಶುಗೆ ತನುತಂಪುಬೀರೆ||೨||

ತರಣಗಂ ಧರಣಿತಳಮೊಲಿದು ತೊಟ್ಟಿಲು ವಾಗ
ಲ್ತರಣಿಕಿರಣಂ ಬೀಗಿದ ಸೇಣು ಮಾರುತನಲಗು
ಇರಲಗ್ನಿಶಿಖೆಯು ತುಂತುರುಸಾರ ತೂರ್ವನಿಯ ಮರುತಪಥಳಾಪದ |
ವರಸುಧೆಯು ಸೋನೆಯುಂ ಶಶಿಯು ಮೃತಕರಸೂಸ
ಲ್ಬೆರಲಷ್ಟತನುವೆ ತನ್ಮಯವೆತ್ತ ಕಳೆಯಾಗೆ
ಮರುಳುಪಕ್ಕಣದ ಜೋಗುಳಚಪ್ಪಳಿಕ್ಕುತಿರೆ ಮರುಳನಂನಲಿದಾಡುತ||೩||

ಇರುತಿರಲದಾಗಸದ ಕೊಟ್ಟಿಗೆಯ ಕುಟ್ಟಿಮದೊ
ಳಿರುತಿರಲು ಸುರಧೇನು ಪಾಲ್ಗೊಟ್ಟು ಪೋಗುತಿರೆ
ಕರುವಟ್ಟಿಯೇ ನಿರಾಕಾರ ಸೂಸ್ಥಲ ತನಗೆ ಮರುಳ್ಗಳೊಡನಾಡುತಿರ್ಪ್ಪ |
ಮರುಳಗಿಪ್ಪತ್ತೊಂದು ದಿವಸವಾಗಲು ತನ್ನ
ಶರೀರಕಳೆ ಶುಭ್ರಕಾಂತಿಯುನ್ನೈದುತಿರೆ ಮೇಲೆ
ಸುರಧೇನುವಿನ ಪಥಂ ವಿಡಿದಾಗ ಬಾಂದೊರೆಯ ಪರಮಸುಕೃತ ಕಂಡನು
[ ||೪||

ಇನಿತಾಹ ತರುಣನುಂ ಕಂಡು ಆಶ್ಚರಿಬಿಡುತೆ
ತನುಕರಗದುಂ ಬಡವನಾಗದುಂ ಮೆನುತಾಗ
ಮನೆಗೆ ಕೊಂಡೊಯ್ದು ಬಾಚಣ್ಣ ಸಾ ತರುಣರತ್ನವ ವನಿತೆಗೀಯಲಾಗ |
ವನಿತೆ ಮಲ್ಲಮ್ಮ ಮನಮೊಲಿದು ಹರುಷದೊಳಾಗ
ತನುಜನೆಸ್ಲಿಹನೆಂದು ಘನಶಂಕೆವಿಡಿದಾಗ
ಮನೆಯ ಮುಂದಿಹ ಭವನದೊಳಗಿರಿಸಿಯೆನೆ ಕೇಳಿ ಅನುಪಮನ
[ ಇರಿಸುತಾಗ ||೫||

ಇರಿಸಿ ಮೃದುತೂಲತಳ್ಪದೊಳು ಮನಸಂದಾಗ
ತರುಣನೆಲ್ಲಿಯದು ಭೂತ ಪ್ರೇತದಧಿಪತಿಯೊ
ಮರುಳುಮಸಣಗಳ ಮಾನವ ವಂಶದೊಳಗೊಗೆದ ತರುವಲಿಯೊ ಪೇಳೆ
ಕುರುಳು ಬೋನದೊಳಿರಿಸಿ ಪೋಗಲಂತನಿತಕ್ಕೆ [ ನುತಲಿ |
ತರಣಿ ಸರಿಯಲು ರಾತ್ರಿಯಾಗಲಂತನಿತಕ್ಕೆ
ಮರುಳನೋಲಗಕೆ ಬಂದರು ತುಂಬುರರು ಸಹಿತ ಸುರರು ಕಿನ್ನರರಾಗಲು
[ ||೬||

ಹರಿಯಜರು ಸುರರು ವಿದ್ಯಾಧರಾಳಿಯುಂ
ಗರುಡ ಗಂಧರ್ವ ಯಕ್ಷರು ಪಿಶಾಚರು ಆಗ
ನೆರದೋಲಗಂಗೊಟ್ಟು ಭರದಿ ತನ್ಮಯವಾಗಲಿರುಳದದ್ಭುತವಾಗಲು |
ಮೊರೆವ ವಾದ್ಯಧ್ವನಿಯಕೇಳಿ ಬೆಚ್ಚುತೆ ಗೌಡ
ನಿರುತಿರಲು ತರಣಿಯುದಯಿಸೆ ಬಂದು ನೋಡಲಾಸಮಯದೊಳು
ತರುಣ ತಾಯೆಂಬ ದಾಯೆಂಬ ಮೃದುವಿರುತಿರಲು ಹರುಷ ಮಿಗಿಲು||೭||

ಏನಾದಡಂಬರಲಿ ಬಂಧ ಹರಿಯಿತೆನಗೆ
ಭೂನಾಥಮುನಿಯೆ ಘನಶಂಕೆಗಳನುಳಿದಾಗ
ಮಾನಿನಿ ಮಹಾಹರುಷ ಗೌಡ ಸಂತಸವಾಂತು ತಾನೊಯ್ದನಾನಂದದಿಂ|
ಏನೆಂಬೆನಾತರುಣನಂ ಸತ್ಕರಿಸುತಾಗ
ಮಾನನಿಧಿಗಳು ಮಹಾಹರುಷ ಸಂತಸದಿಂದ
ಲಾನಂದವಡೆದು ಸುಖಶರಧಿಯೊಳಗೋಲಾಡಲೇನೆಂಬೆನವರರತಿಯ
[ ||೮||

ಮೃದುವಾಸುತಳ್ಪದೊಳು ಪುದಿದು ಸನ್ಮುದವಡಗಿ
ಸುದತಿ ತೂಪಿರಿದುಪ್ಪುಬೇವಿಕ್ಕಿ ಪೋಗಲಾ
ಮದನಹರಮೂರ್ತಿಯುಂ ಮರುಳ್ಗಳೈತಂದಾಗ ಕರ್ದುಕಿ ಕಿಕ್ಕಿರಿದಾ
ಹೃದಯದುಲ್ಲಾಸದಿಂ ಕುಣಿದು ನೆಗೆದಾಡುತ್ತೆ [ ಡುತ |
ಸದುಹೃದಯನನ್ನಿರೀಕ್ಷೆಯ ಮಾಡಿ ನೋಡುತ್ತ
ಮುದವುಣ್ಮುತಂ ಮರುಳುತಂಡಗಳ್ನಲಿನಲಿದು ನಗಿಸುತಾಡುತಿರ್ದವು
[ ||೯||

ಸುಮ್ಮನಿರಿಸುತ್ತ ಸೋಗಿಲೊಳಿಡುತ ಸಂತೈಸಿ
ಸನ್ಮತದಿ ತರುಣಿ ತೂಪಿರಿದು ಮಲಗಿಸಿ ಪೋಗ
ಲುಂ ಮಾಯೆಬಂದು ನಿದ್ರಾಂಗನೆಯ ಕಳೆಗಳೊಳಗಂ ಮುಸುಕುತಿರಲಾ
ನಿರ್ಮಯನು ನಿತ್ಯಮಾಯಾಕೋಳಾಹಳ ಮರುಳ [ ಗಳು |
ಗಮ್ಮನೆಚ್ಚೆತ್ತು ತೊಟ್ಟಿಲಸೊದೆವ ರಹಸ್ಯದೊಳು
ಹಮ್ಮು ಮುರಿವೊಲು ಕಾಲಿಲೊದೆದು ಚೀರಿಡುತಿರಲು ಮಲ್ಲಮ್ಮನಾಕ್ಷಣ
[ ದೊಳು ||೧೦||

ಮರುಳನಂ ಪಿಡಿದಪ್ಪಿ ತೂಪಿರಿದು ಸಲಹುತ್ತ
ಲಿರಲಾರು ತಿಂಗಳೊಳು ನಡೆದು ದಟ್ಟಡಿಯಿಡುತ
ಕುರುಳು ಪಿಡಿದೊಡನೆಕ್ಕಸರವನೊಲವುತಲಾಗ ತೊರೆದ ಮೊಲೆಗಳನುಣು
ನಿರಿವಿಡಿದು ನಿಲುತಲಮ್ಮಮ್ಮ ಗಾಗೂಯೆಂಬ [ ತಿರೆ |
ತರಳನಂ ತಾಯೆಂಬ ದಾಯೆಂಬ ಪರಿವಿಡಿದು
ಕರುಣವಂತೋರಿ ಸಲಹಿದರಿಗಾನಂದವನಂಕುರಿಸುವೊಲು ಮರುಳನೆಸೆದ
[ ||೧೧||

ಏಳುತಿಂಗಳೊಳೇಳುತಂ ಬೀಳುತಂತೊಡನೆ
ಮಾಳಿಗೆಯ ಭಿತ್ತಿಯಂ ಪಿಡಿದು ದಟ್ಟಡಿಯಿಡುತ
ತೋಳನಾಡೆಂದವರ ತೋಳನಾಡುವ ಸರಸಕೇಳಿ ಬಾಲ್ನುಡಿಗಳಿಂದಂ |
ಏಳುತಡಿದೇವಿಯನು ನುಗ್ಗೊತ್ತಿ ಕೆಡವುವೊಲು
ಮೇಲೆ ತುಳಿದಟ್ಟಹಾಸದಿ ನಗುವ ಮುಗುಳ್ನಗೆಯ
ತೋಳನಾಡುವೊಲು ತೋಳಿಂದ ನಾಸಿಕವರಿವ ಬಾಲನೆಸೆದಾಡುತಿರಲು
[ ||೧೨||

ಬರಲೆಂಟು ನವದಶಂ ಮಾಸ ತರುಣನಿಗಾಗೆ
ನೆರೆಪೊರೆಯ ಮಕ್ಕಳೊಳು ಮರುಳಾಟವಾಡುವಾ
ತರುಣನಂ ಪರಿತಂದು ಮಲ್ಲಮ್ಮಕೊಂಡೊಯ್ದು ಯಿರದಪ್ಪಿ ಮುದ್ದು
ಪರಸಿ ತೂಪಿರಿದುಗ್ಗುವಡಿದರೆ ತೂಯೆಂಬ [ ಗೆಯ್ದು |
ತರುಣನಂ ಸತ್ಕರಿಸಿ ಸಲಹುತಿರಲಾಮೇಲೆ
ವರುಷತುಂಬಲು ಅನ್ನಪ್ರಾಶನವಾಗುತಿರೆ ಹರುಷವುಂ ತಾಳಿ ಬಳಿಕ
[ ||೧೩||

ಮದನಹರನಮೂರ್ತಿಯಂ ನವನೂಡುವಾಕ್ಷಣಕೆ
ಪದಿನೆಂಟುಧಾನ್ಯವೆಲ್ಲವು ಪೂರ್ಣಬೆಳಸೊಗೆಯೆ
ಪದಪಿನಿಂ ಬಾಚಿಗೌಡನು ಹರುಷಮಂತಾಳಿ ಸುದತಿ ಮಲ್ಲಮ್ಮಸುತನ|
ಮುದವೆತ್ತು ಸತ್ಕರಿಸಿ ಸಂತಸದೊಳಿರೆ ತರಳ
ನುಣಕಲಿತ ಫಲದಿ ನವಧಾನ್ಯ ವೃದ್ಧಿಗಳಾಗೆ
ಸುಧೆಯ ಸೋನೆಯ ನಾಕಳಂ ತೊರೆದು ಪಾಲ್ಗೊಡಲು ವದವಿ ಕರುಗಳ್ಗೊ
[ ಳಿವುತ ||೧೪||

ನೆಲದೊಳೊಂದೊಂದು ಹೋಟಿಯೊಳೊಂದು ಬೆಳೆಯುತಿರೆ
ಫಲಪದಂ ಬಂದು ಸಿದ್ಧಿಸುತಿರಲು
ಬಲವಂತನೆಂದು ತರುಣನ ಸಾಕುತಾಮೇಲೆ ಪಲವುದಿವಸವಕಳೆಯುತ|
ತುಲಸಮುದ್ರ ಕಗ್ಗಲ ಬಾಚಿಗೌಡನು ತನ್ನ
ಲಲನೆ ಮುದವೆತ್ತು ಸಾಕುತ ಸತ್ಕರಿಸುತಿರಲು
ಗೆಲವಾಯ್ತು ತರುಣಬಂದಾಮುಹೂರ್ತವೇಳೆಯೊಳು ನೆಲವೆಣ್ಣು ನೆಲಸಿ
[ ರ್ಪಳು ||೧೫||

ಅಂದು ಸಂತಸದೊಳಾನಂದರಸವೊಸರೆ ಮಿಗೆ
ಬಂಧು ಬಳಗಂಗಳೆಲ್ಲವು ಹರಸಿಕೊಂಡಾಡ
ಲಂದು ತರುಣನು ವೃಷಭರಾಜಂಗೆ ಬೆಸಸೆ ಗೋವೃಂದಮಂ ಪೆಚ್ಚಿಸೆನುತ|
ಎಂದವೂತಿಗೆ ವೃಷಭ ವೃದ್ಧಿಗೈಯುತ್ತಿರಲು
ಅಂದಿಗಂ ವರುಷನಾಲ್ಕು ತುಂಬಿ ನಡೆಯಲ್ಕೈದು
ಮುಂದಾರವೇಳುವರುಷಂಗಳಾಗಲು ಕರುವತಂದನೀನಾಡಿಸೆನುತ ||೧೬||

ಕರುವ ಕಾಯೆಂಬುದನು ತರುಣನಾಲಿಸಿಕೇಳಿ
ಕರಿಯಕಂಬಳಿ ಕಲ್ಲಿ ಬುತ್ತಿ ಕೋಲ್ವಿಡಿದಾಗ
ಹೊರಗೆಬಂದಾ ಬಾಚಿಗೌಡನೊಳು ನುಡಿದನು ಕರುಗಳಂಕೂಡಿಸೆನುತ|
ತುರುಮಂದೆಯೊಳಗಿರ್ದ್ದ ಕರುವ ಕೂಡಿಸಿ ಗೌಡ
ನಿರದೆ ಸಂತವಿಸಿ ಕಳುಹಲು ಮುಂದೆ ಮರುಳನುಂ
ಕರುಗಾಯ್ವನೆಂಬ ಪೆಸರಂ ಸೂಚಿಸುತ ತಾನು ನೆರದ ಬಾಲರೊಳಾಡಲು
[ ||೧೭||

ಬಾಯೆನುತ ಶಬ್ದಗೈಯುತಲಿ ಪರಿದೊಡಗೂಡಿ
ಹಾಯೆನುತ ಹರುಷದಿಂ ಹಾಯಲಡಗಟ್ಟುತಂ
ತಾಯಿಗರಚುವ ಕರುಗಳಂ ಸೆಳೆಯಲಂದಿಡುತ ನೋಯಲದು ಕರುಣ
ಪಾಯದಿಂ ಮರುಳ ಮಕ್ಕಳೊಳು ಚಂಡಾಟಮಿಗೆ [ ವಿಡುತು |
ದಾಯ ಹೊಣೆ ಗೋಲು ಗಜ್ಜುಗದಾಟ ಚಿಣಿಕೋಲು
ಹಾಯ್ದಿಡುವ ಹರಿಗೋಲು ಕೊಳಲು ತುಮ್ಮಟಿಗೆಸಹ ಕಾಯ್ವ ಮಕ್ಕ
[ ಳೊಳಾಡುತ ||೧೮||

ಅರಿಕೆಮಾಡುವೆನೆಂದು ಕರುಸಮೂಹಗಳ ತಂ
ದರೆಯುವಳೆ ಯಾಕರದೊಳುಂ ನಿಲಿಸುತಂತಾಗ
ಲಿರುಬಿನ ಸಮೂಹದೊಳು ಬಲಿದು ನೂಕಲು ಕಾಲುಮುರಿದು ಮುಖ
ಕುರುಗಳುಂ ಸತ್ತಂತೆ ಮೂರ್ಛೆವಡದಿರಲಾಗ [ ವೊಡೆದಾಗಳು |
ಕುರುಗಾಹಿಗಳು ಮರವಟ್ಟು ತಮತಮಗಾಗ
ಮರುಳಾಟದೊಳು ಮರುಳ ಕುಣಿಕುಣಿದು ಕುಣಿದಾಡಿ ಪರವಶಂಗೈಯು
[ ಲೊಡನೆ ||೧೯||

ಪಕ್ಷಿವಾಹನಪ್ರಿಯ ಪಕ್ಷಿವಾಹನಪಿತನು
ಪಕ್ಷಿವಾಹನ ಸುರಾಕರನಸುರಕೋಳಾಹಳ
ನಿಕ್ಷುಕೋದಂಡ ಶಿಕ್ಷಕಮಾಯಾಮದಹರನು ಅಕ್ಷಶಿರಮಾಲೆಗೊರಳ|
ದಕ್ಷಮುಖಶಿಕ್ಷ ಪುರತ್ರಯವಕ್ಷಿಯಿಂದುರುಪಿ
ರಕ್ಷಿಸಿದೊಲುಂ ಪಕ್ಷಿಮೃಗಕುಲವ ಸಾಯುಬಡಿ
ದಕ್ಷರಾತ್ಮಕ ಮಾಯಾಮಹೇಂದ್ರಜಾಲದೊಳಿರಲು ಚಕ್ಷುವಡದೊಲು ತರ
[ ಳರು ||೨೦||

ವ್ಯಾಜದಿಂ ಮಿಗೆ ಮಾಯೆ ನಾಸಿಕವನರಿವಂತೆ
ತೇಜವಂ ಬಯಸಿ ಮಾಯಾತಮಂಧವನುಳಿದು
ರಾಜಿಸುತ ಘನಮಹಿಮ ನರಲೋಕವೇದಿಯೆನಲಾಜಂಗಮಾಕೃತಿಯೊಳು|
ಮೂಜಗಂ ಅರಿಯೆ ಮುನಿಪತಿಯು ಸತಿಗುದಿಸಿದೊಲು
ಬಹುಜನದೊಳಂ ತೊಳಗಿ ಮರುಳಾಟದೋಳ್ ಬೆರದು
ಗಾಜಿನೋಳ್ ಬೆಳಗು ಪಸರಿಸುವಂತೆ ಚಿನ್ಮಯನು ಮಾಜಿಕರುಗಾಯ್ದು
[ ತಿರಲು ||೨೧||

ನಿರುಪಮಂ ನಿತ್ಯ ಮಾಯಾಕೋಳಾಹಳ ಮರುಳ
ಕರುಗಾಯ್ವನೆವದಿ ಮಾಯಾದುರ್ಮತವ ನುವ
ಕ್ಕರುಮಾಡಿ ಚಾಯೆನುತ ಚೂಯೆನುತ ಸೆಳೆಯಿಂದ ಬರಸೆಳೆದು ಸೇದ್ಬೊ
ಕರುಗಳಂ ತೃಣಜಲಕ್ಕೊಯ್ದೊಡನೆಯಾ ಬಂದ [ಡೆಯಲು |
ತರಳರಂ ನೀರೊಳಂ ನೂಂಕಿ ಕೆಸರೊಳಗದ್ದಿ
ಯುರಗನಂ ಕೊರಳೊಳಂ ಸುತ್ತಿ ಕಂಗಳಕಟ್ಟಿ ಜರಿಯೊಳುಂ ನೂಕು|
[ ತೊಡನೆ ||೨೨||

ಕರುವಕೊಂಡೊಯ್ದು ಬೆಳೆಯನು ತಿನಿಸುತಲಾಗ
ತುರುಗಾಹಿಗಳ ಕಾಲಕಟ್ಟಿ ಗುದಿಗೋಲಲಾ
ಚರಿಸಿ ಬಾಯೊಳು ಧೂಳಹೊಯ್ದು ಪರಿಭವಿಸುತಂ ಧರೆಯಮೇಲುಂ
ಮರುಳಮಾಡುವ ಧೂರ್ತತನಕಂಜಿ ತರಳರುಂ [ ನೂಕುತ |
ಪರಿದು ಪುರಕಂ ಪೋಗಿ ದೂರುತಲಿ ತಮತಮ್ಮ
ವರಿಗೆ ಪೇಳಲು ಮರುಳಮಾಡಿದ ದುರುಕ್ತಿಯಂ ಪೊರೆಯೆ ಬಾಚಣಗೌಡಗೆ
[ ||೨೩||

ಎಲೆಗೌಡ ನಿಮ್ಮ ಕರುಗಾವ ಧೂರ್ತಕನವನು
ಬಲುಸಮರ್ಥಂ ನಮ್ಮ ತರಳರನು ಕರುಗಾಯ
ನಿಲಲೀಸನೀಪರಿಯ ಪರಿಭವಂಗಳಮಾಡಿ ಕಲ್ಲುಮುಳ್ಳುಗಳೊಳು
ಮೊಳಕಾಲು ಮುರಿದು ಪಣೆಯೊಡೆದು ಚೀರಿಡಲಾಗ [ ನೂಂಕುವ |
ಬೆಳೆಗಳಂ ತಿನಿಸಿ ಪಾಳ್ಮಾಡಿ ಪೊಲಸೆಲ್ಲವನು
ಕೊಲೆಗಾರನೆಂದವರು ದೂರುತಿರೆ ಬಂದಾಗ ಬಳಲಿ ಬಾಯಾರಿ ಬಳಿಕಾ
[ ||೨೪||

ಎಂದಮಾತನು ಕೇಳಿ ಗೌಡ ಬೆದರುತ ನಡದು
ಬಂದೊಡನೆಯುವರ್ಕೂಡಿ ನೋಡೆ ಫಲ ಕರು ತರಳ
ರೆಂದಿನಂತಾಕಗ್ಗಮಯ ವೆರದು ಸುಖದೊಳಿರೆ ಬಂದವರು ಬೆರಗಾಗುತ |
ಕುಂದನಾಡುವರ ಬಾಯೋಳ್ ಪುಳವು ಬೀಳಲಿ
ನಿಂದ್ಯವುಂ ತಮಗಾಯಿತೆನುತ ಪುರಕಂಪೋಗ
ಲಂದು ತುರು ತರಳರಾನಂದಮಯ ಸುಖವಿರಲು ಕಂದುಗಳನೆನೆದನಂದು
[ ||೨೫||

ಕರ್ತೃ ನೆನೆದಂ ಮಂತ್ರಮಯ ದೋಷರಹಿತಮೃಡ
ಮೂರ್ತಿನೆನೆದಂ ಮೂರುವಾಸಕಧಿಪತಿಯೆನಿಸಿ
ಮರ್ತ್ಯಲೋಕದ ಘನವನುಂ ಮರುಳ್ಗೊಡನಾಡುವರ್ತಿಯು ತನಗ
ಮರ್ತ್ಯದೊಳು ಕರುಗಾಯ್ವ ಮಹಿಮೆ ತರಳರೊಳಾಡ್ವ [ದೆಂದು |
ಕೀರ್ತಿ ಮೂಲೋಕದೊಳು ಪಸರಿಸುಗೆಮೆನೆ ತಾನು
ಧೂರ್ತತನದಪರಿಮಿತ ಮಾಯಾವಿಲಾಸದ ಸಮರ್ಥನೆಸೆದಂ ಧರೆಯೊಳು
[ ||೨೬||

ಬಂದವರು ಪೋಗುತಿರಲೊಂದುಪಾಯವ ನೆನದ
ನಿಂದುಮೊದಲಾಗಿ ಕೂಡುವ ಸಕಲ ಕರುಗಾವ
ನೆಂದು ಭಾಷೆಯುಮಾಡಿ ತರಳರೊಳು ಕೂಡಿ ಮುದದಿಂದಾಡುತನುಭವ
ತಂದು ಕಾನನಮಧ್ಯದೊಳು ನಿಲಿಸಿ ಕರುಗಾವ [ದೊಳು |
ಮಂದಿಯನು ಬೇಂಟೆಯಾಡುವನೆಂದು ಖಗಮೃಗವ
ಕೊಂದು ತಪ್ಪಲ್ಗುದಿಯ ಕಟ್ಟಿ ಹೊರಿಸಿಯೆ ಅವರ ಹೊಂದತಾಕೊಲ್ಲ
[ ಲೊಡನೆ ||೨೭||

ಇತ್ತಬೆಳೆಯಂ ಕರುವಿನ್ಹಿಂಡು ಪಾಳ್ಮಾಡುತಿರೆ
ವತ್ತಿಲಿಹ ತರಳರಂ ಕೊಂಡು ಕಾಲ್ವಿಡಿದು ತಾ
ಮತ್ತೊಬ್ಬನನು ದೂರ ಪೇಳುವರೆ ಬಿಡುತಾಗ ಚಿತ್ತದೊಳು ನೋಯು
ಉತ್ತರೋತ್ತರವ ನೆನದುಂ ಮರುಳ ನಿಂತಿರಲು [ ದಿರುತ |
ಅತ್ತ ಪುರಕಂ ಪೋಗಿ ತರಳನವರವರಿಗಂ
ವೃತ್ತಾಂತಮಂ ಪೇಳೆ ಕೇಳಿದವರಾಕ್ಷಣದಿ ಮೃತ್ಯುಹರನಂ ನೆನೆವುತ ||೨೮||

ಆನುಡಿಯುಕೇಳುತವರಾಕ್ಷಣದಿ ಶಿವಯೆನುತ
ಹೀನತೆಯ ದುಃಖವನು ಕಳೆದು ತಕ್ಷಣದೊಳುಂ
ಭಾನುತೇಜಸಬಲ್ಲ ನಿದರಭಿಪ್ರಾಯವನು ಮಾನವರಿಗಳವೆಯೆನುತ |
ಜ್ಞಾನವಜ್ಞಾನಭಯವುಳಿದೊಂದುಗೂಡುತಲಿ
ಕಾನನದ ಮಧ್ಯಕವರೆಯ್ತಂದು ನೋಡುತಿರೆ
ಭಾನುತೊಲಗಿದ ದಿವವು ಜೀವತೊಲಗಿದ ಕಾಯ ಮೌನಮುದ್ರೆ
[ ಯೊಳಿರುತಿರೆ ||೨೯||

ಪ್ರಾಣವುಳಿದಗಲ್ದ ಕಾಯವ ನೋಡಿಸ್ಥೈತಿಡುತ
ಸ್ಥಾಣುವಂ ಕಳೆದ ಶರೀರಂ ಶವವ ಕಂಡೊಡನೆ
ತ್ರಾಣಗುಂದುತ ತಮ್ಮ ತನುಜನರನು ಕಾಣುತಲಿ ಮಾಣದವರ್ರೈದಿ
ಗೋಣುಮುಖವಧರ ನಾಸಿಕನಯನ ಭ್ರೂಮಧ್ಯ [ ನೋಡಿ |
ತಾಣಕರತಳದು ಗುರುಚರಣತಳನಾಡಿಯೋ
ಳ್ಕಾಣು ದೋರದಿರೆ ನೋಡಿ ಶೋಕವಿಡಿದವರಾಗ ಕ್ಷೋಣಿಪಂಗರುಹ
[ ಲೆನುತ ||೩೦||

ಶೋಕವಹ್ನಿಯ ಜಲಧಿಯೋಳ್ಮೂಡಿ ಮುಳುಗುತವ
ರಾತುವರರಳಿದ ಘನ ತಾಪಮಿಗಿಲಾಗುತಂ
ಬೇಕುಬೇಡೆಂಬವರ ಕಾಣೆವಿದಕೆನುತಲ್ನಿರಾಕುಳವಿಕರಣರಾಗಿ |
ಮಾಕಂದದಳದೊಳನಲಂ ಸೂಸಿದಂತೆ ಘನ
ಸಾಕಾರವುಡುಗಿ ಸದುಹೃದಯ ನಿರಸವನಾಂತ
ರಾಕುಳಿತವರಾಗಿ ಮೊರೆಯಿಡೆ ನೃಪನೊಳಂ ದಾವಿವೇಕದಲಿ ಕೇಳ್ದನಂದು
[ ||೩೧||

ಕುಂಚಿಟಿಗ ರಾಮು ಕುಡಿ ವಕ್ಕಲಿಗ ಮುದ್ದಯ್ಯ
ಪಂಚಮರ ಪರಮಯ್ಯ ಪಡಿಹಾರಿ ಬಸವಣನು
ಕಂಚುಗಾರರ ಶಿವನ ಕರಿಕುಲದ ಮಹದೇವ ನಂಚಕಟ್ಟುವಶರ್ವನು |
ಪಂಚವರ್ಣವನಾಂತ ಪರಮಋಷಿಯಾನತನು
ವಂಚನೆಯ ಚೋರವಿದ್ಯದಮಲ್ಲ ಮಾದನುರೆ
ಹಂಚಮಾಡುವ ಚಕ್ರಿಕುಲಹೀನ ಚನ್ನರಿವರುಂ ಚವುಡದೂರುತಿರಲು
[ ||೩೨||

ಪೊರೆಯೆನುತ ತೃಣವೆತ್ತಿ ನುಡಿದು ಪುರಜನತಾಪ
ದೊರೆಯೊಳುಂ ಮೂಡಿಮುಳುಗುತ ನುಡಿದರರಸನೊಳು
ಮರೆಯಮಾತೆಲ್ಲವುಂ ತರವಲ್ಲ ಕೇಳ್ನಿಜವ ನೆರೆಯನೆ ಪರಿಭಾವಿಸಿ |
ಕರುಗಾಹಿ ಮಕ್ಕಳನು ತರಿತರಿದು ಬಿಸುಟನಾ
ಕರುಗಾಹಿ ಮರುಳ ಬಾಚಣಗೌಡನವರ ಸುತ
ಮರುಳನವಧೂರ್ತ ಪರಪುಟಸಾಮವೇದಿ ಘನ ಕರೆಯುಂಡ ಕಂಟಕನವ
[ ||೩೩||

ಎಲ್ಲರಾಡಿದ ಮಾತಕೇಳುತರಸನು ಕರವ
ಗಲ್ಲಕಂ ಸಾರ್ಚಿ ಬೆರಗಾಗಿ ಮೌನಂ ಬಡೆದು
ಬಿಲ್ಲರೋಳ್ನುಡಿದ ಬಾಚಣನವರ ಕರೆತಂದು ಕಲ್ಲುಗಾಣದೊಳ್ಸುತ್ತಿಸು |
ಸಲ್ಲದಿದು ಸಾಧುಗಳಿಗೆನುತರಸನಾಕ್ಷಣದೊ
ಳೆಲ್ಲಪುರಜನವೋಗಿ ನೋಡುವಂತನಿತರೊಳು
ಸಲ್ಲೀಲೆಯಿಂ ಮುರುಳ ತರಳರೊಡನಾಡುತಿರಲಲ್ಲಿ ಹರುಷವತಾಳುತ
[ ||೩೪||

ತರಳರನು ಕಂಡು ಸಂತಸವಡೆದು ತಮತಮ್ಮ
ತರಳರನು ಕೇಳೆ ಮುರುಳನ ಧೂರ್ತತನವನೀ
ತರಳರೆಲ್ಲರಕೊಂದು ಬೆಳೆದ ಫಲವಿನಿತ ಸಂಹರಿಸಿದಪನೆಂದು ಪೇಳೆ |
ಪರಿದು ಬಂದೆವು ಶೋಕಭಯತಾಪವಿಡಿದೀಗ
ನಿರುತವೊ ನೀನ್ನಿಜವ ಪೇಳೆನೆ ತರಳರಂತಾಗ
ಮುರುಳಕೊಲುವನೆ ಕಾವನೇ ಕರುವನಂತಾಗ ಪರಹರಿಪನಿಂತಕ್ಕರು ||೩೫||

ಬೆಳೆಯಲ್ಲ ತಿನಿಸಿ ಪಾಳ್ಮಾಡಿದನೆನಲ್ಕಾವು
ಬಳಿಸಂದು ಬಂದೆವೆನಲಾಫಲವ ನೀವಿನಿತು
ತಿಳಿದುನೋಡೆನುತ ತರಳರು ಪಿತರಿಗಂತಾಗ ತಿಳಿಸಿ ನೋಡುವ ಪದದೊಳು|
ನಳನಳಿಸಿ ಬೆಳೆದ ಫಲವಂ ತೋರಿ ತರಳರೀ
ಕಳಮಾತ ಪೇಳಿದವರಾರು ಮುರುಳಾದಿರೋ
ಕುಳಿಗೊಂಡರೊಕ್ಕಲಿಗರ್ಮುರುಳರೆಂಬೀಮಾತು ನೆಲೆಯಾದುದೆಂದೆನುತ
[ ||೩೬||

ಚಿತ್ತದೊಳು ಕನಲಿ ಹೇಳಿದಮಾತನಿತಕೇಳಿ
ಇತ್ತಬಂದೆವು ತವಕದಿಂದಲತಿಡಗೆಹತ್ತಿ
ಮತ್ತಧಿಕಶೋಕಜಲತಾಪದುರಿಯೊಳು ಮುಳುಗುತ್ತ ಬಂದೆವು ಕೇಳೆನೆ |
ಸತ್ತಮಾತೆಂಬುದು ಅಸತ್ಯನುಡಿಯುಹುದಹುದು
ಅತ್ಯಧಿಕರ್ಪೇಳಿಯೆನುತಾ ತರುಣರ್ತಾವ್ತಮ್ಮ
ಪೆತ್ತವರೊಳುಂ ನುಡಿಯಲ್ಮತ್ತೆ ಗೌಡರಬಾಯೊಳೆತ್ತವೋದುದು ಉತ್ತರ
[ ||೩೭||

ತರಳರಾಡಿದರೊಂದುಪರಿಯಾಯದಿರವನಾ
ಮರುಳ ಕೊಲುವನೆ ನಮ್ಮ ಪರಮಸಾದಾಖ್ಯನೆ
ನಿರವಯನೆ ನಿತ್ಯನೆ ಪಿರಿಯರೊಳು ಪಿರಿಯನೆ ವಿರಚಿಸಲು ಪರಮೇಷ್ಠಿಯೇ |
ಪರಿಹರಿಸಿ ರಕ್ಷಿಸಲು ಹರಿಯಲ್ಲ ತಾನಿವನು
ಪರವುಟಂ ಪರಿಯಾಯ ಗತಿಯೊಳುಂ ನೋಡುವರೆ
ಮರುಳಾದಿರೋ ನೀವು ಮರುಳನೊಡನಾಟದಲಿ ಮರಳಿ ಮಂದಿರಕೆಂದರು
[ ||೩೮||

ತನುಜರಾಡಿದ ಮಾತಕೇಳುತರಸನು ಸರ್ವ
ಜನಸಹಿತ ತಿರುಗಿ ಬಾಚಣಗೌಡನಂ ಕರಸಿ
ವಿನಯಪರನಾಗಿ ನುಡಿದನು ಕಳ್ಳಮಾತೆನುತಲವನ ಸಂತೈಸಿ ಬಳಿಕ |
ಅನುನಯದೊಳರಸ ಜನರಂ ಕಳುಹಿ ನಯದೊಳಾ
ತನುಜರಂ ಬೀಳ್ಕೊಡಲು ಮರುಳನೊಡನಂ ಬಂದು
ವನದೆಡೆಯ ತೃಣಜಲಂ ಪಿರಿದಾದ ಸ್ಥಲದೊಳುಂ ವಿನಯಮಿಗಿಲಿರಲಿತ್ತಲು
[ ||೩೯||

ಕಲ್ಲಮಗಳ ವಿವಾದ ಬರಲು ಸೌಮ್ಯದೊಳರಿದು
ಮಲ್ಲಿಕಾರ್ಜುನಲಿಂಗ ಮರುಳ ಸಲ್ಲೀಲೆಯಿಂ
ಮೆಲ್ಲಿದೆಯೊಳೈಕ್ಯವಡೆದಂತೆ ಬಂದೇರಿದನು ಬಳ್ಳಿಬಿಗಿವಡೆದ ಮುಳ್ಳ |
ಪಲ್ಲಕ್ಕಿಯಂತೇರಿ ತರಳರ್ಕ್ಳೆಹೊರಿಸಿಕೊಂ
ಡೆಲ್ಲ ತಾಣಂಗಳೊಳು ತಿರುಗಿ ತಳಿರ್ವನವಾಂತು
ಪಲ್ಲವಿಪ ವೃಕ್ಷಗಳ್ನೆಳಲ ತಂಪಿನೊಳಾಗಲಲ್ಲಿಳಿವುತಾಶ್ರಮದೊಳು ||೪೦||

ಎಲ್ಲ ದೇವರ ದೇವನಿಳಿದುದೇ ಕ್ಷೇತ್ರವದು
ಪಲ್ಲವದ ಕಟ್ಟೆಯೆನಲಾಪುರಂ ಮೆರದಿರಲು
ಎಲ್ಲ ತರಳರ್ಕೂಡಿ ಮುಸಕದಿಂದಾಡುತಿರಲಲ್ಲಿ ಮುಸಣಿಯ ಕಟ್ಟೆಯು |
ಸಲ್ಲಲಿತವಾದ ಪುರವೆಸವುತಿರಲುಂ ಮುಂದೆ
ಮಲ್ಲಗೌಡನು ಮರುಳಗೌಡರೆಂಬೊಕ್ಕಲಿಗ
ರೆಳ್ಳಕಾಯನು ಹರಹಿ ಹೊಡೆಯೆಳ್ಳನುದುರಿಸುತಲಲ್ಲಿರಲು ಕಂಡಾಗಲು
[ ||೪೧||

ಹೊಡೆಯೆಳ್ಳಬೇಡುತಿರಲೊಕ್ಕಲಿಗರುಂ ಚಲದಿ
ಕೊಡದಿರಲು ಮರುಳ ಸಿದ್ಧೇಶತಾಂ ಮನನೊಂದು
ಕೊಡಹಿದ ಕಡ್ಡಿಯಂ ಕೊಡಿರೆಂದು ಬೇಡಲವರ್ಕೊಟ್ಟರವಗಾಕಡ್ಡಿಯ |
ಪಿಡಿದು ತಂದೊಂದು ತಾಣದೊಳು ತಾ ಹರಹಿ ಮಾ
ರ್ತೊಡಹಲುಂ ಹೊಡೆಯೆಳ್ಳಪರಿಮಿತವಾಗಲತಿ
ಜಡಮತಿಗಳುಂ ತಿಳಿಯರಂತಾಗಿ ಮರುಳನನು ಹುಡುಗನೆಂದರಿಯರಾಗಿ
[ ||೪೨||

ಅವರೆಳ್ಳರಾಸಿಯೊಕ್ಕಿಯೆ ಕಂಡು ಕಂಡಾಗ
ಲವನೆಳ್ಳರಾಸಿಯುಂ ಕಂಡಾಗಲಪರಿಮಿತ
ವನು ತಿಳಿಯದವರ್ಮರುಳಗೊಂಡರಾ ಭವಬದ್ಧ ಕರ್ಮಿಗಳು ತಾವ್ಮನ
ಶಿವಧರ್ಮವರಿಯದಾ ಕ್ರೂರಕರ್ಮಾಧಮರು [ದೊಳು |
ಶಿವದೂಷಕರು ಭವದ ಮಾಲೆಯೋಳ್ತೊಳಲುತಂ
ಜನಿಸುವರು ಜನ್ಮಜನ್ಮಾಂತರಕೃತಪಾಪರವನಿಯೊಳು ತೊಳಲುತಿಹರು
[ ||೪೩||

ಅಂತೆಸೆವುತಿಹ ಪವಾಡವ ಗೆಲಿದು ಸಿದ್ಧೇಶ
ಪಿಂತವರು ಪೇಳ್ದ ಗೌಡನ ಋಣವನುತ್ತರಿಸಿ
ಮುಂತೆ ಬರೆ ಬರೆ ಕಂಡ ಕಾಂತಾರವೆಸೆದಿರಲನಂತ ಸೌರಭಶಾಖೆಯಾ |
ಪಙ್ಕ್ತಿವಡೆದಿರ್ದ ವನವೃಕ್ಷಗಳ ತಣ್ಣೆಳಲ
ಶಾಂತಿಯೊಳಗುಪಶಮನಗೊಂಡು ಹರುಷವತಾಳಿ
ಸಂತೋಷ ಮಿಗಿಲುಕರುಗಾಯ್ವ ತರಳರೊಳಾಡುತಿರ್ದ್ದನವನರ್ಥಿಯಿಂದ
[ ||೪೪||

ಇರಲಿತ್ತ ಮರುಳಸಿದ್ಧೇಶ್ವರನು ಪುರದತ್ತ
ಮರುಳಗೌಡನು ಮಲ್ಲಗೌಡ ಮದುವೆಯಮಾಡ
ಲೆರಡು ಬಂಡಿಯ ಹೂಡಿ ಕರಿಯೆತ್ತು ಕೋಲುಗಳ ತರಿಸಿ ಮೂಕುಗಳನೇರಿ|
ಭರದಿಂದ ಕಾನನದ ಕಾಂತಾರ ಮಧ್ಯದೊಳು
ಮರಗಳಂ ತರಿತಂದು ಹೇರಿ ಬಂಡಿಯ ಮೇಲೆ
ಇರದೊಟ್ಟಿ ಕಟ್ಟಿಬಂಧಿಸಿ ಬೇಗ ತುರುಗಾಯ್ವತರಳರಿಗೆ ಪೇಳುತಾಗ ||೪೫||

ಹಸಿವಾಯಿತೆಮಗೆ ಹಾರುಕದ ಬುತ್ತಿಯನು ಮಿಗಿ
ಲೆಸದ್ವರಿವ ಕೊಳದತೀರಕೆ ಪೋಗಿ ನಾವೀಗ
ಶಶಿಧರನ ಪೂಜೆಮಾಡಿಯೆ ಸವಿದು ಬಹೆವೆಂದು ಶಿಶುಗಳೊಳು ಪೇಳ್ದರಾಗ |
ಹಸಿವಡಗಿ ತೃಷೆಯಳಿದು ಹೊಸ ಮಾರ್ಗವಿಡಿದವರು
ಯಸೆವೆತ್ತುಬಂಡಿಯನು ಕಾಣದರಸುತಲಾಗ
ಗಸಣಿಗೊಳ್ಳುತ ಕಂಡ ಕಂಡ ದೆಸೆಯೊಳಗಾಗ ವೃಷಭಗಳ ನೋಡುತಿಹರು
[ ||೪೬||

ಹೊತ್ತು ಹೋಯಿತು ಬಂಡಿ ಸಿಕ್ಕಿದುದುವನದೊಳಗೆ
ಎತ್ತುಗಳು ತಪ್ಪಿಹೋದವು ಕಾಣದವರುಗಳು
ಮತ್ತೆ ಮರುಳನ ಕರೆದು ಯಿರಿಸಿ ಬೇಗದೊಳು ಪುರದತ್ತತಾವ್ಪೋದರಾಗ |
ಅತ್ತ ಬೆಳಗಿನೊಳಾಗ ಮರುಳಸಿದ್ಧೇಶ್ವರನು
ಯೆತ್ತು ಬಂಡಿಯನೆರಡ ಸಂಧಿಸಿ ಸಮಾತುರದಿ
ಯೆತ್ತೊಂದುಕಡೆಯ ತಾನೊಂದುಕಡೆ ಪಿಡಿದು ಪುರದೊತ್ತಿನಲಿ ತಂದು
[ ಬಿಡಲು ||೪೭||

ಬಂದ ಬಂಡಿಯ ನೋಡಿ ನಿಂದಿರ್ದ ಜನರು ಬಲು
ಚಂದವಾಯಿತು ಚೋದ್ಯವೆನುತವರು ಬೆರಗಾಗಿ
ಇಂದು ಬಂಡಿಯನೋರ್ವ ತಂದುದು ಮಹಾಘನವು ಎಂದು ಕೊಂಡಾಡು
ಚಂದ್ರಧರನೆಂದರಿಯದಾ ಕ್ರೂರ ಕರ್ಮಿಗಳು [ ತವರು |
ತಂದ ನೆತ್ತಿಯೊಳು ಯಿದುದಾವಘನವೆಂದೆನುತ
ಮಂದಮತಿಗಳು ಮರುಳಮಾಡಿದ ಪವಾಡವನು ಕುಂದುಗಾಣುವರ
[ ದಾಗಿ ||೪೮||

ನೆರೆ ಪವಾಡವ ಕಾಣಲರಿಯದಲೆ ಮಾನವರು
ಕರುಗಾಹಿಯೆಂದು ಬಗೆವುತಲಿ ಆ ಕರ್ಮಿಗಳು
ಬರಿಯಹಂಕಾರಬುದ್ಧಿಯೊಳ್ಮರುಳನರಿಯದಲೆ ಮರುಗುವರಧರ್ಮದಿಂದ|
ಆರುತರಿಯದೆಳ್ಳಿನ ಪವಾಡ ಮದುವೆಯೊಳಾದ
ನೆರೆ ಪವಾಡವ ಗೆಲಿದು ಮರುಳಸಿದ್ಧೇಶ್ವರನ
ಕುರುಹರಿಯದತಿಖಳರು ನರನೆಂದೆ ಭಾವಿಸಿಯೆ ಮರುಳಾದರತ್ತಲಿತ್ತ
[ ||೪೯||

ಚಿತ್ತದೊಳಗೆಣಿಕೆಮಾಡುತ್ತ ಪುರಜನರೆಲ್ಲ
ಬಿತ್ತುಬೆಳೆ ಫಲವೃದ್ಧಿ ಹುಲುಸಾಗಬೇಕೆಂದು
ಮತ್ತೆಲ್ಲನಿಂದು ಬಾಚಣಗೌಡರೊಳು ಪೇಳಲತ್ಯಂತ ಹರುಷದಿಂದ |
ಮೃತ್ಯುಮಾರಿಯ ಮಾಡಲ್ಜನಕೆ ಬಹುಲೇಸೆಂದು
ಮತ್ತವರ ನುಡಿಗೇಳಿ ಗೌಡ ಹರುಷವತಾಳಿ
ಕತ್ತಲ್ಹೊತ್ತಿನಲಿ ಮಾರಿಗೆ ಮಿಾಸಲನು ಕಟ್ಟಿಸತ್ಯಳೆ ಸಲಹೆನುತಲಿ ||೫೦||

ಮಾಯೆ ಹರನರ್ಧಾಂಗವನು ಕೇಣುಗೊಂಡು ನೆರೆ
ಮಾಯೆ ಹರಿವಕ್ಷವನು ಸುತ್ತಿಹಳು ಬಳಿಸಂದು
ಮಾಯೆ ಪರಮೇಷ್ಠಿಯನು ಬಾಯಕಟ್ಟಿದಳು ಘನಮಾಯೆಯನು ಮಾಡೆ
ಮಾಯೆ ಸುರಪಗೆ ಸಾವಿರಾಲಿಯನು ತೀರ್ಚಿದಳು [ ಲೇಸು |
ಮಾಯೆ ಸುರರನುಮುನಿಗಳಂ ಬಳಸಿ ಬಗ್ಗಿಸಿದ
ಳಾಯತಿಕೆ ಕರಲೇಸುಲೇಸೆನುತಲಾಗೌಡ ಮಾಯೆಬಲಗೊಂಡನಾಗ ||೫೧||

ಮಾರಿಯೆಂಬುದು ಕೇಳಿ ಮಾರಹರನಾಜ್ಞೆಯಲಿ
ಮಾರಾರಿಯರಿಯದಿಹ ಕ್ರೂರರನು ತರಿವಳೊ
ಊರಗೋಣನು ತುಂಬಿ ಕುರಿಕೋಳುಕೋಳಿಗಳ ಪೂರವಿಸಿ ವಾದ್ಯಮೊಳಗೆ |
ಮಾರುತಿಯ ಬಲಗೊಂಡು ಭಯಭಕ್ತಿಯಿಂದಮಿಗೆ
ವಾರಣದ ತೋರಣದ ಚಪ್ಪರಂಗಳ ನಿಳಯು
ಸೇರಿ ಚೌಕದ ಸಾಲು ಸುರೆಗೊಡಗಳಂ ತರಿಸಿ ನಾರಿಯರುದೊಯೆನುತಲಿ
[ ||೫೨||

ಬ್ರಾಹ್ಮಿ ಮಾಹೇಶ್ವರಿ ಸುಕೌಮಾರಿ ವೈಷ್ಣವಿಗ
ಳೂರ್ಮೆಯ ವರಾಹೀಂದ್ರವಾಣಿ ಚಾಮುಂಡಿಯರು
ಭೈರವಿಯು ದುರ್ಗಿಮಾತೃಕೆ ಮಾಸ್ಯೆಯಂಬವರು ಗಮ್ಮನೆಚ್ಚತ್ತು ಬರಲು|
ನಿರ್ಮಲತ್ವಕೆ ಭೂತವೇತಾಳ ಸಹ ನೆರದು
ಕರ್ಮಕರ್ತುಗಳೆಲ್ಲ ತೆರಳಿದೇವಿಯ ಪೊಗಳಿ
ಸುಮ್ಮಾನದಿಂ ಚೌಡಿಕೆಯ ಜೋಗಿಣಿಯರ್ಬರೆ ಮಹಂಮಾಯೆ ಬಂದ
[ ಳಾಗ ||೫೩||

ಬಂದಮಾರಿಯ ನಿದಿರುಗೊಂಡು ಪ್ರಜೆಪರಿವಾರ
ಮಂದಿರದೊಳುಂ ಮುಹೂರ್ತಗೊಳಿಸಿ ಕುರಿಕೋಣಗಳ
ತಂದುಡಾವಣಿಗಟ್ಟಿ ತರಿದು ತಲೆಕೂಳ್ಗಳನು ಮುಂದಿರಿಸಿ ಬೊಬ್ಬಿಡುತಲಿ |
ದಿಂದಿಮಿತು ದಿಮಿತೆಂದು ವಾದ್ಯ ತಪ್ಪಟೆ ಮೊಳಗ
ಲಂದು ಕುಣಿದಾಡುವಾ ಸಾದಿಗಳ ಮೇಳಮಿಗಿ
ಲೊಂದೊಂದು ಪರಿಹಾಸ್ಯ ಪಾಡ್ವರಸಮಿಗಿಲಾಗಲ್ಕಂದ ಗತಿಯಲಿ
[ಹಾಡುತ ||೫೪||

ಅಕ್ಕರಿಂ ಮಹಂ ಮಾಯೆ ನುತಷೋಡಷಶುಪಚಾರ
ಭಕ್ಷಭೋಜ್ಯಂ ಶಾಕಪಾಕ ಷಡುರಸಗಳನು
ಚೊಕ್ಕಭೊಜನದ ಪರಿಪರಿಯ ಕಜ್ಜಾಯಗಳ ವಕ್ಕಣಿಸಲಾರ್ಪರದಾರು |
ತುತ್ತುಬುತ್ತಿಯ ನೊಟ್ಟುತಲ್ಲಿ ರಂಗವಬರೆದು
ರಕ್ತಗೂಳಿನ ಮುದ್ದೆ ಬಣ್ಣದಕ್ಷತೆಗಳನು
ಇಕ್ಕಿಮೈಯಿಕ್ಕಿ ಶರಣೆನುತಾಗಲೊಡನವರು ಮುಕ್ಕಣ್ಣ ಶಕ್ತಿಗೊಲಿದು
[ ||೫೫||

ಲೇಸಾಗಬೇಕು ಗ್ರಾಮಕೆ ಶಾಂತಿಗೊಡುವುದೆಲೆ
ಭೂಸುರೋತ್ತಮ ಯೆಂದು ಜನರ್ಪರಸಿಕೊಂಡಾಡ
ಲಾಸಾದಿಬಸವ ಮಹಿಮೆಯನೊಲಿದು ನೆರೆಪಾಡೆ ಪ್ರಾಸಪಲ್ಲಟವಿಲ್ಲದೆ |
ಆ ಸಮಯದಲಿ ದಿವಾಕರನು ಬೆರಗಾಗಿ ಮಿಗೆ
ಹೇಸಿಕೆಯ ನೋಡಲಾರೆನು ಯೆಂದು ಪಶ್ಚಿಮದ
ರಾಸಿಗೈದುವ ಸಮಯ ವರ್ಣನೆಯ ವರ್ಣಿಸುವರೆ ಶೇಷನಿಂಗರಿದಾಯಿತು
[ ||೫೬||

ಮೂಡದಿಗ್ವನಿತೆ ಪಶ್ಚಿಮದ ವಧುವೀರ್ವರುಂ
ಜೋಡಿಸಿದ ಸರಣಿ ಪದ್ಧತಿ ಕರಂಗಳೊಳು ನೆರೆ
ಮೂಡಿರ್ದ ರತ್ನಕಂದುಕವ ನಿಡುತಿರಲೊದಗಿ ಜೋಡಿಸುತ ನೆಗೆನೆಗೆವುತ |
ಗಾಡಿಮಿಗೆ ತೇಜವುಡುಗಿ ಸುತಂಪಂತಳೆದು
ಮೂಡವಟ್ಟಿನ ಮೇಲೆ ಬಿದ್ದಕಂದುಕದವೊಲು
ನೋಡೆ ವರುಣನ ರತ್ನಮಕುಟವೊ ಯೆಂದೆನಿಸಿ ಪಾಡಳಿದು ರವಿಬಿಂಬವು
[ ||೫೭||

ಮತ್ತಮಾಮರುತಪಥತಳಿತುದೊ ಯೆಂದೆನಲು
ವೃತ್ತವಳಯದೊಳರುಣ ಚಂಡಾಂಶುವಶ್ವಗರು
ಸಪ್ತಾಶ್ವಪದಹತಿಗೆ ಕೆಂಧೂಳಿ ಮಸಗಿತೆನಲತ್ತಲರುಣಾಂಶು ಮಸಗೆ |
ಇತ್ತಾ ಪಿಪಾಸೆಯೊಳು ಬಾಯಾರಿತುರಗನೊರೆ
ಸುತ್ತಿ ಬೀಳಲು ತಾರೆಯೆನಲೆಸೆದುದಭ್ರದೊಳು
ಮಿತ್ರಬಳಲಿಕೆಯ ನಾರಿಪೆನೆಂದು ನಿಂದನೆಲೆ ಪಶ್ಚಿಮದ ಗಿರಿಯಲೆಸೆದು
[ ||೫೮||

ಇರಲು ಮಾರಿಯನೆತ್ತುವಾಸಮಯದೊಳು ಗಾವು
ಗುರಿಯ ಹಿಡಿದಾಚರರು ಚಾಟಿಲೊಗೆಯಲು ಮಾಯ
ಹೊರುವರಾರಿಲ್ಲದಿರಲೆಲ್ಲರುಂ ಮರುಳನಂ ಕರೆತನ್ನಿ ಹೊರಲೆಂದರು |
ಮರುಳ ಬಂದಾಮಾಯೆ ನೋಡಿ ಮುಗುಳ್ನಗೆಯಿಂದ
ಬರಹೇಳು ಪೆರ್ಮಾಯೆ ಮಾರಿಯನು ಹೊರುವುದಕೆ
ಕರೆಯಬಂದಳು ಕೊಂಡಮಾರಿ ಗದ್ಗದಿಸುತಲಿ ಮರುಳನ ಪದಕ್ಕೆರಗುತ
[ ||೫೯||

ಅಭ್ರಚ್ಛಾಯೆಯದೊಂದು ರೂಪಾಯಿತೆನಲೊಡನೆ
ಪೆರ್ಬಟ್ಟೆಗಂ ಕಾಲುಕ್ಕೆ ಶಿರಗಳೊದಗಿದೊಲು
ಕಿಬ್ಬೊಟ್ಟೆ ಪರಿಯಂತ ಜೋಲುಮೊಲೆ ಕಿವಿಮೂಗು ಪೆರ್ಬಾಯಿ ನಿಡು
ಹೆಬ್ಬೇಡಿಗಾಲು ಷೋಡಶತೋಳರಕ್ಕಸಿಯು [ಗಂಗಳು |
ಬೊಬ್ಬಿಡುತ ದೆಸೆದಿಕ್ಕನೋಡುತಾರ್ಭಟಿಸುತಲಿ
ನಿರ್ಭರದ ನಿಡುಸುಯ್ಲು ಕಿಡಿಯ ಸೂಸುತ ಬಂದಳರ್ಭಕನ ಹೊರಗೆಬೇಗ
[ ||೬೦||

ಕೊಂಡಮಾರಿಯು ನೋಡಿ ಮರುಳ ಬೀಳ್ಕೊಟ್ಟನೆಲೆ
ಚಂಡಿಯನು ಕಳುಪೆನೆ ಮಹಾಪ್ರಸಾದವೆನುತ್ತ
ದಿಂಡುಗೆಡಹುವೆ ತರಿವೆ ಕೊರೆವೆನೆಂದೆನುತ ಮಾರ್ಕೊಂಡಮಾಯಾರ್ಭಟಿ
ಮಂಡೆಯನು ಕೊರೆದು ಕರುಳುಗಿದು ಚಂಡಾಡುವೆನು [ ಯಲಿ |
ಖಂಡಪರಶುವಿನಾಣೆ ಪಲ್ಲಿತ್ತು ರಕ್ತವನು
ಖಂಡವನು ತೆಗೆದು ಭೂತಗಳಿಗಿಕ್ಕುವೆನು ಸದೆಬಡಿವೆನೀತೊಲಗೆಂದಳು
[ ||೬೧||

ನಡುನಡುಗಿ ಮಾಯೆನುಡಿದಳು ಕೊಂಡಮಾರಿಯೊಳು
ಬಿಡದವರು ಕರೆಯೆ ಬಂದೆನುಯಿನಿತನರಿಯೆನಾ
ಒಡೆಯಳೆ ರಕ್ಷಿಸೌತಾಯೆ ರಕ್ಷಿಸು ನನ್ನ ಜಡಮತಿಯ ಕಾಯ್ವುದೆನುತ |
ಒಡಲರಿಯದೆ ಬಂದೆ ಕಡಿದುಬಿಡು ಖಡ್ಗದಲಿ
ಕಡೆಯಮಾತೇಕೆ ನೀ ಕಾಯಿ ಕೊಲ್ಲೆನುತಾಗ
ಲಡಿಯೊಳುಂ ಬಿದ್ದಮಾಯೆಯನೆತ್ತಿ ಹರನೆಡೆಗೆ ನಡೆಯೆಂದು ಕರೆತಂದಳು
[ ||೬೨||

ಬಂದಮಾಯೆಯ ನೋಡಿ ಮರುಳ ಮುಗುಳ್ನಗೆಯಿಂದ
ಲಿಂದುಮೊದಲ್ನಾವಿದ್ದಠಾವಿಗಂ ಬರಬೇಡ
ವೆಂದುನೇಮವನಿತ್ತು ಆಗ ಕರುಣೋದಯದೊಳೆಂದನಾಮಾಯೆಯೊಡನೆ|
ಇಂದುಧರಭಕ್ತರಸಂಖ್ಯಾತರಡಿಗೆ
ವಂದನೆಯಮಾಡಿ ಭಯಭಕ್ತಿಯಿಂದಿರು ನೀನು
ಹಂದಿಮನುಜರಮೇಲೆ ನಿಂದ್ಯವೊಂದನೆ ಹೊರಿಸಿ ಕೊಂದುಕೂಗೆಂದನಭವ
[ ||೬೩||

ಹರನಿಂದ್ಯ ಗುರುನಿಂದ್ಯಗಳನು ಮಾಡಿದರ ಸದಾ
ಪರವಧುವಿಗಳುಪಿದರ ಪರನಿಂದ್ಯಚೋರರನು
ಪಿರಿಯರೊಳು ಹೋರುವರ ಫಲತರುವ ಕಡಿವರುಂ ಉರಿಯೊಳುಂ
ತರಳರಂ ಕೊಂದವರ ಪಶುವಧೆಯಮಾಡಿದರ [ ನೂಂಕುವವರ |
ತುರಗಮುಂಕೊಂದು ಭೂಸುರರನಪಹರಿಸಿದರ
ಶಿರವಕಿತ್ತೀಡಾಡು ಮೊಳೆಯಮುರಿನೀಯಂದು ಮರುಳಬೀಳ್ಕೊಟ್ಟನಾಗ
[ ||೬೪||

ಧರ್ಮವನು ಮಾಡುವರ ಬೇಡೆಂದರಂ ಕ್ರೂರ
ಕರ್ಮಿಯನು ಕಾಡಡೇಗುಲವಳಿದ ಪಾತಕರ
ದುರ್ಮದದಿ ಮುಂದುಗಾಣದರ ಜಿತಚೋರಕರ ಪೆರ್ಮರನಭೇದಿಸಿದರ |
ಹರ್ಮ್ಯಗಳನಳಿದವರ ಪುಷ್ಪವನತರಿದವರ
ಮರ್ಮಘಾತಕರ ಮಧುಸೇವ್ಯರಂ ಲುಬ್ಧಕರ
ನಿರ್ಮಳರ ನಿತ್ಯರಂ ಪಳಿವ ಮಹಪಾತಕರ ನಿರ್ಮೂಲಮಾಡೆಂದನು||೬೫||

ಎನುತಮಾಯೆಯನು ಬೀಳ್ಕೊಟ್ಟು ಮರುಳೇಶ್ವರ
ನನಿತರೊಳು ಕೊಂಡಮಾರಿಗೆ ನೇಮವಿತ್ತೊಡನೆ
ನೆನೆದನಿಲ್ಲಿರಬಾರದೆಂಬ ಸಮಯದೊಳಾಗಲಿನನುದಯ ಸಮಯಕಾಲ |
ಜನದಮರೆವೆಗೆ ಯಚ್ಚರೀವಂತೆ ತಿಮಿರವಂ
ಕನಲಿಸುತ ಜಕ್ಕವಕ್ಕಿಯಸೆರೆಯ ಬಿಡಿಸುತಂ
ವನಜಾತ ಮೃಗಕುಲವನೆಚ್ಚರಿಸುವಂತಾಗಲಿನರಶ್ಮಿಪರಿದೇಳಲು ||೬೬||

ಅಲರಿಸುತ ಪದ್ಮಷಂಡವನೆಚ್ಚರಿಸುತಾಗ
ಮಲರಿಸುತ ಕುಮುದಮಂ ಮಾಯಾಮಹಾನದಿಯ
ತೊಲಗಿಸುತ ಮಂದಮಾರುತನ ನೆಚ್ಚರಿಸುತಂ ಮಲರಿಸುತ ಪೂದುಂಬಿಯ|
ಜಲಜವನದೊಳು ಭ್ರಮರಝೇಂಕಾರವಾದೇವ
ನಿಲಯದೊಳು ಪಂಚಮಹಾವಾದ್ಯಮೊಳಗುವಕಾಲ
ಬಲವರಿತು ಮೂಡಣಾದ್ರಿಯನೇರಿದಂ ತಪನ ಸಲೆ ತೇಜವೆಸೆಯಲಾಗ||೬೭||

ಇನನುದಯವಾಗಲಾ ಮರುಳಸಿದ್ಧೇಶ್ವರನು
ನೆನವರಿಗಗೋಚರನು ಘನಕೆ ಘನ ಪರಮಾತ್ಮ
ಮನುಜರೊಳು ಬೆರದು ಮಾಯಾಮಹಿಮೆಯನು ತೋರಿದನಿತು ಲೀಲಾ
ಕನಕದೊಳು ರತ್ನಕಾಂತಿಯನಾಚರಿಸಿದಂತ [ ಮಾತ್ರದಿ |
ವನಿಯೊಳಗಷ್ಟತನು ತಾನೆ ರೂಪಾಯಿತೆನ
ಲಿನನೊಳು ನವಗ್ರಹಂ ಅಡಗಿದಂತಾಮರುಳ ಘನಕಂಥೆಯನು ಧರಿಸಿದ
[ ||೬೮||

ಇರಬಾರದೆಂದು ದೇಶಾಂತರಕೆ ತೆರಳುವಾ
ಭರದೊಳುಂ ತಾನಿದ್ದ ನೆಲೆಗೆ ತಾಪತ್ರಯವು
ದೊರಕೊಳ್ಗುಮೆಂದು ಸೂಚಿಸಿ ಮರುಳನಂತಾಗ ಪರಕೆಯಕೊಂಡು
ಜ್ವರ ಜಠರಶೂಲೆ ಶಿರಬೇನೆ ಜಲಗರವಾತ [ ತೆರಳ್ದ |
ಕೊರಳುಬಾಹುಳು ದಂತ ಜಿಹ್ವೆಕಟಿ ದಶಕುಷ್ಠ
ಉರಿತಾಪದಲಗುಭಯ ಚೋರಭಯವಗ್ನಿಭಯ ವರಭೂಮಿ ಪರಭಯ
[ ಗಳು ||೬೯||

ಆಗತಾ ನೆಲಸಲವನಿಗೆ ತಾಪತ್ರಯದೋಷ
ರೋಗರುಜೆ ಕಾಲಕರ್ಮಗಳೊಂದಿಮುಸಗುತಿರ
ಲಾಗಲೆಚ್ಚರಿಕೆದೋರಲು ಗೌಡಗನುತಾಪತಾಗುತಿರೆ ನೆನದನಂದು |
ಮೂಗನಾದೆಸು ಮರುಳನಿರವರಿಯದೆಲೆಸದಾ
ಕಾಗೆ ಕೋಗಿಲಕೆ ಮರುಳಾದಂತೆ ಮರೆದೆ ಶಿವ
ನಾಗುಹೋಗರಿಯದ ಮಹಾದೋಷಕಾರಿತನುವೀಗಳಿದು ತಾನೆಂದನು
||೨೦||

ಮರುಳ ತೆರಳಿದಸರಣಿಯಂ ನೋಡುತಾಗ ಬರೆ
ಗಿರಿಗವಿಗಳುಂ ಗಹನ ಗುಹೆ ಗಹ್ವರಂಗಳುಂ
ಸರಿಜರಿಗಳೊಟ್ಟು ಗಲ್ಲೆಸೆವ ಖಣಿಗುಂಡುಗಳು ಕಿರಿಮುರುಡಿ ಕೋಡ್ಗಲ್ಗಳು|
ಇರುಬಿನಪಥಂಗಳುಂ ಕಿರುಗಲ್ಲು ಮೊಳೆಗಲ್ಲು
ತೆರಪಿಲ್ಲದೆಸೆವ ಕುತ್ತುರು ಪೋರ್ಬುಗೆಯೊಳಾಗ
ಮರುಳಸಿದ್ಧನನರಸಿ ಕಾಣದಳಲಲು ಮುಂದೆ ಗಿರಿಯು ಗಹ್ವರವೆಸೆದುದು
[ ||೨೧||

ಅಡವಿಯೆಸೆದುದು ನೈಮಿಶಾರಣ್ಯದಂತೆ ಪೇ
ರಡವಿಯೆಸೆದುದು ದಂಡಕಾರಣ್ಯದಂತೆ ಕಾ
ರಡವಿಯೆಸೆದುದು ಚಂಪಕಾರಣ್ಯವೆಂದೆನಲ್ ಜಡಮತಿಗೆ ತಿಳಿಯದು |
ಘುಡುಘುಡಿಸುವಾ ಘೋರವ್ಯಾಘ್ರ ಘೋಷಣೆಯಿಂದ
ಅಡವಿಲಿಹ ತರುಕುಲದಗಾಧ ತೋಟಗಳಿಂದ
ಬಿಡದುಲಿವ ಖಗಮೃಗದ ಘೋಷ ಸಂವಾದದಿಂದಡವಿ ಭೋರಿಡು
[ ತಿರ್ದುದು ||೨೨||

ವನವನೋಡಲದೆತ್ತ ಚಂಪಕಾವನದಂತೆ
ಘನವನೋಡಲದೆತ್ತಲದ್ವೈತ ತನುವಂತೆ
ಇನಿತು ನೋಡುವಡೆ ಕಾಮ್ಯಾರ್ಥಗಳ ತಾಂ ಪೋಲ್ತು ದಿನರಸ್ಮಿಗತಿ
ಎನಲೆಸೆದುದಾಖಾಂಡ ವನದಸಿರಿಯೆನೆ ನೆಲಸಿ [ ಭೇದ್ಯವು |
ಜನಜನಿತ ವಿಂಧ್ಯಚೈತ್ರೋದ್ಯಾನವಂ ಕಳೆದು
ಬನವೆತ್ತ ಕಂಗೊಳಿಸಿ ತೋರುತಿರ್ದುದು ಗೌಡನಿಗಿಂದ್ರಜಾಲದಂತೆ ||೨೩||

ಗಿರಿಯು ನೋಡಲದೆತ್ತ ತರುಕುಲದ ಪಂಙ್ತ್ತಿಯಿಂ
ಸುರಹೊನ್ನೆ ತದುಕ ತುಂಬರ ಗೋವಟಿಗಳಿಂದ
ಹರಿಣವಿಂಡುಗಳ್ವಿಚಿತ್ರಕಾಯ ಕಪಿನಿಕರದಿಂ ಕರಡಿ ಸೂಕರಗಳಿಂದ |
ಅರಗಿಳಿಗಳಿಂ ಪಲುಸೆ ಪಾರಿವರವಂಗಳಿಂ
ಪರಪುಟ್ಟ ನವಿಲು ಒಕ ಹರಡೆ ಜಾದಗೆಯಿಂದ
ನೆರೆದುಲಿವ ಖಗಮೃಗಂಗಳ ಸಮೂಹಗಳಿಂದಲಾ ವನಂ ಕಣ್ಗೆಸೆದುದು||೭೪||

ಹೋದಪಥವರಿಯದಲೆ ಆಗೌಡ ತಿರುಗಿದನು
ಹೋದ ಹೊಲಬಳಪಡದು ಹರಿಯಜಸುರೇಂದ್ರರಿಗೆ
ಹೋದ ಮಾರ್ಗವನರಿಯರಾಸಿದ್ಧಸಾಧಕರು ಭೇದಿಸಲಭೇದ್ಯವವರ್ಗೆ |
ವೇದ ಪೌರಾಣಾಗಮಂಗಳಿವು ನೆರೆ ಪೊಗಳಿ
ಹಾದಿಯರಿಯವು ವೇದತರ್ಕಕಪ್ರತಿಮನನು
ನಾದಬಿಂದು ಕಳೆಗತೀತನಾದನುಪಮನನಾದಿಮೂರುತಿ ನೆನೆದನು ||೭೫||

ಈಶ ಸರ್ವೇಶ ಮಧುಕೇಶ ಪೂಜಿತಚರಣ
ಶೇಷಕುಂಡಲ ದುರಿತನಾಶ ರವಿಶಶಿಕೇಶ
ಭಾಸುರಕಳಾಕಳವಿಶೇಷದರ್ಪಕಹರ ವಾಗೀಶ ಶಿರಕರತೇಜನು |
ದೇಶಾಂತರವ ಚರಿಸಿ ಭರದಿ ಬರುತಿರಲಾಗಿ
ಭೂಸುರರ ಬೇತೂರವಳಯಾಕರಂ ತನಗೆ
ವಾಸವಹುದೆಂದು ಮರುಳಾಟಗಳ ಲೀಲೆಯ ವಿಲಾಸದಲಿ ನಿಂದನಂದು
[ ||೭೬||

ಯಜ್ಞವನು ಮಾಳ್ಪಸಮಯದೊಳು ತಾ ಬಂದೊಡನೆ
ಯಜ್ಞಕಧಿಕರ್ತರಹ ಋಷಿವರ್ಗವನು ಕರೆಸಿ
ಯಜ್ಞಶಾಲೆಯ ಚತುಃಕೋಣವನು ಬಲಿದಾಗ ಋಗ್ಯಜುಸ್ಸಾಮಾಥರ್ವಣ
ಲಗ್ನಮುಹೂರ್ತದ ವೇಳೆಯೊಳು ಸ್ವಚಂದಂಗಳೊ [ ವನು
ಳಗ್ನಿಯಂ ಪಟುಗೊಳಿಸಿ ಮಂತ್ರತಂತ್ರಕ್ರಮದೊ
ಳಾಜ್ಞೆಗೊಳಿಸುತ ವಿಪ್ರಸಂಕುಲಂ ನೆರದಾಗಲರ್ಘ್ಯಮುನಿಮತದಿಂದಲು
[ ||೭೭||

ಪಾಲುಸಕ್ಕರೆ ಮಧುಘೃತಂ ಕದಳಿಫಲವಿವನು
ಮೇಳೈಸಿ ತಂದಗ್ನಿಗಾಹುತಿಯು ನಿಳುಹಿ ಮಿಗೆ
ಜೋಳ್ವಿಸರದಿಂದೆ ಸರ್ವರ್ಘ್ಯವನು ಕೊಡುತೊಡನೆ ತಳಿದಾಗ ತಿಲಘೃತ
ಮೇಲೆನಿಪಶಾಕ ಷಡುರಸ ಭಕ್ಷ್ಯಭೋಜ್ಯಗಳ [ವನು|
ಬಹಳ ವದಗಿಸಿ ಪಂಙ್ತಿಮಾಳ್ಪ ಸಮಯದೊಳಾಗ
ಬಾಲಲೀಲೆಯೊಳ್ಮರುಳ ಬಂದು ಭಿಕ್ಷವಬೇಡೆ ಕೇಳಿ ಭೂಸುರಸಂತತಿ
[ ||೭೮||

ಮುಂಡೆಯ ಮಗನು ಬಂದ ಕಂಡಿರಾ ಬ್ರಾಹ್ಮಣರೆ
ರಂಡೆಯುಸುತನು ಶೂದ್ರ ನೀವ್ನೋಡಿ ಋಷಿಗಳಿರ
ಚಂಡಿಯಿವ ಚಂಡಿಯು ವಿವಾದವನು ಕೆಡಿಸುವರೆ ಕೊಂಡು ಕೊಸರುವ
ಕಂಡನಿವ ಬ್ರಾಹ್ಮಣ್ಯದೂಟಸಮಯದೊಳಿವನ [ಬಂದನು |
ಕಂಡವರು ಧೋತ್ರದರ್ಭೆಯಲಿ ಹೊಯ್ಕಟ್ಟಿಸುತ
ಕೆಂಡಗೊಳ್ಳಿಯಲಿ ಕೆಂಗಣ್ಣನಿರಿಯಿರಿಯೆನುತ ಮುಂಕೊಂಡು
[ತರುಬಲಾಗ ||೭೯||

ಎಲವೆಲವೊ ವಿಪ್ರಸಂಕುಲವೆಲ್ಲ ಕೇಳ್ನಿಮ್ಮ
ಕುಲಛಲವದೇನು ಬಹುಕುಲದಲೋರ್ವರು ನೀವು
ನೆಲೆಯ ನೆನಗರುಪೆಂದು ಗಾಳುಗೋಳೆಂಬುವರ ಕಲಕೇತ ಮಲ್ಲನಾಗ |
ಮಲತು ಮಾರ್ನುಡಿವುತಲಿ ಛಲದಿಂದ ನಿಂದಿರಲು
ಕುಲಗೇಡಿ ಬಂದನಿವನಾರೋ ಯೆನುತವರೊಡನೆ
ಮುಳಿದಾಗ ವಿಪ್ರಸಂಕುಲವೆಲ್ಲ ನಮ್ಮ ಕುಲವಿಡಿದಾಡ್ವನೀ ಮರುಳನು
[ ||೮೦||

ಪಾತಕನುಬಂದ ನಿಪಾತಕನು ನೋಡಿರೇ
ಜಾತಿಯುಳಿದಂತ ನಿಜಾರ್ತನಿವನೋಡಿರೆ
ಪ್ರೇತ ಪತಿಯುರಸನಂ ಭೂತಾತ್ಮನಿವ ನೋಡಿದಾತನಿವನಲ್ಲೆನುತಲಿ |
ಪೀತಾಂಬರನದಲ್ಲ ಜಾತ ದಿತಿಸುತನಲ್ಲ
ಶ್ವೇತವಾಹನನಲ್ಲ ಚತುರ್ವದನನಿವನಲ್ಲ
ವೀತಿಹೋತ್ರನು ನಮಗೆ ದಾತನಿವನಲ್ಲೆನುತ ಕಾತರಿಸಿ ಕೆಡೆನುಡಿದರು
[ ||೮೧||

ಹರಪೂಜೆಯರಿಯದಿಹ ಪರಮ ಪಾತಕರಿರ
ಪರಕಿಸಲು ಪರದೈವ ಭಜನೆ ನಿಮಗುಂಟಾಗಿ
ತರಣಿಪಾವಕನಜನ ಹರಿಸುರಪನಂ ನೀವು ಸ್ಮರಿಸಿ ಮೂರವಸರದೊಳು |
ಇರೆಮೂರು ಕಾಲವರ್ಜಿಸಿ ಬರುವ ಹಾರುವಂ
ಧರಣಿಸುರರೆಂದು ಷಟ್ಕರ್ಮಭರ ಹಾರುವಂ
ಪುರಹರನನರಿಯದ ಮಹಾ ಕರ್ಮಿಗಳು ನೀವು ನರಕ ಭಾಜನರೆಂದನು [ ||೮೨||

ಎಂದ ಮಾತನು ಕೇಳಿ ಮತ್ತವರು ಮುನಿದೊಡನೆ
ಕಂದನಿವ ಕಡುದುರುಳನಂ ಕಟ್ಟಿ ಪಾಶದೊಳು
ಸಂದಿಸಂದಿಗೆ ನೀರ ಬಿಟ್ಟು ಬಂಧಿಸುತೊಡನೆ ಕೊಂದುಕೂಗೆಂದೆನುತಲಿ |
ಮಂದಮತಿ ಯಿವನನೆಳದೊಯ್ದು ಣಿಜೆಯಾಕಟ್ಟಿ
ಗೊಂದಿಡಿದು ಬಿಡಿಯುನಲದಾಕ್ಷಣದೊಳಾತನಂ
ತಂದು ಬಂಧಿಸಿ ಪೂಣ್ದು ಸರ್ವರುಂ ಕೆಡೆನುಡಿದು ಬಂದರಾ ಶಾಲೆಯೆಡೆಗೆ [ ||೮೩||

ಮತ್ತೆದ್ದು ಪಾಶಂಪರಿದು ಬರೆ ಮರುಳನಂ
ಸತ್ತು ಬಂದನು ನೋಡಿರೆನುತ ಭೂಸುರರೆಲ್ಲ
ಸುತ್ತರಿದು ಕಟ್ಟು ಪರಿದಕಳಂಕಮತಿಖಳನು ಮೃತ್ಯುಮಾರಿಯು [ ಯನುತಲಿ |
ವ್ಯರ್ಥವಾಯಿತು ನಾವು ಮಾಡಿದುಪಹತಿಯಾಗು
ದಾತ್ತನಿವ ಪೂರ್ವಪರನೆಂದಾಗ ಬ್ರಹ್ಮಸಭೆ
ಉತ್ತರೋತ್ತರವ ನೆನದೊಡನೆ ಶ್ರೀಹರಿಬಲ್ಲನೆನುತ ತಾಪತ್ರಯದೊಳು [ ||೮೪||

ಎಡೆಯಾದ ಶಾಕಪಾಕವನೊಂದುಗೂಡುತಲಿ
ಬಿಡದದಂತಂದರೆಯ ಮೇಲಿಟ್ಟು ಷಡುರಸವ
ಹುಡುಗರಂ ಕರಕರದು ಮುದ್ದೆಗೂಳನುಮಾಡಿ ಕೊಡುತಿರ್ದ್ದ ಶಂಕೆ
ಕಡೆಯ ಮಾತೇನು ಹದಿನೆಂಟು ಜಾತಿಯನೆಲ್ಲ [ ಯುಳಿದು |
ಒಡನುಣಿಸಿ ಪಂಚಭೂತಾತ್ಮವದು ಒಂದೆನಿಸಿ
ಒಡಲ್ವಿಡಿದ ಪಂಚೇಂದ್ರಿಯಗಳೊಂದುಗೂಡಿ ಪಿತಮೃಡ ತಾನು ತಾನೆನುತಲಿ [||೮೫||

ಮರುಳನಮಾಡಿದನೊಂದು ಪರಿಯಾಯ ಗತಿಯ ಭೂ
ಸುರ ಸತಿಯರುಂ ರಜಸ್ವಲೆಯಾಗಲಂತವರು
ಪರಿಹರಿಸಲಾ ಶುದ್ಧನೀರವಿಾವೃತ್ತಿರುತ ಶರೀರಕಾಂತಿಯು ಕಾಣುತ |
ವರರೂಪು ಒಲಿದು ತತ್ಕಾಂತಿಯೊಡವೆರದಾಗ
ಮರುಳನ ಸ್ವರೂಪ ವರಸತಿಸುತರಿಗಂತಾಗೆ
ಮರುಳನಿವ ಧೂರ್ತನೆಂದೆನುತಾಗಲವರುಗಳು ಕೆರಳಿ ಕೆಕ್ಕಸಗೆಲದರು
[ ||೮೬||

ಎಮ್ಮ ಸತಿಯರಿಗೆಮ್ಮ ರೂಪು ಒಲಿವುದು ತತ್ತ್ವ
ತಮ್ಮನೆಳದಾರೂಪು ವಾದರದ ತದ್ರೂಪು
ನಿರ್ಮಳದ ರೂಪಲ್ಲ ಕರ್ಮಕುದಿಸಿದ ರೂಪು ವರ್ಮಗುಣ ಕರಣಂಗಳು |
ಸನ್ಮತವಿದಲ್ಲ ಕರ್ಮಟವಿಗೊಯ್ದು ವನೊಡನೆ
ಗಮ್ಮನೆ ಬಿಲದ್ವಾರದೊಳು ಪೊಗಿಸಿ ಸುಣ್ಣವನು
ಕುಮ್ಮಿರಿಸಿ ನೀರಪೊಯ್ದಾಗ ಬಿಡೆ ಕುದಿಕುದಿದು ಕರ್ಮಕಿದಿರಾದರಂದು
[ ||೮೭||

ಬಿಲಸ್ವರ್ಗಮುಂ ಕಳೆದು ಬಂದು ಕುರುಡಿಯಲ್ಲಿ
ನೆಲಸಿದಂ ಲಿಂಗಮಯವಾಗಿ ಸಿದ್ಧೇಶ್ವರನು
ಬಲುಪವಾಡವ ಗೆಲಿದು ಸಲೆ ವಿಪ್ರರೋಳ್ ನೆಲಸಿ ಕುಲವೆಲ್ಲವೊಂದು
ಬಲು ಸಮರ್ಥತೆಯರಿಯದಾ ವಿಪ್ರಸಂಕುಲಂ [ ಗೂಡಿ |
ಛಲವುಡುಗಿ ಮುದಬೆಂದು ಮಾಯಾತಮಂಧದೊಳು
ಮುಳುಗುತಾಳುತಲೇಳುತಂದು ಗುಡವಿರುತಾಗ ಭಲರೆ ವಿಧಿಯೆಂದೆನು
ತಲಿ [||೮೮||

ವಿಪ್ರರುಂ ಮಾಡಿದ ಪವಾಡಮುಂ ಕಳೆದೊಡನೆ
ವಿಪ್ರಪುರಕಂ ಪೋಗಿ ನಿಲಲು ಮರುಳೇಶ್ವರನು
ಸುಪ್ರಸನ್ನತೆಯಾಗಿ ತನುಕಾಂತಿ ಪಸರಿಸಲು ತತ್ಪ್ರಭೆಯ ಬೆಳಗಿನೊಳಗೆ |
ಸುಪ್ರಮೌಳಿಯನರಿಯದಾ ಕ್ರೂರಕರ್ಮಿಗಳು
ನಿಷ್ಪ್ರಪಂಚಂ ನಿತ್ಯದೇಹಿ ಹರನಂ ಅರಿಯ
ದುಷ್ಕೃತಿಯ ಪರಮಪಾತಕರು ನೆರದಾಗಲಿರೆ ವಿಪ್ರಸಂಕುಲದೊಳಂದು
[ ||೮೯||

ಅಲ್ಲವರು ಮಾಡಿದುಪಹತಿಯನುಂ ನೆರೆಕಳೆದು
ಬಲ್ಲಿದಂ ಮರುಳ ಸಿದ್ಧೇಶ್ವರನು ಬರಲೊಡನೆ
ತಲ್ಲಣಿಸಿ ವಿಪ್ರಸಂಕುಲ ಬೆದರಿ ಭಯದೊಳಿರೆ ಗಲ್ಲಕಂ ಕೈಸಾರ್ಚುತ |
ಕಲ್ಲೆದೆಯ ವಿಪ್ರರಿವನಳ್ತಿ ತಿಳಿಯದೆನುತ್ತ
ಮೆಲ್ಲರುಂ ತಮತಮಗೆ ಪೇಳದಲೆ ಸರಿದೋಡೆ
ಬಲ್ಲಿದಂಗೌಡ ಪ್ರಜೆಗಳು ನುಡಿದರಿವನ್ನೊಕ್ಕಮುರಿ ಬೇಗದಿಂದೆನುತಲಿ
[ ||೯೦||

ಸುಣ್ಣದ ಪವಾಡವನು ಗೆಲಿದ ಚಿದ್ಘನರೂಪ
ತಣ್ಣಗ್ಗೊರಹೊರಟ ಮೈಬಣ್ಣಗುಂದಿಲ ನೋಡಿ
ಚಿಣ್ಣನೀಕರುವಲಿಗನಿವನ್ನೊಕ್ಕ ಮುರಿಯೆನುತಲಣ್ಣಗಳು ಕಡುಗೋಪದಿ |
ಬಣ್ಣಸಲದೇಕಿನ್ನು ಹೆಡಗೈಯ್ಯ ಕಟ್ಟಿವನ
ತಣ್ಣೀರೊಳದ್ದಿ ಚಾಟಿಯಲ್ಹೊಡೆದು ಕೆಡೆನೂಕಿ
ಕಣ್ಣು ಮೂರುಳ್ಳನಾಗಲಿ ಕದಲಿಸ್ರೊಡೆಯೆನುತ ಹಣ್ಣಿದರು ಹರಣ
ಕನುವ [ ||೯೧||

ಅಡಿಗಡಿಗೆ ಬ್ರಹ್ಮಸಭೆ ಬೆಚ್ಚಿಬೆದರುತಲಾಗ
ಹಿಡಿದ್ಹೆಡಗೈಯ ಕಟ್ಟಿದರು ಪಾಶದೊಳಡಸಿ
ಕಡುಗಲಿಯನಡಸಿತಂದರು ಪೊಡವಿಪನ ಮುಂದೆ ಹಿಡಿತಂದು ನಿಲಿ
ಒಡೆಯ ಕೇಳೆಮ್ಮ ಬಿನ್ನಹವನೊಂದನು ನಮ್ಮ [ ಸುತ |
ಬಿಡದಲದು ಯಜ್ಞಹೋತ್ರವ ಕೆಡಿಸಿ ಭಿಕ್ಷವಂ
ಹುಡುಗರಂ ಕರಕರದು ವೊಂದಾಗಿ ತಿನಿಸುತಂ ಕೆಡಿಸಿಬಿಟ್ಟಕಳಂಕನು||೯೨||

ಮರೆಯಾತಕಿವನು ಪದಿನೆಂಟು ಜಾತಿಯನೆಲ್ಲ
ಬೆರಕೆಯಿಂದುಣಿಸಿ ತಂದರೆಯ ಮೇಲಿಟ್ಟೊಡನೆ
ಕರೆಯುಂಡ ಕಂಟಕನು ಕಡುಪಾಪಹರನಿವಂಯುರೆಯನೆ ಕೇಳೆಂದರು |
ಬರಿಯಮಾತಲ್ಲ ಮಂತಣಕಪಟಹುಸಿಯಲ್ಲ
ಕೊರಚಾಡಿ ಪರಸ್ತ್ರೀಯರಪಮಾನಮಂ ಮಾಡಿ
ದರಿಕೆ ಮೃದುದೃಷ್ಟಿಯಿಂ ಸುಕುಮಾರೊಗೆದರವರ್ಸರಿ ನೋಡಲಿವ
[ ನಂದವು ||೯೩||

ಈಪರಿಯ ನೊಣಬಚಕ್ರೇಶ್ವರಂಗೀಹದನ
ಸೂಚಿಸುತಲಿಹ ಸಮಯದಲಿ ಬ್ರಾಹ್ಮರ್ನಮಿಸುತಿರಲ್
ಭೂಪಾಲ ಕೇಳಿ ಬಿಸುಸುಯ್ದು ತಾ ಕಡುನೊಂದು ಪಾಪಸಂಭವಿಸಿತೆನುತ |
ಕೋಪವನು ತಾಳಿ ಹೂಂಕೃತಿವೆತ್ತು ಹೃದಯದಾ
ಳಾಪದಿಂದಿವನ ಕಡಿಖಂಡವನು ಮಾಡುತಲಿ
ನೂಕಿ ಮದದಾನೆಮುಂದೆನುತಾಗ ಚರರಿಂಗೆ ಭೂಪತಾನೇಮಿಸಿದನು
[ ||೯೪||

ಮದಗಜದ ಮುಂದೆ ನೂಕಲು ಮಲೆವುತಾಗಜಂ
ಇದಿರೊಳಗೆನಿಂದು ಅತ್ಯಧಿಕ ಮದದಿಂದಾಗ
ಕದನದಿ ಗಜಾಸುರಂ ಈಶ್ವರನ ಮೇಲ್ವಾಯ್ದುವದಗಿದೊಲು ಆ ಸುದಂತಿ|
ಇದಿರಾಗಿ ಪರಿತರಲು ಕಂಡು ರೌದ್ರಾಕಾರದಿ
ಮದನಹರಮೂರ್ತಿ ಸಂಹರಿಸಿ ಘೋರಾಕಾರದ
ಮದವ ಮುರಿದಜಿನಮಂ ಪೊದೆದನೆಂದೆನುತಾಗ ಮದಕಂಡು ಧೃತಿ
[ ಗುಂದದೆ ||೯೫||

ಶೀಘ್ರದಿಂ ಬಹ ಕರಿಯ ಸುಂಡಿಲಂ ತನ್ನ ಹ
ಸ್ತಾಗ್ರದಿಂ ಪಿಡಿದೆತ್ತಿ ಬರಸೆಳೆದು ಮುದದಿಂದ
ನಿಗ್ರಹಿಸಿ ಕೆಡಹಿನಿಂದನು ಪುರುಳಮತ್ತಂ ದುರಾಗ್ರಹದ ರೂಪಿನಿಂದ |
ಉಗ್ರರೂಪನು ನೆರೆದ ಜನರು ಮಾವತಿಗನಂ
ಆಗ್ರಹಿಸಿ ಕೆಡೆನೂಂಕಿ ಕಾಲಿಲೊದೆದಾಗಳಂ
ದುಗ್ರವೃತ್ತಿಯೊಳದರ ಶಿರಮೆಟ್ಟಿ ಬೊಬ್ಬಿರುವುತುಗ್ರದೊಳೆಸೆದನಂದು
[ ||೯೬||

ಶಂಭುವೆಂದೆನುತರಿದು ಕುಂಭಿ ಕುಂಭ ಸ್ಥಳದಿ
ತುಂಬಿ ತಂದುದು ತಮ್ಮನಂಬರಕೆ ಸೂಸಿಮಿಗಿ
ಲಂಬುಜದರಳ ತಂದು ಪದದಂಬುಜಕೆ ಸೂಸಿ ಶಂಭು ಜಯಜಯವೆನು
ಕುಂಭಿ ಮದವುಡುಗಿ ಭಕ್ತಿಯುತಾಳಿ ಮನದೊಳಗೆ [ ತಲಿ |
ಶಂಬರಾಹಿತ ಹರನಪೂಜೆಯಂ ಅನುಗೊಳಿಸಿ
ಕುಂಭಿ ಶಂಭುವಕೊಂಡು ವನದತ್ತ ಪೋಗುತಿರೆ ಬೆಂಬಲದೋಳ್
[ ಪರಿದರಂದು ||೯೭||

ಪಿಂದೆಹತ್ತಿತುಸೇನೆ ಬೆಂಬಲನ ಹಿಡಿದೊಡನೆ
ವಿಂಧ್ಯದೊಳು ಪೊಕ್ಕು ಪೊಕ್ಕಲ್ಲಿ ಬೆಂಬಿಡದೊಡನೆ
ಮುಂದುಗಾಣದೆ ಮುಚ್ಚನೂರ ಪೊಕ್ಕಂಹರಾನಂದವಾಪೆಸರೂರಿಗೆ |
ಮಂದಮತಿಗಳು ಹಿಂದಬಿಡದಿರಲು ಮರುಳನಾ
ನಂದವಳಿದುಸ್ಸೆನುತ ದಾರಿಯೊಳು ನಿಲಲು ತಾ
ನಂದ ಉಳುಪನಕಟ್ಟೆಯೆಂದೆಂಬ ಪೆಸರಾಯ್ತು ಮುಂದುಹಿಂದೆಡಬಲ
[ ದೊಳು ||೯೮||

ಏನು ಪೇಳುವೆ ಸೇನೆ ಬೆಂಬತ್ತಿಬರಲೊಡನೆ
ಭಾನುಶೇಖರನೋಡಿ ಗಹಗಹಿಸಿ ನಗುತಲಾ
ಆನೆಯ ಧರಾತಳಕ್ಕಿಳಿಯೊತ್ತಿ ಕೋಡುಗಳ ತಾನೊಗೆವುತಂಬರಕ್ಕೆ |
ಮಾನವರಿಗಾದೃಶ್ಯಮಂ ತೋರಿ ಬಯಲಾದ
ಮಾನನಿಧಿ ಮರುಳ ಸಿದ್ಧೇಶಲಿಂಗನು ನೆಲಸಿ
ದಾನೆಗೋಡೆಂಬ ಪೆಸರುಂ ಪಡೆದುದಾಪುರವ ಮಾನವರು ಪೊಗಳಲವೇ
[ ||೯೯||

ಪರಮಪಾವನಮೂರ್ತಿ ಮರುಳಸಿದ್ಧೇಶ್ವರನು
ಗಿರಿಜೆಯ ವಿವಾದಮಂ ಗೆಲಲೆಂದು ಬರಲೊಡನೆ
ನರರೆಸಗಿದುಪಹತಿಗಳುಂ ಕಳೆವುತಂತಾಗ ಬರುತಿರಲು ಮುಂದೆಡೆಯೊಳು|
ಗಿರಿವನಂ ಗುಹೆಗಹ್ವರಂಗಳಂ ಕಳೆದಾಗ
ಬರುತಿರಲು ಮರುಳ ಮಂಟೆಯುದವರು ಕಂಡರಂ
ತವರಿಗಂ ತನ್ನಂತರಂಗವನು ವೊಲಿದರುಹಿ ಮರುಳರಂ ಮಾಡಿಬಳಿಕ
[ ||೧೦೦||

ಅಸಮಾಕ್ಷ ನಸುರ ಕೋಳಾಹಳನು ಸಿದ್ಧೇಶ
ವಿಷಮ ದೈತ್ಯರ ಮುರಿದು ನುಗ್ಗೊತ್ತಿ ಬರೆಮುಂದೆ
ಶಶಿಧರನ ಬೆಂಬತ್ತುತಿರೆ ಬನ್ನಿಕೋಡೆಂಬ ಪೆಸರು ಸೂಚಿಸುವೊಲಾಗ |
ವಸುಧೆಯು ವಿಚಿತ್ರವೆಂದೆನುತಿರಲು ಪೆಸರ್ವಡೆದು
ಮುಸುಳಿಸದ ಕೀರ್ತಿಯಿಂದೆಸೆದುದಾಪುರವರಂ
ಅಸಗೋಡಪುರದೊಳುಂ ಸಲೆನಿಂದ ಸಿದ್ಧೇಶ ವಸುಮತಿಗೆ ಹೆಸರುವಡದು
[ ||೧೦೧||

ಚರಲಿಂಗಮೂರ್ತಿ ಚರಿಸುವ ವಿನೋದವನೊಲಿದು
ಶರಣಸಂತತಿ ಮರುಳನಟ ನಾಟಕವ ಕೇಳೆ
ದುರಿತ ದುಷ್ಕೃತ ರೋಗ ರುಜೆ ತಾಪತ್ರಯ ಹರಿದು ಶರೀರ ಶುದ್ಧಾತ್ಮ
ಮರುಳಬಂದನು ತುಯ್ಯಳಲೆಂಬ ಪುರವರಕೆ [ರಹರು |
ಇರದೆ ಭಿಕ್ಷವಬೇಡಿ ವರಸುಧೆಯಸವಿದಾಗ
ಹರಕೆಯಂ ಕೊಟ್ಟು ಹಯನಹಳ್ಳ ಘನವೆನುತಾಗ ವರಮೂರ್ತಿ ನಡೆದ
ನಂದು [ ||೧೦೨||

ಮತ್ತೆ ಹರುಷದಿ ಸಿದ್ಧಲಿಂಗ ಚಿದ್ಘನಮೂರ್ತಿ
ಚಿತ್ತಜಹರಂ ಚಿನ್ಮಯಂ ಸಚ್ಚಿದಾನಂದ
ನಿತ್ಯನಿರ್ಮಳರೂಪ ಬರುತಿರಲು ಮುಂದೊಂದು ಸತ್ಯದಾಶ್ರಮುವೆನಿಸುವ |
ಅತ್ಯಂತವಹ ಹಳೆಯಬೀಡೆಂಬ ಪುರವರವ
ಕೀರ್ತಿಸುವರಳವಲ್ಲ ಉತ್ತರೋತ್ತರವೆನಿಪ
ಕರ್ತವೆನಿಸುವನದಕೆ ಬಲ್ಲಾಳನೃಪನೆಂಬ ಸತ್ಯೈಕಜನಬಾಂಧವ ||೧೦೩||

ಹಳೆಯಬೀಡಿನಪುರವು ಕಳೆಗೊಂಡುನಿಂದುದತಿ
ತಿಳಿಗೊಳಂ ಚಂಗಣಿಗಿಲೆಯು ನೈದಿಲಾಕರಂ
ನಳಿನ ಕುಮುದಗಳು ಸೌರಭಸರಸಿಯಿಂದಲವ ಬಳಿವಿಡಿದ ಖಗಕುಲಗಳು |
ತಳಿತವನ ತಳಿರು ಕೆಂದಳಿರು ಪಲ್ಲವ ಶಾಖೆ
ಗಿಳಿವಿಂಡಿನಿಂಚರದ ಕೋಕಿಲನ ಬಲ್ಚರದ
ಕಳಹಂಸೆಗಳು ನಾಟ್ಯದುರಗಗಳ್ಕಳೆಗೊಂಡು ಎಳೆವನಂ ಕಂಗೊಳಿಸಿತು
[ ||೧೦೪||

ಪುರವರೋದ್ಯಾನ ಕಣ್ಗೆಸೆವುತಿರಲುಂ ಮುಂದೆ
ಕರಿತುರಗದೇರಾಟ ನರರ ತಿಂಥಿಣಿಯಿಂದ
ವರರನ್ನಕೋಟೆ ಪರಿವೃತಿಯಿಂದ ರಂಜಿಸಲು ಮೆರೆವ ಮಣಿಮಾಡಂಗಳು|
ಥರವಿಡಿದ ಸೋಮಸೂರಿಯವೀಧಿ ಕಾಂತಿಯೊಳ
ಗರವಿಂದಗಂಧಿಯರ ಮೊತ್ತಸೂಳೈಸಿರಲು
ಸುರುಚಿರ ನಿಭಾಕೃತಿಯ ನವರತ್ನಪಸರದಿಂ ಪುರವೀಧಿ ಕಣ್ಗೆಸೆದುದು
[ ||೧೦೫||

ಮಲ್ಲಿಕಾರ್ಜುನದೇವ ಮೆಲ್ಲನೈತರುತಿರಲು
ಬಲ್ಲಾಳನೃಪನ ತುರಗದ ಗೋವರುಗಳ್ಮುಂದೆ
ಹುಲ್ಲು ಕೊಯ್ಯುವ್ತ ಕಾಣುತಾಗಲಾ ಗುರುಮೂರ್ತಿಮೆಲ್ಲಡಿಗೆ
ಅಲ್ಲೋರ್ವ ಭಕ್ತ್ಯಾತುರದ ಮಹಿಮೆಯಿಂದಾಗ [ ನಮಿಸಲಾಗ |
ಸಲ್ಲೀಲೆಯಿಂ ಶಿವನ ಕಾರುಣ್ಯವಡೆದಾಗ
ಹುಲ್ಲಕೊಯ್ಯುವದಬಿಟ್ಟು ಮರುಳನೊಡನಾಡುತಿರಲೆಲ್ಲ ನೃಪಗರುಹಲಾಗ
[ ||೧೦೬||

ಅರಸಕೇಳ್ ಹುಲ್ಲಕೊಯ್ವಂತ ಗೋವರೊಳೊಬ್ಬ
ಮರುಳ ಲೀಲೆಯೊಳ್ ಕುಣಿದಾಡುತಿಹನುಂ ಮುಂದೆ
ತುರಗ ರಕ್ಷಣ್ಯದಾಧೀನವನು ಸೆರೆಬಿಟ್ಟು ಮರುಳ್ಗೊಂಡು ಕುಣಿವುತಿಹನೇ |
ಹೊರೆಯವರ ಕೇಳಿ ಪೇಳಿದರದಾಶ್ಚರ್ಯವನು
ಪರಮಪುರುಷನದೋರ್ವ ಬಂದನಾತಗೆ ನಮಿಸ
ಲ್ಕರದ ಪುಲ್ಲಂಬಿಟ್ಟು ಕುಣಿದಾಡುತಿಹನು ತಾ ಪುರಹರನ ಪಾಡಿನಲಿದು
[ ||೧೦೭||

ಆತನೀಪರಿಯ ಹರಲೀಲೆಯಿಂದಾಡುತಿರ
ಲ್ಭೂಪ ನಿಮಗರುಹಬೇಕೆಂದು ಬಂದೆವುನಾವು
ಮಾತಮರುಳ್ಗನವೊ ಮಾಯದಮಹಿಮೆಯೋ ನಮಗೆ ರೂಪಿಸಲ್ಕ
ಕಾಪುರುಷಮಾಡಿದತಿ ಕೌಶಲ್ಯವನು ಕೇಳಿ [ಚ್ಚರಿಯನೆ |
ಭೂಪ ಕೋಪಿಸುತವನ ಮರುಳ್ತನವ ನೆರೆಕಾಣ
ದೇಪೇಳ್ವೆ ಮತ್ತಲ್ಕಬ್ಬುನದ ಬಳೆಯಂ ಕಾಸಿ ಸ್ಥಾಪಿಸುವದವನ ಕೈಗೆ
[ ||೧೦೮||

ಕೈಗಿಕ್ಕೆ ಕಾದಕಬ್ಬುನದ ಬಳೆಯನು ಬೇಗ
ಕೂಗಿ ಮಾರಿಯಕರವರೀತಿ ನಾಣ್ಣುಡಿಗಾದೆ
ಈಧರಾಧಿಪಗಾಗಲ್ಮೇಘದಾ ಮಳೆಸುರಿಸುತಾಗ ಮಹಿಮೆಗಳು ಮೆರೆಯೆ |
ಆಗಲಾಶ್ಚರ್ಯವಟ್ಟು ಪುರದಜನವರಸನಿಂ
ಗಾಗಲರುಹಲು ನಾಗಭೂಷಣೆಂದರಿಯದಲೆ
ಮೂಗನಾದೆನು ಮರುಳ್ತನದ ಗುಣದಿಂದಲಿಂನೇಗುವೆನೆನುತ್ತಿರ್ದನು
[ ||೧೦೯||

ಅಲ್ಲಿಂದ ಬಂದುಪಹತಿಯ ಪವಾಡವನು ಭೂ
ವಲ್ಲಭಂ ನೋಡುತಾಶ್ಚರ್ಯವಟ್ಟು ಶರಣೆನಲು
ಬಲ್ಲ ಶರಣರು ಜಯತು ಜಯಯೆಂದು ಕೊಂಡಾಡಲಲ್ಲಿಂದ ತೆರಳುತಭವ |
ಪಲ್ಲವದ ಸತ್ತಿಗೆಗಳೆಡಬಲದವಂ ಕಂಗ
ಳಲ್ಲಿ ಬರೆಯಿದಿರ್ಬಂದು ಶರಣೆನ್ನಲವರಿಗಂ
ಸಲ್ಲಿಲಿತವರವಿತ್ತು ಕಳುಹಿದಂ ಕರುಣದಿಂ ಮಲ್ಲಿಕಾರ್ಜುನ ಮರುಳನು
[ ||೧೧೦||

ಶಂಭು ಸಿದ್ಧೇಶ್ವರನು ನಡೆವ ಪಥದೊಳು ಮೆರೆಯೆ
ಜಂಬುನೇರಿಲು ಮಾವು ಹಲಸು ಕದಳಿಗಳು ಗಜ
ನಿಂಬೆ ಹೇರಿಳೆ ಯಿಾಳೆ ಕಿತ್ತಳಿಗಳಿಂ ನಲಿವ ಅಂಬಟೆಯು ಬಳುಕುವೆಸೆವ |
ತುಂಬಿದ ತಟಾಕ ಕೂಪಗಳು ಪರಿವಾಕಾಲ್ವೆ
ಗಿಂಬುವಿಡಿದಿರ್ದ್ದ ಶಾಲಿಗಳು ಘನಪೆರ್ಮೆಯಿಂ
ಕುಂಭಿನಿಯು ಘನಪತ್ರ ಫಲಪ್ಪೈರಸೊಳಕೊಂಡ ಸಂಭ್ರಮವದೇವಣ್ಣಿಪಂ
[ ||೧೧೧||

ಪರಮಪಾವನ ಮೂರ್ತಿ ಪುರದ ಬಾಹ್ಯೆಯೊಳಿರಲು
ಶರಣರ್ಮಹಿಮೆಯ ಭಕ್ತಿಯಾಚರಣೆಯಿಂದಾಗ
ವರಪ್ರಸಾದಿಯ ಸೋಂಕು ಮಾಹೇಶ್ವರರ ಪ್ರೀತಿ ಗುರುಲಿಂಗ
ಸ್ಥಿರವಿಡಿದ ಪ್ರಾಣಲಿಂಗಿಯ ಮಹತ್ತುಗಳು ಮಿಗೆ [ ಜಂಗಮಾರ್ಥ |
ಹರನೊಳೈಕ್ಯವ ಪಡೆದ ಐಕ್ಯರಿಂದೊಪ್ಪುತಿರೆ
ಪುರವದುಂ ಶರಣ ಸದ್ಭಕ್ತ ಸಂದೋಹದಿಂ ಮೆರೆದು ರಾಜಿಸುತಿರುವುದು
[ ||೧೧೨||

ಕುಂಭ ಮೆರಸುವರು ಹನ್ನೆರಡು ವತ್ಸರಕೊಮ್ಮೆ
ಕುಂಭಿನಿಯ ಜನಯಾತ್ರೆ ನೆರೆವುದಾಕಾಲಕ್ಕೆ
ಸಂಭ್ರಮದೊಳ್ ಸರ್ವರುಂ ಸಂಪದಗಳಂ ತೊಡಗಿ ಗಂಭೀರದಿಂದ
ಕುಂಭಕವರೋರ್ವನಂ ಆಹುತಿಯನಿಕ್ಕಿ ಘನ [ ಲೆಸೆಯೆ |
ಕುಂಭ ಪೂಜೆಯನು ತೀರ್ಚಿಸುವಂತಕಾಲದೊಳು
ಬಂದಯಾತ್ರೆಯು ಪರೆದು ಪೋಪಸಮಯದೊಳು ತ್ರಿಯಂಬಕನನುಗ
[ ಬಂದನು ||೧೧೩||

ಖಂಡೇಂದುಧರ ಒರಲು ಆ ಪುರದ ಪ್ರಭುಭೈರ
ಗೊಂಡನತ್ಯಧಿಕತರವಾಗಿ ಕೀರ್ತಿಸುತಿರಲು
ಗಂಡಹೆಂಡತಿಸಮಯವೆರಡಾಗಲಲ್ಲಿಗಂ ಇಂದುಧರಸ್ಥೈತಂದನು |
ಗಂಡನಿಗೆ ಭೈರವಪೂಜೆಯುಳವಟ್ಟವನ
ಹೆಂಡತಿಗೆ ಲಿಂಗದ ಘನಾಚರಣೆಯಿಂದೀರ್ವ
ರ್ಮುಂಡೆ ಮುತ್ತೈದೆಯರು ಕೂಡಿದಸಮಾನದಿಂದಿರುತಿರಲು ಪೊಸತೆ
[ ನಿಸುತ ||೧೧೪||

ಜೋಗಿ ಪೂಜೆಯನು ಪ್ರಭು ಸಲೆಸಂದು ಮಾಡುತಿರ
ರಾಗ ಮಿಗಿಲವರಾಹಾರವನಿತ್ತು ಪ್ರೀತಿಯೊಳು
ಜೋಗಿಪಾತ್ರೆಯ ತುಂಬಿ ಮಿಗಿಲಾಗಿ ಹರಸುತಿರಲಾಗ ಪ್ರಭು
ಆಗಮಾರ್ಥದೊಳಿಲ್ಲದಿಹ ಕಾರ್ಯವೆಸಗುತಿಹ [ ನಲಿವುತಿರಲು |
ಪೇಗೆ ದೈವವ ಪೂಜೆಮಾಡಿ ಮರುಳಾದಸಿವ
ಸೇಗುವೇಗುವೆನೆಂದು ಲಿಂಗಮ್ಮ ಬೆರಗಾಗಿ ಜೋಗಿಗಳ ಜರೆದಾಗಳು
[ ||೧೧೫||

ಲಿಂಗಜಂಗಮಗುರುಗಳೊಂದೆಂಬ ಪ್ರೀತಿಯೊಳು
ಲಿಂಗದರ್ಚನೆಯಮಾಡುತಲಿ ತ್ರಿಕಾಲದೊಳು
ಸಂಗಸುಖವಡೆದು ಷಡುರಸಭಕ್ಷ್ಯಭೋಜ್ಯಗಳ ಲಿಂಗದೆಲೆಸವೆವುತಿರಲು |
ಅಂಗಜಾಹರಲಿಂಗಮೂರ್ತಿಯಂ ಪೊಗಳುತಲಿ
ಕಂಗಳಲಿ ನೋಡಿ ಮನದೊಳು ಹರಸಿಕೊಂಡಾಡಿ
ಲಿಂಗಾಯಿ ಜಂಗಮಾಚರಣೆಯಲಿ ಸಂದಿರಲು ಮಂಗಳಮಹೋನ್ನತ
[ ದೊಳು ||೧೧೬||

ಎಲೆನೀರೆ ಕೇಳು ನಿನಗೇಕೆ ಭಕ್ತರಪೂಜೆ
ಯುಳವೇನು ಮೂರ್ಖತನವೇನು ನಾಮಾಡಿದೊಲು
ಬಳಿಸಂದುಮಾಳ್ಪರೋ ಅಳವೆ ನಿನ್ನಯ ಅಧಟು ಫಲವೇನು ಪೇಳುಪೇಳಾ |
ಸಲೆ ಸಿದ್ಧರಿಗೆ ಸಿದ್ಧನವನಾಥಸಿದ್ಧ ನವ
ಬಲುಸಿದ್ಧನಾದಿಭೈರವನ ಪೂಜೆಯಮಾಡ
ಲಲಸುವರೆ ಚಂಡಿನೀನೆನುತ ಜರೆದನುಮವಳ ಅಳವರಿಯದ ಜ್ಞಾನಿಯು
[ ||೧೧೭||

ಮತ್ತೆ ಮಹಲಿಂಗಿ ನುಡಿದಳು ಪುರುಷಗುತ್ತರವ
ಅತ್ಯಂತ ಚಿನ್ಮಯನು ಸತ್ಯಜಗದಾಧಾರ
ನಿತ್ಯ ನಿರುಪಮ ಶಿವಂ ಭಕ್ತರ ಸುಮನಪ್ರೇಮಿಕರ್ತೃ ಹರನಪರಿಮಿತನು |
ಚಿತ್ತಜಹರನ ನೆನದು ಸುಖಿಯಾಗು ನೀನು ನೆರೆ
ಸತ್ತುಹುಟ್ಟುವ ದೈವವನು ಭಜಿಸಿ ಹಳೆಗಾಲ
ಮೃತ್ಯುವಿನ ಬಾಯಿಗೊಳಗಾಗದಿರು ನೀನೆನುತ ಮತ್ತೆನುಡಿದಳು
[ ಲತಾಂಗೀ ||೧೧೮||

ಗಂಡಹೆಂಡಿರ ವಾದದಿಂದ ಕುಂಭದಿ ನೆಲಸಿ
ಖಂಡೇಂದುಧರನು ಪ್ರತ್ಯಕ್ಷವಾಗಲು ಭೈರ
ಗೊಂಡನು ಬೆರಗಾಗಿ ಹರನಡಿಗಳಂ ಕಂಡು ಕೊಂಡಾಡಿ ಹೊಗಳಿಬಳಿಕ |
ಹಿಂಡುದೈವಕೆ ತಾತನೆನಿಸುವ ಪರಾಪರನು
ಪುಂಡರೀಕಾಕ್ಷಪೂಜಿತ ದ್ವಿತೀಯಶಂಭು
ಮಂಡದೊಳ್ಮೆರದ ಕುಂಭೇಶ್ವರನೆ ಸಲಹೆಂದು ಖಂಡಪರಶುವ ಪೊಗಳಿದ
[ ||೧೧೯||

ಕುಂಭದ ಪವಾಡವನು ಮೆರೆದು ಸಿದ್ಧೇಶ್ವರನು
ಕುಂಭಿನಿಯುಜೋಗಿ ಜಂಗಮರಿಗತಿವಾದವಂ
ಅಂದು ಹನ್ನೆರಡುವತ್ಸರತನಕಲಿಕ್ಕಿಯಾ ಶಂಭು ತಿರುಗಿದನಾಗಳು |
ಅಂಬುಜದಳಾಯತಾಕ್ಷನ ಪೂಜ್ಯನಹ ದ್ವಿತೀಯ
ಶಂಭುಮಲ್ಲೇಶ ತಿರುಗಿದನು ಮಲೆಯಾಳದೊ
ಳಿಂಬುಪಡೆದಿರ್ದ ಚಿನ್ಮಯನಗಿರಿಯ ಸಿದ್ಧೇಶಲಿಂಗವನು ಕಂಡುಬಳಿಕ
[ ||೧೨೦||

## ನಾಲ್ಕನೆಯ ಸಂಧಿ

ಗುರುವಿನ ಮಹಾತ್ಮೆಯಿಂ ಪಡೆದು ಸಿದ್ಧೇಶ್ವರನು
ಚರಿಸಿ ದೇಶಾಂತರದೊಳ್ದೊರೆದ ಭಿಕ್ಷವತಂದು
ಗುರು ಕರುಣವಡೆದು ಮಾಯೆಯ ನಾಶಿಕಂ ತರಿದು
ತಿರುಗಿದುದನಾಂ ಬಣ್ಣಿಪೆಂ ||

ಗುರುಮೊದಲು ಮೂಲಮಂತ್ರಕೆ
ಗುರುವಾಗಮತತ್ತ್ವ ಜಪತಪಸ್ಸುಗಳೆಲ್ಲಕೆ
ಗುರುಮುಕ್ತಿ ಪಥವನ್ನೈದುವ
ಪರಮಾರ್ಥ ಮೋಕ್ಷಪದವನೀವಂ ಶ್ರೀಗುರು ||

ಕಾಯಜಹರ ಕರುಣಾಕರ ಸ್ಮರದಂಡಧರಹರ ಶಶಿತೇಜನಿ
ರ್ಮಾಯ ನಿರುಪಮನಿತ್ಯ ನಪರಿಮಿತ ವಿನೋದ ಗುರುವಾಜ್ಞೆಯಿಂ
ಮಾಯಾವಿಲಾಸ ವಿಭ್ರಮಂ ತೀರ್ಚುವಕಾರಣ ಸಲ್ಲೀಲೆಯೊಳಂತದಂ
ಮಾಯಾನಾಸಿಕವರಿದ ಸುರನಗೆಲ್ದು ಸುರಪಡೆಯಂ ತರಿದಪಂ ||

ಇಂತೆನಿಸಿ ಗುರುಕರಜಾತನಾಗಿ ಗುರುವಾಜ್ಞೆಯಿಂ ಕೊಲ್ಲಾಪುರದ
ಮಾಯಾನಾಸಿಕವರಿದು ಕರಟನಮುರಿದು ನವಕೋಟಿಸಿದ್ಧರು
ನವಸಹಸ್ರ ಸ್ತ್ರೀಯರಂ ಕುರಿಮಾಡಿತಂದನುಜ್ಜಿನಿ ಮಲ್ಲಿಕಾರ್ಜುನಂ ||

ತಿರುಗಿ ಚಿನ್ಮಯಗಿರಿಯ ಗುರುರೇವಣಸಿದ್ಧ
ವರಮೂರ್ತಿಯಕಂಡು ಹರುಷಮಿಗಿಲುಬ್ಬಿ ಮನ
ವೆರಸಿ ದಂಡಪ್ರಣಾಮುವಮಾಡಿ ತನುವೆರಸಿ ಕರುಣಾತ್ಮ ಶುದ್ಧನಾಗಿ |
ಪುರಹರನೆ ಕಾಲಹರ ಕರ್ಮಹರ ದುರಿತಹರ
ಶರಣಾರ್ತಿ ಗುರುಮೂರ್ತಿಯೆಂದು ಭಯ ಭಕ್ತಿಯಿಂ
ಮರಳ ಸಿದ್ಧೇಶ್ವರನು ಕಿಂಕುರ್ವಾಣದೊಳಿರಲು ಗಿರಿಯ ಸಂಭ್ರಮ
[ ವೆಸೆದುದು ||೧||

ಗಿರಿಯೆಸೆದುದಾ ರಾಜಕಟಕಸಂದೋಹದಿಂ
ಗಿರಿಯೆಸೆದುದಾ ಶಬರ ಶಾನೆ ಬಹುಪೂರದಿಂ
ಗಿರಿಯೆಸೆದುದಾ ಹರಿಗಳರುತರದಮುಯುದಮೇಲ್ಗಿರಿ ತಟಾಂತರದೊಳೆಸೆವ |
ಹರಿಮುಯಂ ಕರಿಮುಯಂ ಸಿರಿಮುಯಂ ಮೇಲ್ಛದುರ
ತರುಮುಯಂ ಖಗಮುಯಂ ಮೃಗಮುಯಂ ಸಿದ್ಧೇಶ
ನಿರವೆತೋರಿದುದು ಚಿನ್ಮೂಲಗಿರಿಯು ಹರುಷದಿಂ ಮೆರದು ತಾ ರಂಜಿ
[ ಸಿರಲು ||೨||

ಅತಿಘೋರ ಭೀಕರಾಕಾರದಿಂದೆಸೆವುತಿರೆ
ಪ್ರತಿಗಾನಧ್ವಾನ ತೋಟಿಗಳ ಬಹುಕ್ರೂರಮೃಗ
ತತಿಗಳ ಸಮೂಹದ ಸಗೂಢತರಮೆಸೆದು ರಂಜಿಸುತಿಹುದು ರಮ್ಯವಾಗಿ |
ಪಥದ ಸಂಕುಳದ ಪ್ರತಿನಾದವುಣ್ಮುತ್ತಿರಲು
ನುತಜೋದ್ಯವೆನಿಪ ಶಬರಾಕೃತಿಯ ಸಂಕುಳದ
ಗತಿವೆರದ ಗಣ್ಯವೆನಿಪಾರಣ್ಯವೆಸೆದುದನ್ನತ ತಪೋವನದಂದದಿ [ ||೩||

ಅರಿತರಿಯದಾರು ಸಾವಿರವರುಷವೀಪರಿಯ
ಚರಿಸಿ ದೇಶಾಂತರದೊಳುರೆ ಪವಾಡವಗೆಲಿದು
ಮರುಳತನ ವಿಪರೀತ ಸಲ್ಲದುಂತನಗೆಂದು ಮರುಳ ಮನದೊಳು
ಗುರುಕರುಣವಡೆಯಬೇಕೆಂದು ತಧ್ಯಾನದೊಳು [ನೆನೆವುತ |
ಗರಿವರ್ಗವರತು ಕರಣಂಗಳಂ ಸಲೆಬಲಿದು
ಸ್ಥಿರದಿ ಮನವಿಡಿದಷ್ಟಮದ ನುಗ್ಗೊತ್ತುತಲಿ ಗುರುವನರಸುತ ಬಂದನು
[ ||೪||

ಗುರುವೆ ಮದ್ಗುರುವೆ ಶ್ರೀಗುರುವೆ ಯನ್ನಯಕಾಯ
ಕರಣ ಕರ್ಮಂಗಳಂ ಕಳೆದು ನಿವೃತ್ತಿಯುಲಿ
ಶರೀರ ಶುದ್ಧಾತ್ಮನಂಮಾಡಿ ಗುರುಕರಜಾತನೆನಿಸುವರೆ ನೀನೆ ಮಿಗಿಲು |
ಹರನೊಳಗೆ ಗುರುವು ಗುರುವಿನೊಳ್ಹನ್ನಹರಣಮುಂ
ಇರದೊಂದುಗೂಡಿ ಪರಕಾಯವೆಂದೆನಿಸಿದಾ
ಗುರುಕರಸ್ಥಲಕೆ ಬಿಜಯಂಗೈದು ರಕ್ಷಿಸುವ ಗುರುರಾಯ ಸಲಹೆಂದನು
[ ||೫||

ಕಾಣಬರುವುದ ಪಿಡಿಯಲೊಲ್ಲದಲೆ ಮಾನವರು
ಕಾಣದುದನರಸಿ ಬಳಲುತಲಿರ್ಪ್ಪ ಬಳಲಿಕೆಯು
ತಾನಳಿದು ಭವಪಾಶದೊಳು ಸಿಲುಕಿ ತೊಳಲುತಿಹ ಕೇಣಿಗಂ ಮುಂದು
ಜಾಣ ಶ್ರೀಗುರುರಾಯ ನಿದಿರ್ಬಂದು ತೋರುತಿರೆ [ ಗೆಡದ |
ಕೇಣಿಗೊಂಡಾಮಹಾತ್ಮೆಯೊಳೊಂದಿ ಭಜಿಸುತಿರೆ
ಕಾಣಿಸೆ ಹರಬ್ರಹ್ಮರೂಪದಕೆ ಮನವೊಲಿದು ಮಾಣಿಸಿದನಾತ್ಮಜಡವ ||೬||

ಜ್ಞಾನೋದಯಂತರಂಗದೊಳು ಬೆಳಗೆಸೆಯಲ
ಜ್ಞಾನತಿಮಿರಂ ಹರಿದು ಶುದ್ಧಾತ್ಮನಾಗುತಿರೆ
ಸ್ವಾನುಭಾವಂಪುಟ್ಟಿ ಕೃತನಿಶ್ಚಯದೊಳೊಂದಿ ಹೀನತೆಯನಳಿದು ಬಳಿಕ
ತಾನೆ ಗುರುಲಿಂಗ ಜಂಗಮವಾಗಿ ಬೆರದು ಸ
ನ್ಮಾನಿ ಗುರುತೀರ್ಥಪ್ರಸಾದವನುವಿಂದರಿದು
ಜ್ಞಾನ ಬಲ್ಮೆಯುಮಂತ್ರರೂಪಾಗಿ ಬಂದು ತಾನಿಂದು ಕರಸ್ಥಲದೊಳು||೭||

ಎಂದ ವಚನವ್ವಾರ್ತೆಯನು ಕೇಳಿ ಶ್ರೀಗುರುರಾಯ
ಕಂದನಂ ತಕ್ಕೈಸಿ ಹರುಷಾಶ್ರುವಿಂದಲಾ
ನಂದಮಿಗೆ ಪೂರ್ವಾಶ್ರಮವ ಕಳದು ತತ್ಸುಖದ ಸಿಂಧುವಿನೊಳೋಲಾ
ಕೇಂದ್ರಸ್ಥಾನದೊಳು ಗುರುವಿರಲು ಶುಭತಿಥಿಯೊಳುಂ [ ಡಿಸಿ |
ಚಂದ್ರತಾರಾಬಲಗಳೊಂದಿ ಬರುತಿರೆ ಘಳಿಗೆ
ಹೊಂದುತಲಿ ಮುಹೂರ್ತಬಲರಾಶಿ ತನಗೊಡಲಾಗಿ ಬಂದ ಶಿಷ್ಯನ
[ ನೋಡುತ ||೮||

ಪಂಚಭೂತಾದಿ ಪೂರ್ವಾಶ್ರಮವ ಕಳದೊಡನೆ
ಪಂಚವಿಂಶತಿ ತತ್ವದೊಂಚನೆಯ ನುಳಿದಾಗ
ಪಂಚವಿಷಯಗಳ ಪರಿಹರಿಸಿ ಕರಣಂಗಳನು ಹಂಚುಹರಿಮಾಡುತಾಗ|
ಪಂಚಭೂತಿಯ ಪರಿಯವರ್ಣಗಳ ವಿಸ್ತರಿಸಿ
ಪಂಚಾಕ್ಷರಿಯ ಮಂತ್ರ ಮಾಲಿಕೆಯನರುಪುತಂ
ಪಂಚಮುಖದಾದಿ ಭೇದವಕಳೆಯ ವರ್ಣಗಳನುಂಪರದ ಘನವನರುಹಿ
[ ||೯||

ಬರೆದು ತೌಡಳಿದ ತಂಡುಲದಿ ಚೌಕವನಾಗ
ಅರುಹಲ್ಚತುರ್ದಿಕ್ಕಿಗಾಚಾರ್ಯ ಕಲಶವನಿಕ್ಕಿ
ಗುರುಕಲಶವೊಂದ ನಡುಮಧ್ಯದೊಳು ಸ್ಥಾಪಿಸಿಯೆ ತಳಿರ್ಪಂಚ
ನೆಲೆಗೊಳಿಸಿ ಪಣ್ಪಲಾದಿಗಳ ನೈವೇದ್ಯಮುಂ [ ಪಲ್ಲವಗಳ |
ಜಲಗಂಧ ಪುಷ್ಪಗಳ ಷೋಡಶುಪಚಾರದೊಳು
ಬಲುಹಿಂದ ಪೂರ್ವಾರ್ಧಮುಂ ಕಳೆದು ಉತ್ತರವನೆಲೆಗೊಳಿಸಿ
[ ಕುಳ್ಳಿರಿಸಿಯೆ ||೧೦

ಹಸ್ತಮಸ್ತಕಕೆ ಸಂಯೋಗಮಾಡುತ್ತೊಡನೆ
ಸುಸ್ಥಿರನಮಾಡಿ ಪದ್ಮಾಸನವ ನೆಲೆಗೊಳಿಸಿ
ವಿಸ್ತರದೊಳಾ ಲಿಂಗಪೂಜೆಗಳನನುಗ್ಗೈದು ವಸ್ತ್ರದೊಳು ಬಾಸಣಿಸುತ |
ಮಸ್ತಕಂ ಕಂಠ ಉರತಾಣಗಳನರುಪುತಂ
ತತ್ಸ್ಥಾನದೊಳು ಶಿವನಮೂರ್ತಿಯುಂ ನೆಲೆಗೊಳಿಸಿ
ಈ ಕ್ಷಿತಿಯೊಳ್ ಗುರುಲಿಂಗಜಂಗಮಾಚರಣೆಗಳ ಚಿತ್ತದಲ್ಪಿಡಿದು
[ ಮಹಿಮೆಯ ||೧೧||

ಕ್ಷೀರವಾರಿಧಿಯೊಳಿರುತಾಕಳಂ ಬಯಸುವರೆ
ಮೇರು ಮಧ್ಯದೊಳಿದ್ದು ಜಲಗರವ ತೊಳೆವರೆ
ವಾರಿಧಿಯ ತಟದಿ ಬರಗಾಲವಂ ಬಯಸುವರೆ ವೀರಶೈವಾಚಾರರು |
ಕೂರಲಗಪಿಡಿದು ಭಯಕಂಜುವರೆ ಮತ್ತೆಯುಂ
ಚಾರುಚಿಜ್ಜ್ಯೋತಿಯಿರೆ ತಮಕಂಜುವರೆ ಜಗವ
ಪಾರನೇದಿಸುವ ಲಿಂಗ ಕರದೊಳಿರುತಿರಲು ಸೇರುವುದೆ ಭವಬಂಧವು
[ ||೧೨||

ಲಿಂಗಮುನ್ನಾದಿ ವಿಡಿದಂಗ ಕಳೆಯೊಳ್ತೀವಿ
ಲಿಂಗಾಂಗ ದೃಷ್ಟಿ ಮನಮನದೊಳಂ ನೆರೆಸಂದು
ಲಿಂಗಮುನ್ನಿಂದ್ರಿಯಂಗಳ ಸುಖವನುರೆ ಸಲಿಸಿ ಸಂಗಸುಖವಡೆದಾಗಳು |
ಲಿಂಗಮುಂ ಕರಣಂಗಳೊಳು ಕೂಡಿ ಸುಖಿಸುತಂ
ಅಂಗಲಿಂಗವನೊಂದುಗೂಡಿದ ಮಹಾತ್ಮನೆರೆ
ಲಿಂಗಸುಖಿಯಾಗಿ ಮೆರವಂತಾನು ತಾನೆನಿಸಿ ಲಿಂಗಮಯವೆಂದನಭವ
[ ||೧೩||

ಈಪರಿಯ ದೀಕ್ಷಾ ವಿಧಾನವುಂ ನೆರೆತಿಳುಪಿ
ಪಾಪಪುಣ್ಯಾದಿ ಭೇದಗಳ ಪವಣುಗಳನ್ನು
ರೂಪಿಸುತ ಜಂಗಮಾಚಾರವನು ನೆಲೆಗೊಳಿಸುತಾ ಪರಮ ಚರಿತೆಗಳು |
ಸ್ಥಾಪಿಸುತ ಭಕ್ತಿ ಭೃತ್ಯಾಚಾರದನುಭವವ
ಕಾಪಟ್ಯಗಳದು ಸಮುದಾಚರಣೆಯುರುಹುತಲು
ಮಾಪತಿಯನರಿವ ಶ್ರುತಿಸ್ಮೃತಿಪುರಾಣಂಗಳನು ಗೋಪ್ಯವಾಗಿಯೆವೊರೆ
[ ದನು ||೧೪||

ನಿಂದು ಶ್ರೀ ಗುರುರಾಯುನಿಂಗೆ ವಂದನೆಮಾಡು
ತಂದು ಮುಕುಳಿತಹಸ್ತನಾಗಿ ಮುರುಳೇಶ್ವರನು
ತಂದೆ ಕರುಣಿಪುದು ಮುಂದಣ ಭಕ್ತಿಯಾಚರಣೆಯೆಂದು ಬೆಸಗೊಳು
ಮುಂದಮುತಿಯಾಗದಲೆ ತಂದು ಭಿಕ್ಷವ ನಮುಗೆ [ ತಿರಲು
ವಂದನೆಯುಮಾಡಿ ಮುಂದಿರಿಸಲುಂ ನಾವದನು
ಇಂದುಧರಗರ್ಪಿಸಿ ಪ್ರಸಾದಭೋಗದೊಳಿಹೆವು ಎಂದು ನೇಮಿಸಿಯಾಗಳು
[ ||೧೫||

ಮೂಡ ಪಡವಲು ದಕ್ಷಿಣದೊಳರಸಿ ಭಿಕ್ಷವನು
ಬೇಡಿತಂದಾ ಪ್ರಸಾದದ ಭೋಗವೆಮಗಿಂತು
ನೀಡುವುದು ಹರುಷದಿ ಮಹಾಪ್ರಸಾದವನುಣ್ಣುತಾಡುವೆವು ಸಂತಸ
ಮಾಡುವದು ಪರಮಭಕ್ತಿಯ ಶಿಶ್ರೂಷೆಯನು ನೀ [ದೊಳು |
ಬೇಡಲ್ಹೋಗದಿರುತ್ತರದ ದೆಸೆಯ ಭಾಗಕೆನು
ತಾಡಿದಂ ವಿನಯವಚನದೊಳಾಗ ಗುರುರಾಯ ಮಾಡಿದಂ ವಾಗ್ದತ್ತವ
[ || ೧೬ ||

ಉತ್ತರದಿಶಾಳಿಗತಿ ಪುಗದಿರೆಂದಿರಿ ತಂದೆ
ಉತ್ತಮಾಧಮ ಮಧ್ಯಮುಂ ವಿರಚಿಸಲುಬೇಕು
ಗುಪ್ತವಿದು ತನಗೆಂದು ಮುರುಳ ಕೈಮುಗಿದಾಗ ಬಿತ್ತರಿಸಬೇಕೆಂದನು |
ಅತ್ಯಂತ ಪ್ರೇಮದಿಂ ಬೆಸಗೊಳಲು ಗುರುರಾಯ
ನೆತ್ತಿದಂ ಪೂರ್ವಚರಿತದೊಳೋರ್ವ ಮಾಯೆಯುನು
ತತ್ವರಹಸ್ಯದೊಳು ವಾದಂಬರಲು ಪ್ರತಿರೂಪ ಮತ್ರ್ಯಕಂ ಬರಿಸಲಾಗ
[ || ೧೭ ||

ಆ ದೇವಿಬಂದು ಕೊಲ್ಲಾಪುರದಿ ನೆಲೆಸಿದಳು
ಮೂದೇವರನು ಜರೆದು ವಾದಿಗಳ ತಲೆಯರಿದು
ಬಾಧೆಗೊಳಿಸುತ ಭ್ರಮೆಯ ಪುಟ್ಟಿಸುತ ಪುರದೊಳುಂ ಪೋದುವಳದೇ
[ ನೆಂಬೆನು ||೧೮||

ಅಂತಾಗಲಾ ಮಾಯ ಪಂಥವದು ಶರಣರಿಗೆ
ಸಂತತಂ ನೀ ಪುಗದಿರೆನಲು ಮರುಳೇಶ್ವರನು
ಕಂತುಹರ ನಿಮ್ಮ ಪದವಿಡಿದು ಮಾಯೆಯ ಬಲುಹದೆಂತು ನೋಡುವೆ
ಪಂಥವನು ಕಳಲಿಚುತ ಪಾದಮುಡವೊತ್ತುತಂ [ ನೆನುತಲಿ
ಶಾಂತಿಯನು ಜಗಕೆ ಬೀರುತ ಕರುಣರಸವೆರೆವ
ನಂತಬಲ ನಿಮ್ಮ ಪದದರುಶನದ ಶಕ್ತಿಯಿರಲೆಂತಾಗಲೇನು ಬರಲಿ || ೧೯ |

ಎಂದು ಬಿನ್ನಹಮಾಡಿ ಮರುಳಸಿದ್ದೇಶ್ವರನು
ತಂದೆಯಂ ಬೀಳ್ಕೊಳುತ ಸಹಭೋಜನವನು ನೆರೆ
ತಂದಾಗ ಭಿಕ್ಷವನು ಪರಮಾಮೃತಂಗಳನು ಮುಂದಿರಿಸಿ ಬಿನ್ನಪವನು |
ವಂದನೆಯಮಾಡಿ ಗುರುವಾಜ್ಞೆಯಂ ಕೈಕೊಂಡು
ಸಿಂಧುಮಲೆಯಾಳ ಚೋಳ್ದೇಶದೊಳು ಚರಿಸುತಲಿ
ಆಂಧ್ರದ್ರಾವಿಡ ತುರುಕ ಕರ್ಣಾಟದೊಳಗೆಯಾನಂದದೊಳು ಚರಿಸುತ
[ || ೨೦ ||

ಭರದಿ ದೇಶಾಂತರವ ಚರಿಸಿ ಭಿಕ್ಷವ ತಂದು
ಗುರುವಿಗೆ ಸಮರ್ಪಣೆಯ ಮಾಡಿ ಕರುಣಂ ಪಡೆದು
ಪರಮಾಮೃತದ ಸಾರ ಭೋಜೆಯ ಪ್ರಸಾದವನು ಇರದೊಂದುಗೂಡಿ
ಗುರುವಿಗಂ ರೂಪರುಚಿಯಂ ಸಮರ್ಪಿಸುತಾಗ [ ರುಚಿಸಿ
ಕರಣವರ್ಜಿತ ನಮಸ್ಕಾರದಿಂ ಪೊಡಮಟ್ಟು
ಪರಮನೈಶ್ವರ್ಯ ತತ್ತ್ವದ ಪ್ರಸಾದವನು ತಾನಿರದೆ ಕೈಕೊಂಡು ಮುಂ
[ || ೨೧ |

---

* ಈ ಪದ್ಯದ ಪೂರ್ವಾರ್ಧ ಯಾವ ಹಸ್ತಪ್ರತಿಯಲ್ಲಿಯೂ ಇಲ್ಲ. ಕವಿ ಅರ್ಧ
ಪದ್ಯಕ್ಕೇ ಮುಗಿಸಿದ ಹಾಗೆ ಕಾಣುತ್ತದೆ. ಒಂದು ಹಸ್ತಪ್ರತಿಯಲ್ಲಿ ಮೊದ
ನರ್ಧಕ್ಕೆ ೧೮ ಎಂದಿದೆ.

ರಬರಲು ಮುಂದೆ ಕಂಡನು ತರುಗಳಿಕ್ಕೆಲದಿ
ರಹೊನ್ನೆ ತಿಲಕ ಪಾದರಿ ಕೇತಕಿಗಳಿಂದ
ರುವಂತಿ ಜಾಜಿ ಮಲ್ಲಿಗೆ ಪೂಗಳಂತೆಸೆವ ಪರಿಮಳಂ ಬೀರುವರಳ |
ರುಳಸಿದ್ಧೇಶ್ವರಗೆ ಸಾರಸುಖವೀವುತಂ
ರದೆ ತಂಗಾಳಿ ತಂಪನು ಬೀರುತಿರೆ ಮೇಲೆ
ರಮುಸುಖವಡೆದು ಪಥಸಾರದುನ್ನತಿಯೊಳುಂ ಬರುತಿರಲು ಮುಂದೊ
[ ಪ್ಪುವ || ೨೨ ||

ರವನೇಂವಣ್ಣಿಪೆಂ ರಾಯಿಶೆಟ್ಟಿಯು ಕೆರೆಯು
ರದೊಳುಂ ಶರಣಸದ್ಭಕ್ತರಿಗೆ ಮಿಗಿಲಾಗಿ
ರಹರನಪೂಜೆಯಂ ಪರಮಪ್ರೀತಿಯೊಳೊಂದಿ ದಿನಚರಿಯ ಮಾಡು
ರುಲಿಂಗ ಜಂಗಮಕೆ ತನುಮನಧನಂಗಳನು ತಿರಲು |
ರಜನಕೆ ಮೃಷ್ಟಾನ್ನದಾಹಾರವ ಸಂತತಂ
ರದೀವುತಿರೆ ಮುಂದೆ ಮುರುಳಸಿದ್ಧೇಶ್ವರನು ಬರುತಿರ್ದನಾಪಥದೊಳು
[ || ೨೩ ||

ಣ್ಣಗುಂದಿದ ಮೈಯ್ಯ ಬಡವಾದತನು ಗುಣಿದ
ಣ್ಣು ಮುರುಟಿದಕಿವಿಯು ಕೊರೆಮೂಗು ಜೋಲ್ವಾಯಿ
ಣ್ಣುಹುಗುಳಿಂದ ಕಲ್ಮಷವೆಸವ ಪುಳುಗಳಿಂ ಸಣ್ಣಿಸಿದ ಕರಕಾಲ್ಗಳಿಂ |
ಣ್ಣಾದ ಶರೀರದುನ್ನತಿ ಕಪಟಗುಣತಾಪ
ರ್ಣಾಶ್ರಮುವನರಿಯದೊಲು ಕುರುಹಕಾಣಿಸದೆ
ನ್ನುಮುರುಳೇಶನೀಪರಿಯಿಂದಲಿರೆ ನೋಳ್ಪ ಕಣ್ಣಿಗಾಶ್ಚರ್ಯವಾದುದು
[ || ೨೪ ||

ಃಪರಿಯಲ್ಮರುಳಸಿದ್ಧೇಶ್ವರನು ತೋರುತಿರ
ಾಪುರದ ಜನರು ಕಾಣುತ ಪೇಸಿ ಪೋಗುತಿರ
ಂಪೇಳ್ವೆ ಶರೀರ ಪುಣ್ಣೊಡದು ಕೀವ್‌ರಕ್ತದೊಳು ಪುಳುಗಳುಂ
ಾಪಸಂಭವಿಸಿದೊಲು ಆ ಪುರದವೀಧಿಯೊಳ [ ಸುರಿವುತಿರಲು |
ಾಪುರುಷನಿರಲು ಭಯಂಕರವಾದ ದೇಹದಿಂ
ಂಪೇಳ್ವೆ ರಾಮಿದೇವನು ಕಂಡು ಕರಮುಗಿದು ಪೋಪನಡೆ ನಮ್ಮ
[ ಮಠಕೆ || ೨೫ ||

ಅತ್ಯಧಿಕ ಪುರದೊಳಗೆ ಪ್ರೀತ್ಯರ್ಥದಿಂದಮಿಗೆ
ಭಕ್ತಿರಸಬಲಿದು ಭವಿಜನ್ಮವಂ ಕಳೆದಾಗ
ಮುಕ್ತಿಪದವರಿದು ದಾಸೋಹಜಂಗಮದೊಳಗೆ ಸತ್ಯದನುಸಾರಮಿಗಿಲು |
ಮತ್ತತೆಯ ಕಾಯವಡಲಿಚ್ಛೆಯನು ಕೆಡಿಸಿ ಶಿವ
ಭಕ್ತಿಯನುಮಾಡಬಲ್ಲರೆ ನಿರಾಭರಿತನಹ
ಭಕ್ತಿನಿರ್ಮಾಯನೆಂಬುವ ವಚನ ವಿಡಿದಾಗ ಸತ್ಯಶರಣನು ಮೆರೆವನು
[ || ೨೬

ಮಾಹೇಶ್ವರಸ್ಥಲದ ಮಹಿಮೆಯನು ಪೇಳುವೆನು
ಮಾಹೇಶ್ವರರೊಳಿವನ ನಿಲವು ಕಾಣಿಸಲವನು
ದೇಹಗುಣಗಳನರಿಯ ಕರಣಗುಣಮುನ್ನಿಲ್ಲವೂಹಿಸಲು ಪರಮುಕಳೆಯು |
ಸೋಹಭಾವದೊಳು ನೆಲೆಗೊಂಡು ಭೃತ್ಯಾಚರಣೆ
ಕೋಹಮೆಂದೆಂಬ ದ್ವೈತವನರಿದು ಪರಮಾರ್ಥ
ಸಾಹಸದೊಳುಂ ಸತ್ಯವಿಡಿದ ಪರಮಜ್ಞಾನಮಾಹೇಶ್ವರಂ ಮೆರೆದನು
[ || ೨೭ ||

ಪ್ರಸಾದಿಯೆಂಬ ಸ್ಥಲಗಳ ಮಹಿಮೆಯುಂ ಪೇಳೆ
ಹಸಿವಾಯಿತೆಂದು ಮಜ್ಜನಕೆರೆದು ತೃಷೆಯಿಚ್ಛೆ
ವ್ಯಸನಕೊಳಗಾಗದಲೆ ಪಶುಪತಿಯೊಳುಂ ಬೆರಸಿ ಮುಸುಳಗೊಡದಲೆ
ವಶಮಾಡಿ ಕಾಯಕರಣೇಂದ್ರಿಯಂಗಳನೆಲ್ಲ [ ಮಹಿಮೆಯ |
ಬೆಸುಗೆಯಳಿದೊಂಮುಖದೊಳಾಲೋಚಿಸುತ ಮುಕ್ತಿ
ಯೆಸೆದು ಪಡೆದುಂ ಶಿವನೊಳುಂ ಬೆರಸಿ ಮೆರೆವಾತನ ಸಮಪ್ರಸಾದಿ
[ ಯಹನು || ೨೮ ||

ಪ್ರಾಣಲಿಂಗಿಯ ಸ್ಥಳದ ಪಟುತರಗಳಂ ಪೇಳ್ವೆ
ಪ್ರಾಣವದು ಘನಲಿಂಗ ದೇಹವಾಲಯವದನು
ಕೇಣಿಗೊಂಡಿರುತಿರ್ಪ ಮನವೆಂಬ ಪೂಜಕನ ಕಾಣದಲೆ ಮುಂದು
ಜಾಣಗುರುವರಸಿ ಯುಪದೇಶ ಪಡೆಯದೆ ಬೇರೆ [ ಗೆಡುತ |
ಕ್ಷೋಣಿಯೊಳು ಪರದೈವ ಭಜನೆಯನು ಮಾಡುವಾ
ಕ್ಷೀಣ ಗುಣದಾಚಾರ ಬಿಟ್ಟು ನಡೆವಾತನೇ ಪ್ರಾಣಲಿಂಗಾನುಭಾವಿ
[ || ೨೯ ||

ಶರಣಸ್ಥಲದ ಮಹಿಮೆಯಿರವನಾ ಪೇಳುವೆನು
ಶರಣ ಸತ್ಯಜ್ಞಾನಿ ಪರಮಸಾದಾಖ್ಯ ನೆರೆ
ಗುರುಮಹಾತ್ಮ್ಯೆಯೊಳೊಂದಿ ಕರಣ ಸನ್ಮತನಾಗಿಯರಿವರ್ಗರಹಿತನಾಗಿ |
ಶರೀರದೊಳು ಜ್ಞಾನರತ್ನವನಿಂಬುಗೊಂಡು ನೆರೆ
ಪರಮಸುಜ್ಞಾನವೇ ಘನಮೂರ್ತಿಯೆಂದರಿದ
ಶರಣನಾಚರಿಸುತಿಹ ಪರಮಚಾರಿತ್ರವದುಯಿರೆ ಶರಣನುಂ ಮೆರೆದನು
[ || ೩೦ ||

ಐಕ್ಯಸ್ಥಲವಿಡಿದವರ ಆಚರಣೆಯನು ಪೇಳ್ವೆ
ಐಕ್ಯ ಸರ್ವಾಂಗವನು ಐದಿಸಿಯೆ ಘನಶಿವನೊ
ಳೈಕ್ಯವಿಡಿದವನು ಶಿವಲಿಂಗವಾಗಿಯೆ ಬೆಳಗುತ್ತೈಕ್ಯಪದವನು ಪಡೆವನು |
ಸೌಖ್ಯಸನ್ಮತನಾಗಿ ಗುರುಲಿಂಗ ಜಂಗಮದೊ
ಳೈಕ್ಯವಾಗಿಯೆ ಬೆರಸಿ ಬೆಳಗಿನೊಳ್ಬೇರೂರಿ
ಮುಕ್ತಿಯಂ ಪಡೆದು ಹರುಷಿಸುವಾತ ಘನದಲ್ಲಿ ಐಕ್ಯವನು ಪಡವನಾಗ
[ || ೩೧ ||

ಇಂತೆಸೆದು ಮೆರೆವ ಷಡುಸ್ಥಲದ ಮಹಿಮರುಂ
ಕಂತುಹರಪೂಜೆಯೊಳು ಸಂಪ್ರೀತಿವೆರಸಿ ತ
ಮ್ಮಂತರಂಗದೊಳು ಸುಜ್ಞಾನವೆಡೆಗೊಂಡಿಹರ ಮುಂತುಗಾಣದೆ
ಕಂತುಹರನಂ ಮರೆದು ಬೆರೆದು ಮಾಯೆಯಲಿ ಘನ [ ಮರವೆಲಿ |
ಭ್ರಾಂತಿಯೊಳು ಕಾಯದಿಚ್ಛೆಯ ತಾಮಸವನು ನೆರೆ
ಸಂತತಂ ಹರನೊಳೈಕ್ಯಂ ಪಡದು ರಾಮನಿವ ಕಂತುಹರನೆಂದರಿದನು ||೩೨||

ಗುರುರಾಯನಹುದೆಂದು ಪರೀಕ್ಷಿಸಿಯೆ ರಾಮಯ್ಯ
ಶರಣ ಕರೆಯಲು ಗುರುನಿರೂಪವನು ಕೊಟ್ಟನೀ
ಶರೀರಕಂ ಸುಖವಿಲ್ಲವರೆದ ದುರ್ವಾಸನೆಯು ಪರಿದೊಗುವ ರಕ್ತದಿಂದ |
ಸುರಿವ ಕೀವಿನೊಳು ಪುಳುಹುಟ್ಟಿ ಜುರು ಜುರಿಸುತಿದೆ
ಕರಕಾಲ್ಗಳಿನಿತು ನಡೆಯಲು ಬಾರವೆಂದಾಗ
ಮರುಳ ಮಾಯದ ಮಾತನಾಡಿದನು ರಾಮನೊಳು ಬೆರಗಹ ಮಹಾತ್ಮೆ
[ ಯಿಂದ || ೩೩ ||

ಶರಣರಾಮಯ್ಯ ಕರೆಯಲು ಮರುಳಸಿದ್ಧೇಶ
ಬರಲಾರೆನೆಂಬ ಪ್ರತಿವಾಕ್ಯಕುತ್ತರಗೊಡದೆ
ಶಿರದಮೇಲುರೆ ಪೊತ್ತು ವೀಧಿಯೊಳು ಬರುತಿರಲು ಪುರಜನಂ ಬೆರಗಾಗುತ|
ಶಿರದ ಮೇಲ್ಬಾಯೊಳಗೆ ಸುರಿವ ಜೊಲ್ ಹರಿವುತಂ
ಸುರಿವ ರಕ್ತವು ಕೀವು ಪುಳುವದರೊಳುದುರುತಂ
ಬರಲು ಮಠದತ್ತ ವರಸತಿ ಕಂಡು ಪೇಸುತಂ ಸರಿದಳಿನ್ನವನಬಿಟ್ಟು || ೩೪ ||

ಸರಿದ ಸತಿಯುಂ ಕಂಡು ಪರೀಕ್ಷಿಸದೆ ರಾಮಯ್ಯ
ಗುರುರಾಯನಂತಂದು ಕರಕಾಲ್ಗಳಂ ಕಟ್ಟಿ
ಶರೀರಮಂ ತೊಳೆದು ಮುಖಪಾವಡದೊಲೊರಸುತ್ತಲೆರಗುತಲಿ ಮನ
ಗುರುಗದ್ದುಗೆಯನಿಕ್ಕಿ ಪರಿಮಳದಳಂಗಳನು [ ಗುಂದದೆ |
ಸಿರಿಗಂಧ ಧೂಪದೀಪಗಳು ಷೋಡಶಪರಿಯು
ಹರಪೂಜೆಯನು ಮಾಡಿಯಿರದಿತ್ತು ಭೋಜನವ ಗುರುವಿಗೆ ಸಮರ್ಪಿ
[ ಸುತಲಿ || ೩೫ ||

ಮಿಕ್ಕಶೇಷವು ಉಳಿಯಲಾ ರಾಮಿತಂದೆಗಳು
ಗಕ್ಕನವರ್ಗೊಂದನೆಯ ಮಾಡ್ಯಾಪ್ರಸಾದವನು
ಕಕ್ಕುಲತೆಗಳೆದು ನಿಜಭಕ್ತಿಪೂರಿತನಾಗಿ ಆಕ್ಷಣದೊಳ್ ಸವಿದನಾಗ |
ಭಕ್ತನ ಮಹಾತ್ಮೆಗಂ ಮೆಚಿ ಘನಹರುಷದಿಂ
ಮುಕ್ಕಣ್ಣ ಹರನು ಪ್ರತ್ಯಕ್ಷವಾದನು ಶರಣ
ಸಿಕ್ಕಿದ ಪದಾರ್ಥವಮಾಡಿದ ಮನಮಹಾತ್ಮೆಯುಂ ಈಕ್ಷಿಸುತಲೊಂದೊಂ
[ ದನು || ೩೬ ||

ಶುದ್ಧವಾಯಿತು ಮರುಳಸಿದ್ಧೇಶನಂಗ ಮಿಗೆ
ಸಿದ್ಧವಾಯಿತು ರಾಮಿತಂದೆಗಳ ತನುಮನ ಪ್ರ
ಸಿದ್ಧವಾಯಿತು ಸತಿಯ ಮನ ನಾಲ್ಕು ಕಡೆಗಾಗ ಹೊದ್ದಿದಾಘನವನ್ನೈದಿ |
ರುದ್ರನಿವನೆಂದರಿದು ಶರಣಸನ್ಮುದವೊದವಿ
ಗದ್ದುಗೆಯ ರಾಮಯ್ಯನೆಂಬ ಪೆಸರಾತನಿಗೆ
ಅರ್ಧಾಂಗನೆಯ ಬಿಟ್ಟು ಪೊತ್ತೊಯ್ದನಾ ಹರನ ರುದ್ರಭೂಮಿಗೆ ಸಂತತಂ
[ || ೩೭ ||

ಮರುಳಸಿದ್ಧೇಶ್ವರನೊಳೈಕ್ಯಪದವಮಂ ಪಡದು
ಹರನ ಪರಭಾಗದೊಳು ಸ್ಥಿರವಾಗಿ ನಿಂದನಾ
ದುರಿತದುಷ್ಕೃತನಾಶವಹ ರಾಮಿತಂದೆಗಳು ಬೆರದು ಶಿವಯೋಗದೊಳಗೆ |
ಇರುತಿರಲು ಮರುಳಸಿದ್ಧೇಶ್ವರನು ಲೀಲೆಯಿಂ
ತೆರಳಿ ಕೊಲ್ಲಾಪುರಕೆ ಹೋಹ ಪಥದೊಳು ಮುಂದೆ
ಇರುತಿರ್ದರೊಕ್ಕಲಿಗರಾರುಗಳಿಯಂಗಳಿಂ ಧರೆಯನೂಳುವ ಪಥದೊಳು
[ || ೩೮ ||

ಬಂದನಾ ಹರನಲ್ಲಿಗತಿ ಒಕ್ಕಲಿಗರೂಳ್ವ
ಚಂದವನು ನೋಡಿ ಹರುಷಾಮೃತದ ರಸದೊಳುಂ
ಅಂದೋರ್ವನಂ ಮರುಳುಮಾಡಿ ಕೊಂಡೊಯ್ವೆನೆನುತೊಂದುಪಾಯುವ
ಪಿಂದಣವನಂ ನಮಗೆ ಈವುದೆನೆ ಯಾತರುಳ [ ನೆನದನು |
ರೆಂದರಿವನ್ಸತಿಗೆ ಪಡಿಭತ್ಯಯುವ ನೀವೀಗ
ತಂದಿತ್ತು ಕರೆದೊಯ್ವುದೆನಲು ಲೇಸಾಯ್ತೆನುತ ಚಂದ್ರಶೇಖರ ಹರುಷದಿ
[ || ೩೯ ||

ಗಳಿಗೆ ತುಂಬಿದ ಬತ್ತ ತೀರುವನಕವು ನಿಮ್ಮ
ನಿಳಯುವನು ತಂದುಕೊಡುವೆ ನಿಮ್ಮ ಅನುಜನಂ
ಕಳವಳದ ಮಾತಲ್ಲ ಕಪಟವಲ್ಲೆನುತಾಗ ಬಳಿಸಂದ ಬಗೆಯನರುಹೆ |
ಗಳಿಗೆ ತುಂಬಿದ ಬತ್ತಗಳು ವೃದ್ಧಿಯಾಗುತಿರೆ
ತಿಳುಹಿ ಬಾಳಿಂದವನ ಬಿಡಿಸಿ ಮುಂದಕೆ ನಡೆದ
ಚಲನೇಮ ವ್ರತಶೀಲ ಗುಂಡಯ್ಯ ಬೊಮ್ಮಯ್ಯಗಳ ನೆಲೆಯನೋಡುತಾಗ
[ || ೪೦ ||

ಓರುಗಲ್ಲಿನ ಪುರದ ವಿಸ್ತರವ ಪೇಳುವೆನು
ದಾರಿದಾರಿಯೊಳನ್ನಸತ್ರ ವರವಂಟಿಗೆಯು
ತಾರೆಗಳ ಮಿಗುತ ಸುತ್ತಲ್ನಿಟ್ಟೆಲೆಸೆವತೆಸೆ ಪೂರೈಪ ಕೊತ್ತಲಗಳು |
ಕೇರಿಕೇರಿಯೊಳ್ಸೋಮ ಸೂರ್ಯವೀಧಿಗಳೊಳಗೆ
ವಾರಸ್ತ್ರೀಯರುಗಳಿಹರ್ಪರೀಪರಿ ವಿನೋದದಲಿ
ಮಾರಹರಶರಣ ಸದ್ಭಕ್ತರಿಂದೆಸೆವುತಿಹ ಆರವೆಗಳಿಂದೊಪ್ಪುತ || ೪೧ ||

ರುದ್ರರಾಯನ ಪಿತನು ಗಣಪತಿಯು ದೇಶದೊಳು
ಶುದ್ಧ ಶೈವಾಚಾರಶೀಲವ್ರತರವರು ನೆರೆ
ಸದ್ಯಫಲಪದವ ಪಡೆದಿಹ ಯೋಗಮೂರ್ತಿಗಳು ಚೋದ್ಯವೆನೆ ಮೆರೆವರಲ್ಲಿ |
ರುದ್ರ ಪೂಜೆಯನು ಷೋಡಶಕಳೆಯೊಳುಂತೀವಿ
ಬುದ್ಧಿ ಮನ ಚಿತ್ತಹಂಕಾರದೊಳು ಸಮನಿಸದ
ನಿರ್ದೇಹವಿಡಿದ ಶರಣರು ಸಮಾಧಿಗಳಲ್ಲಿದ್ದರದನೇಂ ಪೊಗಳ್ವೆನು|| ೪೨ ||

ಆ ಪುರದ ವಿಸ್ತರವನೋಡುತಲಿ ನಡೆತಂದ
ಕಾಪಾಲಿ ಕರುಣಾಕರನು ಮರುಳಸಿದ್ಧೇಶ
ರೂಪನಡಗಿಸುತ ಮಾಯದ ವೇಷವನು ತಾಳಿ ಕಾಪುರುಷರಂತೆಸೆವುತ |
ಆ ಪೆಣ್ಣು ಪುರದುದ್ಯವನಕೆ ಬರುತಿರಲಿಂದ್ರ
ಚಾಪದೊಲು ಹಳದಿ ಹಸುರುಂ ಕೆಂಪು ಬಿಳಿದಾಗಿ
ಮಾಪವನ ಮೆರೆದುರಂಜಿಸಿ ತೋರುತಿರ್ಪುದಂ ಏಂಪೇಳ್ವೆನಿನ್ನು ನಾನು
[ || ೪೩ ||

ಬಂದು ಕೊಲ್ಲಾ ಪುರದ ಬಹಿರುದ್ಯವನವನ್ನು
ನಿಂದುನೋಡಿದನು ಗಿಳಿಸೋಗೆ ಸಪಿಲಂದವನು
ಚಂದವಡೆದಿದ್ದ ತರುಶಾಖೆ ರಂಜಿಸುತಿರಲು ಮಂದಮಾರುತ ತೀಡಲು |
ಮಾಂದವ್ಯ ಪರಿಮಳಂಗಳ ಸೊಗಸು ಬೀರುತಿರ
ಲಂದವರ ಜೆಲ್ವ ನೋಡುವೆನೆಂದು ಪುರಹರನು
ಬಂದುವನವಂ ಪೊಗುವ ಸಮಯದಿ ವಿನೋದಂಗಳಿಂದವನ ಕಣ್ಗೆ ಸೆಡುದು
[ || ೪೪ ||

ಕಾಮಹರ ಕಮಲಾಕ್ಷ ಪೂಜಿತ ಪದದ್ವಿತೀಯ
ನಾಮದಿಂದೆಸೆವ ಸಾಕ್ಷಾನ್ಮಹೇಶ್ವರಮೂರ್ತಿ
ಸಾಮಗಾನಪ್ರಿಯ ಶಾಂತನಗಣಿತಮಹಿಮ ಪ್ರೇಮಿ ಯಾನಂದಮಯನು|
ಸೋಮರವಿಕೋಟಿಪ್ರಕಾಶನೂರ್ಜಿತರಾಮ
ಭೀಮಭೀಮಾಂತಕನೆ ಸುಮನಪೂಜಿತ ನಿಗಮ
ನಾಮದಿಂದೆಸವಷ್ಟಮೂರ್ತಿ ಮರುಳೇಶ್ವರನು ಕಾಮಿತವನಕೆ ಬಂದನು
[ || ೪೫ ||

ಮಲ್ಲಿಕಾರ್ಜುನ ಮಹಿಮ ಬಹು ಸಮಯಗಳನರಿದು
ಕೊಲ್ಲಾಪುರದ ಬಹಿರ್ವನ ಮೆರದು ರಂಜಿಸಲು
ಅಲ್ಲಲ್ಲಿ ಕರವಿಡಿದ ಪದಪಂಙ್ಕ್ತಿ ಕಾಂತಿಯೊಳಗಲ್ಲಿಡಿದ ಲತೆವಲ್ಲಿಯ |
ಪಲ್ಲವದ ತಳಿರು ಪೂಮಿಡಿಗಾಯಿ ಫಲವಣ್ಣ
ಳೆಲ್ಲದೆಸೆಯೊಳು ತುರುಗಿ ಕರವಿಡಿದು ನಲ್ಮೆಯಿಂ
ದಲ್ಲಿ ಖಗಮೃಗನೆರವೆಯುಳವಟ್ಟುದೆನೆ ವನಂ ಖುಲ್ಲ ದಾನವಪುರದೊಳು
[ || ೪೬ ||

ಅಳಿಗಳನಿವಾಸ ಕೋಗಿಲೆಯ ಮನೆ ಪಾರಿವದ
ಗಳರವದ ಮಠ ಮಾರುತನ ಜನ್ಮಭೂಮಿ ಮಾಂ
ದಳಿರ ನೆಲೆ ನವಿಲನಾಟ್ಯದರಂಗ ಕಳೆವೆತ್ತು ಫಳಭಾರಗೇಹವೆಸಗು |
ಕಳಹಂಸನಿಳಯವಾಕಾಲದುಲುಹಿನ ಗರುಡಿ
ಗಿರಿಗಳೆಸವಂತ ಸದನಂ ನಿರ್ವುಗಳಗೊತ್ತು
ಎಳಲತೆಯ ಸಾಮ್ರಾಜ್ಯ ಸುಳಿವಪರಿಜನದಿ ಕಂಗೊಳಿಸಿವನ ಕಣ್ಗೆಸೆದುದು
[ || ೪೭ ||

ಎಳದಳಿರ ಬಿಚ್ಚೆಸಳ ಪಂಙ್ಕ್ತಿಯಿಂದೆಸೆವ್ರುತಿಹ
ಎಳೆಗಾಯಿ ಮಿಡಿಗಾಯಿಯರೆವಣ್ಣ ತನಿವಣ್ಣೊ
ಳೆಳೆಗೊಂಬು ಸೆಳೆಗೊಂಬು ಬಲುಗೊಂಬು ಮುಂಕೊಳಿಸಿ ಫಲಭಾರದಿಂ
ಗಿಳಿಗೆ ಮೃದುರಸವಿತ್ತು ಕೋಗಿಲೆಗೆ ಕುಟುಕಿತ್ತು [ದೊಲೆವುತ |
ಅಳಿಗಳಿಗೆ ರಸರಸಾಯನವಿತ್ತು ಸಲಹುತಂ
ಸುಳಿದ ಜನಕಂ ನಲ್ಮೆಯೊಲವಿತ್ತು ಮಾಮರಂ ಚಲುವೆತ್ತು ಮೆರದವಂದು
[೪೮ ||

ಮನಸಿಜಹರಂ ಬರಲು ಘನಸೌಖ್ಯದಾತುರದಿ
ಪನಸಾಳಿವೃಕ್ಷ ತನಿವಣ್ಗಳಂ ಪಿಡಿದಾಗ
ತರುಬಲ್ದು ತೊಳೆಕರಗಿ ಯಿನಿದಾದ ರಸಸೂಸಿ ಮನವೊಲಿದು
ಪುನರಪಿಯು ಪುಟ್ಟಿರ್ದವನಿಯೊಳುಂ ತನಿವಣ್ಣ [ಕೊಡುವಂತಿರೆ|
ನಿನಿತುಮಿಾಸಲಮಾಡಿ ಘನಮಹಿಮಗಂತಾಗ
ಪನಸೊಲಿದು ಭಿಕ್ಷವಲಸುಗಳೊಪ್ಪಿ ಕೊಡುವಂತೆ ವನದೊಳುಂ
[ಕಣ್ಗೆಸೆದುವು || ೪೯ ||

ಒಲವಿಂದ ತನಗೆ ನವಮಾಸಗಳು ತುಂಬಿದರೆ
ತಲೆಗೊಯ್ವರೆಂದು ಕಾಲಜ್ಞಾನವರಿತಾಗ
ಸುಳಿಯು ಬಲುಸುಳಿಯು ಹೊಂದದ ಪದ್ಧತಿಯೊಳಿಹ ನಳನಳಿಸಿ ಬೆಳೆದಾಗಳು|
ನೆಲಕೆ ಹೊರೆಯಾಗಿ ಬಲು ಹಳದಿ ಸೀರೆಯನುಟ್ಟು
ಎಳಗಾಯ ಬಲುಗಾಯ ತನಿವಣ್ಣನಾಂತುಮಿಗೆ
ಮಲಹರಂಗೊಲಿದು ಕೊಡುವಂತೆ ಕದಳಿಗಳಾಗ ಫಲಿಸಿ ವನದೊಳು
[ ಮೆರೆದವು || ೫೦ ||

ಅಂಬುಜವದನೆ ಮಾಯೆ ಬಹಿರ್ವನದೊಳಂತಾಗ
ಮುಂಬದಿಯ ನಾಗವಳಿ ಸಂದಿನಾ ಪೊದೆಯೊಳಗೆ
ಪೊಂಬಾಳೆ ಕಸ್ತೂರಿ ಸುಗಂಧ ದಕ್ಷತೆವಿಡಿದು ಜಂಭರಿಪುವಿನ ಸತಿಯರು |
ರಂಭೆಯೂರ್ವಸಿ ಬಳೆಯುದೋಳ್ಗಳಿಂ ಚಾಮರವ
ಶಂಭು ಸಿದ್ಧೇಶ್ವರಗೆ ಬೀಸಿ ತಳಿರಕ್ಕಿಗಳ
ನಂಬರದೊಳಂ ಸೂಸಿ ತಳಿದರೆನೆ ಪೂಗದ್ರುಮ ಗಂಭೀರದಿಂದೆಸೆದುವು
[ || ೫೧ ||

ಶರಧಿಯಂ ಕಡೆವೆಡೆಯೊಳಮೃತಕುಂಭವ ತೀವಿ
ಹರಿ ಸುರಾಸುರರ್ಗೆ ಅಮೃತಂ ಸುರೆಯು ನೀವವೊಲು
ಶಿರದೊಳಮೃತವನಾಂತು ಕೊರಳೊಳುಂ ಸುರೆಯಾಂತು ಪದಕೆ ವರ
ಪರಿಕಿಸಲು ಹರನಂತೆ ಪುರನಯನವೆತ್ತಾಗ [ ನೀವಂದದಿ |
ಸರಸಿಜೋದ್ಭವನಂತಮೃತ ಕುಂಭವ ಪಿಡಿದು
ಹರಿಗೆ ಬಲಿಧಾರೆಯೆರವಮೃತ ಗಿಂಡಿಯೊಳೊಪ್ಪಿ ಫಲಿತ ಚೆಂದೆಂಗೆಸೆದವು
[ || ೫೨ ||

ಪೊಸವನಂ ತಳಿರು ತುರುಗಿರ್ದ ವೃಕ್ಷಂಗಳೊಳ
ಗೆಸೆವ ಮಾತುಗಳನೆ ನೆನೆಸಿ ಮೆರೆವ ಘನಪೆರ್ಮೆಯಿಂ
ರಸವಾಂತು ಪೊಂಗೊಡದಿ ಬಯಿತು ತುಂಬಿದೊಲಾಗ ಮುಸುಳಿಸಿದ
ಶಶಿಧರನಿಗಂ ಸುಧಾರಸವ ನೀವಂದದಿಂ [ ಕಾಂತಿವಿಡಿದು |
ಪೆಸರ್ವಡದ ಮಾತುಳಂಗದ ಮಹೀರುಹವೊಪ್ಪಿ
ದೆಸೆದೆಸೆಯೊಳುಂ ನಿಂದುಕೊಡುವಂತೊಲಿದ್ದ ನಿಮಿಷರಿಗಂ ಸುಧೆಯನು
[ || ೫೩ ||

ವಿಷದ ಕುಂಡಂ ವಿಷದ ಆಕರವ ನೆರೆಕಳೆದು
ಜಸವಡೆದ ಕೀರ್ತಿ ಮಕರಾಕರದ ವೃತ್ತದಿಂ
ರಸವರಿತಜೀವನಂ ಜೀವನಗಳಾಧರಂ ಶಶಿಗೆ ಕಳೆಯಿಾವಂದದಿ ||
ಮಸುಳಿಸಿದ ಕಾಂತಿ ನಿರಸಂಗಳಿಗೆ ರಸವಾಂತು
ಶಶಿರವಿಯಕಾಂತಿಯುಳವಟ್ಟು ಸೋಪಾನದೊಳ
ಗೆಸದು ಸಾರಸ ಸರಸಿ ಮೆರೆದು ವಿಷಕಂಠಗಂ ವಿಷಶಿರದೊಳಿತ್ತಂದದಿ||೫೪||

ಕುಮುದನೆಲೆ ಕುಮುದಪುಟ್ಟಿದ ತಾಣವಿದು ಮೇಲೆ
ಭ್ರಮರಜೀವನ ಜೀವನಾನಂದವೆನಲಾಗ
ಸಮವಕ್ಕಿಯಾಟದೆಡೆ ಸುಮನ ಸಂಚುಳಿವೆತ್ತು ಕಮನೀಯರೂಪುವಡೆದು||
ಕಮಲಕಮಲದೊಳೊಗೆದ ಕಮಲಸಂಭವಪಾತ್ರ
ರಮೆಯರಸ ತನ್ನಳಿಯ ಸೆನಲುಂ ಸಘಾಡದಿಂ
ನಮಗೆ ಸರಿಯಾರೆಂದು ಗಂಭೀರದಿಂದ ನೆರೆ ಕ್ರಮವೆತ್ತು ಸರಸಿಮೆರೆಯೆ
[ ||೫೫ ||

ಕುಡಿನೋಟ ತ್ರಿಭುವನದ ಜಡತಾಪಹರಪದಾ
ಕುಡಿನೋಟ ಕಾವನೆರಡಸೆಯ ಶರಸಮ್ಮೋಹ
ಕುಡಿನೋಟದಿಂ ತಿಲಕವೃಕ್ಷ ನಗೆವಡೆದು ತನ್ನೊಡನೊಡನೆ ಪೂತುಫಲಿತು||
ಮಿಡಿಗಾಯಲೆಡೆಗಾಯಫಲ ವಣ್ಗಳಿಸಿತಾಂತು
ಮಡದಿಯರ ಕುಡಿನೋಟಕತಿಸಾರತೂರ್ಯಾತುರಂ
ಬಡದವೆನೆ ನೋಟಕಂ ಸೋಲದವರಾರೆಂದು ಪೊಡಪಿಯೊಳು
[ತಿಲಕವೆಸೆಯೆ || ೫೬ ||

ಹುಸಿಹಸರವಂಗೆಡಿಸಿ ಸೆಲೆಗಳಂ ವರ್ಜಿಪುದು
ಹುಸಿದೆಸೆಯ ಬಿಡಿಸಿ ಶಿರಪೋಪುದಾಕ್ಷಣದೊಳುಂ
ಹುಸಿಯುಟಮುಟದ ಗೃಹದ ವಸತಿಯು ನಿವಾಸವದು ರಸವರತಕೂಪದಂತೆ ||
ಕುಸುಮರಸವೊಸರ್ವ ಕೇತಕಿ ಪುಸಿಯನಾಡಿ ಮೇ
ಲ್ಶಶಿಧರನ ಮಕುಟಕಂ ಹೊರೆಗಾದೆನೆಂದು ತಾಂ
ಬಿಸುಸುಯ್ದು ಪುಸಿಪೊಲೆಯ ನಾಣ್ಣುಡಿಯ ಗಾದೆಯೆನಲೆಸೆದವಾ
[ ಪೊರವಳಯದಿ || ೫೭ ||

ಮೊಲೆಯು ಸಮ್ಮೋಹನಕೆ ಬಲೆಯೆನಿಸಿತೋರ್ಪುವಾ
ಮೊಲೆ ವಿಟರಮೇಲೆ ಕಗ್ಗೊಲೆಯೆನಲು ಮೆರೆದವಾ
ಮೊಲೆ ವಿಷಯದಾತುರದ ಕತ್ತಲೆವೆತ್ತು ಕಂಗೊಳಿಪ ಮೊಲೆಯಿಂದ [ಹೆಂಗಳೆನಿಪ ||
ಲಲನೆಯರು ಕುರುವಕದ ವೃಕ್ಷಮಂ ಬಿಗಿದಪ್ಪಿ
ಫಲಿತುಪೂತೊಡನೆ ಸಂತಸದಿ ನಗೆವಡೆಯಲುಂ
ಸಲೆಮೋಹಿಗಳನಪ್ಪಿ ವಲಿಯದವರಾರೆನಿಸಿ ಫಲಿಸಿ ವನದೊಳು ಮೆರೆದವು
[ || ೨೮ ||

ವಿಧುಬಿಂಬಮಂಪೋಲ್ವ ಮದನ ಮೋಹಿನಿಯರುಂ
ಅಧರಾಮೃತದ ಸುಧೆಯ ಸೋನೆಯಿನಿರಸವಸಂ
ಮುದದಿ ಮುಗುಳ್ನಗೆವೆರೆದ ತದ್ರಸವನುಗುಳಲಾ ಮುದವುಂಡುಬಕುಳವೆನಿಪ||
ಪದ ವೃಕ್ಷಫಲಿತು ಫಲವಾಗಿ ಪಾಡುತ್ತಿರಲು
ಸುದತಿಯರ ಅಧರಾಮೃತವನುಂಡು ಮುದವೆದ್ದ
ಚದುರರುಂ ಸುಖವಡೆದು ಸಮ್ಮೋಹಿಯಾದರೆನಲೊದವಿ ಬಕುಳಗಳೆಸೆದುವು
[ || ೨೯ ||

ಪಗೆಯಾದೆ ಬಳಿಕ ಭ್ರಮರಾಳಿಸಂಕುಳಕೆ ಸಂ
ಪಗೆಯಾದೆ ಮಧುಮಕ್ಷಿಕಾ ಜೀವಿತಂಗಳಿಗೆ
ಪಗೆಯಾದೆ ಕಿರುಪುಷ್ಪರಸಕೆ ರಸಮಿಗಿಲೆನಿಸಿ ಬಗೆವೊಡೆದು ತದ್ವನದೊಳು||
ಮಿಗಿಲಾಗಿ ಪಸರ್ವೆತ್ತು ವನಸಂಪಿಗೆಯದೆನಿಸಿ
ಮುಗುಳು ಬಿರಿ ಮುಗುಳರಳ್ದು ಪೂವಾದ ಚಂಪಕವ
ಪುಗಲೀಯವೆಂದು ವನ ಪೊರಗಿರಿಸಿದಂದದಿಂ ಸೊಗಸಿತಾವರವಳಿಯದಿ
[ || ೬೦ ||

ಕಾಕುತ್ಸ್ಥನರಸಿಯುಂ ದಶಕಂಠನೊಯ್ಯಲಾ
ವಾಕ್ಯಪ್ರಮಾಣನಿಷ್ಠತೆಯ ಮಾಡಿಯೆ ರಘುಜ
ಬೇಕಾದ ನದಿಸ್ನಾನ ಕ್ಷೇತ್ರದೊಳು ವಹ್ನಿಯೊಳಗಾಕೆಯನು ಬಗೆಗೆಡಿಸಲು||
ಶೋಕಾದ್ರಿಶ್ರಮದಿ ನಯನೋದಕವ ಪಿಡಿಯಲಾ
ಶೋಕತರುವೆಪುಟ್ಟಿ ಕೆಂದಳದ ಪಲ್ಲವದ
ರಾಕುಳಕೆ ಪೆಸರಾಗಿ ವನ ಕಂಗೊಳಿಸುತಿಂದುಶೇಖರನು ಬಹಸಮಯದಿ
[ || ೬೧ ||

ಮಲ್ಲಿಕಾರ್ಜುನ ಮುರುಳಸಿದ್ಧೇಶ್ವರನು ಬರಲು
ಸಲ್ಲಲಿತ ವನವೊಪ್ಪಿಮೆರೆಯಲಾವನದೊಳಗೆ
ಖುಲ್ಲದಾನವತೋರ್ಡಕ ಬೇಡಿನೀವೆಂದೆನುತ ಲಲ್ಲೆ ಮೃದುನುಡಿಯ ಭರದಿ|
ಪಲ್ಲುಗಿರಿದುಂ ಬೇಡಿಕೊಂಬಂತೆ ದಾಡಿಮುಗ
ಳಲ್ಲಲ್ಲಿ ಸಾಲುಸಾಲಿನ ತಿಂಥಿಣಿಯೊಳು ನೆರೆ
ಪಲ್ಲವಿಸಿ ಫಲಿತು ಬಾಯ್ದೆರೆದಂತೆಯಿರ್ದವು ಎಲ್ಲ ವೃಕ್ಷಂಗಳೊಳಗೆ ||೬೨||

ಮನಸಿಜಹರಂ ಬರಲು ವನತಿಂಥಿಣಿಯೊಳೊಲ್ದು
ಇನಿತಾದ ತದ್ರಸವನೊಳಕೊಂಡು ಶಿವಗೀವೆ
ನೆನುತ ಪಸುರ್ನನೆಯ ಕಹಿರ್ನನೆಯ ಬೆಳ್ನನೆಯಂದ ಘನಮುಗುಳಿನಿಂ
ಅನುವಾದ ರಸವ ತುಂಬಿಯೆ ಬಿರಿಮುಗುಳನಾಂತು [ ದೊಪ್ಪುವ |
ಘನಸಾರಮಂ ಭ್ರಮರ ಮುಟ್ಟದೊಲು ಶಿವಗೀವೆ
ನೆನುತ ಮಲ್ಲಿಗೆಯರಳು ಪೂತು ವನದೊಳಗಿರ್ದವನುಪಮನು ಬಹ
[ ಸಮಯದಿ ||೬೩||

ಇಂತು ವನವಳಯಮಂ ನೋಡುತಲು ಬರೆಮುಂದೆ
ಕಂತುಹರನಿರಲವನ ಕಾಪಿನಾಳ್ಗಳು ಕಂಡು
ನಿಂತುನೋಡಿದರವನ ಮಾಯದ ಮಹತ್ವವುಮದೆಂತು ಕಾಣಿಸದೆನುತಲಿ|
ಕಾಂತೆ ಮಹದೇವಿಯೊಳು ಸೂಚಿಸುವ ನಾವಿವನ
ತಂತ್ರ ಬಗೆಯಲ್ಲ ದೇವಿಯೊಳು ತಿಳುಹುವೆವೆನುತ
ಪಂಥಪಾಡುಳಿದು ಹೊಕ್ಕರು ದೇವಿಯಾಲಯುವ ನಿಂತು ಕರಮುಗಿದಾಗಳು
[ ||೬೪ ||

ದೇವಿ ಬಿನ್ನಹಗೈದು ಬಂದವರು ಪೇಳುತಿರ
ಲಾಮಾತ ಕೇಳಿ ಕರೆಯೆಂದೆನಲು ಬಾರದಿರ
ಲೇವೇಳ್ವೆನಸುರ ಸಂತತಿಯನ್ನು ಕಳುಹಲಾಗಾವಿಲರು ಬಂದಾಗಳು |
ಭಾವಜಾಂತಕಹರನ ಕರೆಯಲುಂ ನಸುನಗುತ
ದೇವ ಭಿಕ್ಷುಕನಾಗಿ ಕರಪಾತ್ರೆವಿಡಿದಾಗ
ಕಾವನಂ ಉರುಪಿದಕ್ಕಾರದೊಳಿತವಿಡುತ ದೇವನೊಳು ಪೊಗುವಾಗಲು
[ ||೬೫||

ಹೊರಬಾಗಿಲೊಳಗಿರ್ದ ಬ್ರಹ್ಮಕಾವಿಲನಿಂದು
ಹೆರೆಹಿಂಗದಾತನಂ ಪೊಗಲಿಯ್ಯದಲೆತಾನು
ಕರಕಂಠನೊಳು ಮಲತು ನಿಂತು ಕರವಾಳ್ಗಳಿಂ ಬಿರುಹೊಯ್ಲು ಬೀಸುತಾಗ|
ಜರದು ನಿಂದಾಗ ಬಾವಪ್ಪಳಿಸಿ ಬೊಬ್ಬಿರಿದು
ಎರಗಲುಂ ಮರುಳಸಿದ್ಧೇಶನಂ ತದಕಳೆದು
ಕರದು ಕರುಣಾಮೃತದ ಸೋನೆಯಂ ಸುರಿಯುತಿರಲರಿಯದವ
[ ಮರುಳ್ಗೊಂಡನು ||೬೬||

ಮರುಳಾದ ಬ್ರಹ್ಮನಂ ಕರೆದು ಬೆಸಸಿದನಾಗ
ಪರಮಕೃಪೆಯಿಂ ತನ್ನಿವಾಸದೊಳು ನೆಲೆಗೊಂಡು
ಇರುಹೋಗು ನೀನೆಂದು ವರವಿತ್ತು ಕಳುಹಿದಂ ಪುರದತ್ತ ಮರುಳಲಿಂಗ||
ಭರದಿಂದ ಬಂದು ಕೇತನಹಳ್ಳಿಯೆಂದೆಂಬ
ಪುರದ ಕಡೆವಾಗಿಲೊಳು ತತ್ಸುಖಂಬಡೆದು ಘನ
ಸುರಜೇಷ್ಠನಿರುತಿರ್ದ ಹರಮುಹಿಮೆವಡೆದಾಗ ಮರುಳಲಿಂಗನಕಾಪಿಲಿ
[ || ೬೭ ||

ನಡುವಾಗಿಲೊಳು ಕಾಲಭೈರವನ ಕಾಪಿನಿಂ
ಮೃಡಪೊಗಲು ಪೋಗಲೀಯದೆ ತಡದು ನಿಂದನಾ
ಘುಡುಘುಡಿಸುತಾರ್ಭಟಿಸಿ ಜಡಿದು ಖಡ್ಗವನಾಂತು ಪೊಡೆವೆನೆನುತಂ
ಕಡುಗಲಿ ಸಮರದಿಂದ ಇದಿರಾಗಿ ನಿಂದಿರಲು [ಭರದೊಳು
ಉಡುಪತಿಧರಂನಿಂದು ನಸುನಗುತ ನೋಡಿದಂ
ಜಡಮತಿಯಿವನ ಸತ್ವಸಾಮರ್ಥ್ಯವೆಂತುಟೋ ಹಿಡಿಶಾಪವೆನುತಾಗಳು
[ || ೬೮ ||

ಬೆರಗಾಗಿ ನಿಂದ ಭೈರವದೇವನಂ ನೋಡಿ
ಕರದುಕರುಣಾಮೃತವ ಮರುಳಲಿಂಗನು ನಮ್ಮ
ಹೊರವಾಗಿಲೊಳು ಕಾಪಿನಾಳಾಗಿಯಿರು ನೀನು ವರವಿದಂ ನಿನಗೆನುತಲಿ ||
ಪುರಹರಂ ಕಳುಹೆ ಬಂದನು ಪುರದ ಈಶಾನ್ಯ
ಗಿರಿಯಗ್ರದೊಳು ಪರಮಕೃಪೆವಡೆದು ಮತ್ತಿತಾ
ಸ್ಥಿರವಾಗಿನಿಂದ ಭೈರವದೇವನೊಪ್ಪಿದನು ಮರುಳಲಿಂಗನಕಾಪಿಲಿ ||೬೯||

ಒಳವಾಗಿಲೊಳುನಿಂದ ಜಟ್ಟಿಗನು ಕಾಪಿನಿಂ
ಒಳಹೊಗಲು ಪೊಗಲೀಯದೊಲು ತಡೆದುನಿಂದಾಗ
ಸೆಳೆದುಖಡ್ಗವ ಜಡಿದು ಮಲತುನಿಂತಾ ಹರನ ಖಳಶಿರೋಮಣಿ
ಅಳವರಿಯದತಿಖಳನು ಕನಲ್ದು ಧರೆಯಂ ಗುದ್ದಿ [ ನೋಡುತ ||
ಜಳದಿಸುತಲಾಯುಧವ ಸೆಳೆದು ಭೋರೆಂದೆನುತ
ಅಳವರಿಯದಾ ಮರುಳಲಿಂಗನೊಳು ನಿಂತಾಗ ಮುಳಿದುದನದೇಂ
[ ಪೇಳ್ದನು || ೭೦ ||

ಲೀಲೆಮಿಗಿಲಸುರರನು ಗೆಲಿದು ಮಾಯಾಕರ್ಮ
ಕಾಲಹರಮದನ ಪ್ರಭಂಜನ ಗಜಾಸುರನ
ಸೀಳಿದಜಿನಾಂಬರವ ನೆರೆಪೊಯ್ದು ತ್ರಿಪುರವನು ಭಾಳಾಕ್ಷಿಯಿಂದುರು
ಕಾಳರಕ್ಕಸಪಡೆಯು ಮುರಿದು ವ್ಯಾಘ್ರಾಸುರನ [ ಪುತ |
ಮೇಳಗೆಯ ಮುರಿದೊತ್ತಿದಜಿನಾಂಬವರವನುಟ್ಟು
ಜಾಲಂಧರನ ಚಕ್ರ ಬರೆದು ಶಿರವರಿದವಂ ಕಾಳುಮತಿಯುಂ ಬಗೆವನೆ
[ ||೭೧||

ಮತ್ತೆತಡದನು ನಿಂದು ಮರುಳಸಿದ್ಧೇಶ್ವರನ
ಮೃತ್ಯುವನುಕೆಣಕಿ ಬಾಳುವ ಮರ್ತ್ಯನಂದದೊಳು
ಪಿತ್ತತಲೆಗೇರಿ ಭ್ರಮೆಗೊಂಡು ಹರನೆಂದರಿಯದತ್ಯಂತ ಸಾಹಸದೊಳು
ಇತ್ತಿತ್ತ ಬಾ ಭಲರೆ ಭಾಪು ಪೋಗದಿರೆನುತ
ಕತ್ತಿಕರವಾಳ್ಗಳನು ಝಳಿಪಿಸುತ ನಿಂದೊಡನೆ
ಕೃತ್ತಿವಾಸನನರಿಯದಾ ಪರಮಪಾತಕನು ಯೆತ್ತಿಹೊಯ್ವ ಸಮಯದಿ
[ ||೭೨||

ಕರವಾಳನಾಂತು ಪುರಹರನು ನಸುನಗುತಾಗ
ಶಿರವನರಿಯಲು ಶಿರಂ ಉರುಳಿ ಬಂದೊಡನಾಗ
ಮರುಳ ತಡೆಯಲು ಹರನು ವರವಿತ್ತನಾಶಿರಕೆ ಪುರಕೆನಡೆಯನುತಾಗಳು|
ವರವಿತ್ತು ಕಳುಪೆ ಶಿರಬಂದುದಾ ಪುರಹರನ
ಪರಭಾಗದೊಳು ನಿಂದು ವರವನಂ ಪಡೆದೊಡನೆ
ಮರುಳಸಿದೆ ೀಶ್ವರನ ಕಾಪಿನ ತಳವಾರನೆನಿಸಿದನು ಯಾಜಟ್ಟಿಗಾ ||೭೩||

ಮೂರು ಬಾಗಿಲು ಕಳೆದು ಹೊಕ್ಕನಾ ಪುರಹರನು
ಗಾರುಡಾಂಗದ ಕಾಪಿನಾಳ್ಗಳಂ ಗೆಲಿದವನು
ಸೂರೆಹೋಯಿತು ನಮ್ಮ ಪುರವೆಂದು ಗಜಬಜಿಸಿ ದೂರಿದರು ಮಾಯಿ
ಮಾರಿದಳು ಮನವನೀ ವಿಧಿಯಾಯಿತೆನುತಾಗ [ ಗಾಗ|
ಹೇಳಿದಳು ದುಗುಡವನು ತಾರಕ ಗಜಾಸುರನು
ಧೀರದಕ್ಷಬ್ರಹ್ಮ ಮೊದಲಾದರಂ ದುಡುಪಿದಂತಸುರೆಯೆನುತ ಸಾರೆ ||೭೪||

ನವಕೋಟಿ ಸಿದ್ಧಘನಸಿದ್ಧಿಯಂ ಪಡದವರು
ಯುವತಿಯರದೊಂಬತ್ತು ಸಾಸಿರದ ಸತಿಯರುಂ
ಕಪಿಲವರ್ಣದ ಕಾಳರಕ್ಕಸಿಯ ಹಿನ್ನೆರದು ಲವಲವಿಕೆಯಿಂದಲೊದಗಿ |
ವಿವಿಧಾನು ಮಂದಮತಿಯಾಗಿ ಭವನೆಂದರಿಯ
ದವಿವೇಕಿಗಳು ನೆರದು ದೇವಿ ಬೆಸನೇನೆನುತ
ಭವಹರನ ಸುತ್ತವಳಯದೊಳು ನಿಂದರು ನೋಡಿ ಕವಿದರುಂ ಮುಂದು
[ ವರಿದು ||೭೫||

ನಸುನಗುತ ನೋಡಿ ಪುರಹರ ತನ್ನ ದೃಷ್ಟಿಯೊಳು
ಶಶಿಕಿರಣ ಸೋಂಕೆ ಶಾಂತಿಯ ಕಲ್ಗಳೊಸರ್ವಂತೆ
ಶಶಿವದನೆಯರ ತನುಮನಂ ಸೂಸಿ ಕರಗಲಾ ವಿಷಹರಿದು ಶಾಂತಿ ಪುಗಲು|
ಹುಸಿಹುರುಡು ಕಪಟ ವಟಮುಟ ಹರದು ಮತ್ತಾವ
ಮುಸಕಗುಂದಿತು ಜಾರಿಹೋಯಿತಾ ಅರಿವರ್ಗ
ವಿಷಯುಮುಮತೆಯ ಭ್ರಮೆಯನಳಿದು ಮತ್ತಾದರದಿ ಯೆಸೆದರಾ ವೀಧಿ
[ ಯೊಳಗೆ ||೭೬||

ಮರುಳ ಸಿದ್ಧೇಶ್ವರನ ಕಾಂತಿ ನೆರೆ ಮುಸಗುತಿರೆ
ತರಳೆಯರದೊಂಭತ್ತು ಸಾಸಿರದ ಸತಿಯರುಂ
ವಿರಹಾನಲಂಬೆತ್ತು ಶರೀರವುಂ ಮರದೊಡನೆ ತುರಿಯಕೊಳಗಾಗಿ ಬಳಿಕ |
ಸ್ಮರ ಬಾಣದುರಿ ತಾಪದೊರೆಯೊಳುಂ ಮುಳುಗುತಂ
ಇರದಟ್ಟಿ ಪಿಡಿವೆನೆಂಬಾತುರವಡೆದರಾ
ಪರವಶಂಗೈವ ತರಳೆಯರ ವಿರಹಾಂಕುರಂ ಮರೀಚಿಕಾಜಲದಂದದಿ||೭೭||

ಶಶಿವದನೆಯುರು ಶಂಖದುರುಕೊರಳ ಸತಿಯರುಂ
ಬಿಸಜಾಕ್ಷಿಯರುಮೆಸವ ಕಮಲಗಂಧಿನಿಯರುಂ
ವಿಷರುಹಾನನೆಯರುಂ ಮೃಗಮದದ ಗಂಧದಿಂದೆಸೆವ ಸಾರಸಗಮನದ|
ವಿಷಲೋಚನೆಯರು ಭ್ರಮರಾಳಿಕಂ ಬೆತ್ತಾಗ
ಶಶಿಮುಖಿಯರುಂ ಶುಕಪಿಕದ್ವಯದ ನುಡಿಯರುಂ
ಎಸೆದು ನಿಂದರು ಮರುಳಸಿದ್ಧೇಶ್ವರನ ಸುತ್ತಪಸರವಿಡಿದೊಪ್ಪುವಂತೆ||೭೮||

ಉಟ್ಟಸೀರೆಗಳುಚ್ಚಿ ಬಿದ್ದವಾಧರೆಯೊಳಗೆ
ನಟ್ಟದೃಷ್ಟಿಯನುಳಿದು ತಿರುಗಲರಿಯದು ಮನಂ
ಮುಟ್ಟಿತಾ ಮರುಳಸಿದ್ಧೇಶ್ವರನ ಕಾಯುವನು ತಟ್ಟುಗಿದವೇನೆಂಬೆನು|
ಬಟ್ಟಮೊಲೆಗಂ ಕುಬಸವಿಡದೆ ಮುಗುಳ್ನಗೆಯಿಂದ
ಲಟ್ಟಹಾಸದಿ ತೊಡೆಗಳಂ ಅಲುಗುತೊಡನಾಡಿ
ಬಿಟ್ಟಮಂಡೆಯ ಕುರುಳ್ಗಳಂ ದೇಹದೊಳು ಸುತ್ತಿ ಶ್ರೇಷ್ಠಗೊಂಡೈದಿಬರಲು
[ ||೭೯||

ಬಂದೊಂದು ಭಾವವಳವಡಲು ಸತಿಜನಕಂದು
ಕೆಂದಾವರೆಯ ತಳಪುಗಳ ಸಾರರಸ ಸೂಸೆ
ಮಂದಮಾರುತನು ಸೌಗಂಧ ಬಂಧುರವಿಡಿದು ಸಿಂಧುರಾಕೃತಿಗಮನದಿ|
ಕುಂದರದನೆಯುರ್ಕಾಂತಿ ಯೆಣ್ದೆಸೆಯ ಬೆಳಗುತಿರೆ
ಮಂದಗತಿವೆರದ ನುಣ್ದೊಡೆ ಬಟ್ಟದೊಡೆ ರಂಭ
ದಿಂದೆಸೆವತೊಡೆ ಕುಂಭಿಕರದಿಂದಲೆಸವವರು ಬಂದರಾ ಮರುಳನೆಡೆಗೆ
[ ||೮೦||

ನಡೆಯ ಚದುರಿಂಗೆ ಸಾರಸ ತಗ್ಗಿ ಮುಗ್ಗಿದುವು
ಉಡಿಯ ಕಾಂಚಿಯದಾಮುವಡರೆ ನೂಲ್ಸಡಿಲಲುಂ
ನಡುಮಿಳಿರೆ ಕುಚವಲುಗಲೆಡೆಯಾಎಕ್ಕಸರವಡನೊಡನದಲ್ಲಾಡುತ|
ಮುಡಿಗಳೊಲದಾಡೆ ಸೂಸುವ ಕಂಪಿನರಳ್ಗಳುಂ
ಪೊಡರೆ ನಡೆದರು ತಳಿರಡಿಯ ಮೆಲ್ಲಡಿಗಳಿಂದ
ಮಡದಿಯರು ನಟನೆಯಿಂ ಕಳಹಂಸಗಮನೆಯರು ನಡೆದರಾ ಮರುಳ
[ ನೆಡೆಗೆ ||೮೧||

ಎರಳೆಗಂಗಳ ಕಾಂತಿ ಬೆಳಗಲೆಣ್ದೆಸೆಗಳಂ
ಎಳೆವಳ್ಳಿಯಾಂತ ನಳಿತೋಳ್ಗಳಂಚಿರದಾಡೆ
ಬಿಳಿಯಂಬರದ ಕಾಂತಿ ತಳಪು ಬೀರುತಿರಲು ಜಲಧಿಮೇಲ್ವರಿವಂದದಿ |
ಎಳೆವೆಣ್ಗಳೊಲಿದು ಬಂದರು ಚೆಲ್ವು ಬೀರುತಂ
ಸೆಳೆನಡುವಿನಸಿಯನಡುವಿನ ಸಣ್ಣನಡುವಿನಿಂ
ದೊಲಿವ ನಡುವಿನ ವಪ್ಪವಿಡಿದ ಸತಿ ಜನರುಗಳು ಬಳಸಿದರು ವಳಯದಿ
[ ||೮೨||

ಎಳೆಮಿಂಚಿನಂದವನುಪೋಲ್ವ ತನುರುಹಕಾಂತಿ
ಝಳಪಿಸುತ ಮೇಲ್ವರಿದು ಬಂದು ಮುಸುಕುವತೆರಂ
ದಳದುಳಂಗಳನಾಂತು ಪಸರಿಸುತ ಬಂದರೆನೆ ಬಳಿಸಂದು ಸಮುದೃಷ್ಟಿಯಿಂ|
ಜಲಜಾತನಯನೆಯರು ತಳಪುಗಂಗಳೆಯರುಂ
ಅಲರುಗಂಗಳ ಕೂರ್ಮೆಗಣ್ಣ ಬೆಳತಿಗೆಗಣ್ಣ
ಎಳೆಮೃಗದಗಣ್ಣ ಮೀನ್ಗಣ್ಣ ಭಾವೆಯರಾಗ ಬಳಸಿನಿಂದರು ಮರುಳನ
[ ||೮೩||

ಸುಲಲಿತ ವಿಲಾಸವಳನಡಲು ವಿಭ್ರಮದಿಂದ
ಸೆಳೆನಡುಗಳಲ್ಲಾಡೆ ಕಳೆವೆತ್ತುಕಾಂತಿರಸ
ವೆಳಸಿ ಪಸರಿಸಿ ತನುತ್ರಯುಗಳಿಂದೊಲದಾಡೆ ಜಲರುಹದ ಕುಟ್ಮಲಗಳ |
ನೆಲೆಯಾಂತ ಮೊಲೆಯುರುಂ ಬಟ್ಟಮೊಲೆ ಮುಗುಳ್ಮೊಲೆಯು
ಕಲಶಮೊಲೆಯರು ಕರ್ಕಶಂಗಳಾಮೊಲೆಯಾಂತು
ನೆಲೆಮೊಲೆಯ ಲಲನೆಯರು ಬಂದು ಮುತ್ತಿದರಾಗ ಮಲಹರನ ಸಮ್ಮುಖ
[ ದೊಳು ||೮೪||

ಅವಯವಂಗಳ ಚೆಲ್ವನವಗವಿಸಿ ತನುಕಾಂತಿ
ಕವಿಯೆ ಮಂಡಲಪ್ರಭೆಯನೊಳಕೊಂಡು ನಿಂದವೆನೆ
ಕವಿದರಮೃತದ ಸಾರಮಂ ಸುರಿದು ಪರಮಾಮೃತದ ಸುಡಿಯುಸಾರ
ಯುವತಿಯರ ಮೆಲ್ನುಡಿಗಳಿಂತೊಪ್ಪಿ ಮೆರೆದವಾ [ ಮಿಗಿಲು |
ಪವಳವಾಯಂ ಮಿಗುವ ತೊಂಡೆವಣ್ದುಟಿಯರುಂ
ನವಪಲ್ಲವದ ತಳಿರ್ಗಳೆಳೆವರೆಯುದುಟಿಯರುಂ ಬಳಸಿಮುತ್ತಿದರಾಗಳು
[ ||೮೫||

ತರುಣಿಯರು ನೆರೆದಿರಲು ಸುತ್ತುವಳಯದೊಳಾಗ
ಮುರುಳಸಿದ್ಧೇಶ್ವರನೋಳ್ ಸರಸಸವಿಯಿಂದೊದಗಿ
ಪರಿಪರಿಯ ಕಾಂತಿ ಪ್ರಭಾರುಚಿಗಳಿಂದೊಪ್ಪಿ ವಿರಹಂಗಳಾತುರದಲಿ |
ಪರವಶಂಗೈದು ಕಾಮಾತುರದಲಾ ಸುಕ್ಕು
ಗುರುಳ ಸುಳಿಗುರುಳ ಬಂಬಲ್ಗುರುಳ ಭ್ರಮರಾಳಿ
ಗುರುಳ ತೊಂಗಲ್ಗುರುಳ ನೀಲಾಳಿಗುರುಳೆಯರು ಮುರುಳನಂ ಪಿಡಿದ
[ ರಾಗ ||೮೬||

ಮಡದಿಯರ ಕಾಂತಿಯಾವರಿಸಿ ಸಿದ್ಧೇಶ್ವರನ
ಕುಡಿನೋಟವರಿಯೆ ಹರಿದುದು ಕಾಂತಿರಸವಾಗ
ತಡವರಿಸಿ ಬಿಡದೆ ಮುತ್ತಿತು ಮತ್ತೆ ಸೈವರಿದು ಜಡಿದಡಸಿ ಪಿಡಿವೆನೆಂದು |
ವಡನಾಂತು ಬಂದ ಸತಿಯರು ಬೆರಗುವಡೆದಾಗ
ನುಡಿಸಲಮ್ಮದೆ ಮುರುಳಗೊಂಡವ್ರೋಲಿರ್ದರಾ
ಮೃಡನ ಸಾಹಸ ಶೌರ್ಯವೆಂತುಟದ ನೋಡಿರೆ ಪಿಡಿಯಲಡಗುವನೆಂತುಟೊ
[ ||೮೭||

ಒಂದೊಂದು ಭಾವವಳವಡಲು ಸತಿಜನಕಂದು
ಚಂದ್ರಶೇಖರನು ಗಹಗಹಿಸಿ ಮುಗುಳ್ನಗೆಯಿಂದ
ಬಂದಸತಿಯರ ಬತ್ತಲೆಯಮಾಡಿ ಕುಹಕೋಕ್ತಿಯಿಂದ ಹಾಸ್ಯಾನುರಸದಿ|
ಸೌಂದರ್ಯ ಕಾಂತಿ ಕಳೆ ಭಾವವಳವಡೆ ಕಂಡು
ಹಿಂದಹತ್ತಿತು ಸ್ತ್ರೀಕದಂಬ ಬಹುವಿಧದಿಂದ
ಕಂದಿದಾನನ ತಿರುಗುವಾಲಿಸು ವಿಲಾಸಳಿದು ಮಂದಗತಿಗಮನದಿಂದ
[ ||೮೮||

ಈ ಪರಿಯ ಸತಿಜನರ ವಿರಹಾಂಕುರವ ಕಂಡು
ಕಾಪಾಲಿಧರನವರ ಸಂತೈಸಿ ಜಂಗಮ
ರೂಪನಳವಡಿಸಿ ಕರಪಾತ್ರೆಲಾಕುಳ ಕೋಲ ತಾಪಿಡಿದು ಮುಂದೆನಿಂದು ||
ಕಾಪಟ್ಯವೆರಡು ಕಂಗಳಮರೆಯ ವಿಶ್ವಮುಖ
ರೂಪನಪರಾಂಗ ಬಂದನು ಭಿಕ್ಷುವೇಷದಿಂ
ತಾಪಸಗುಣಂ ಶಿವಂ ಸಿದ್ಧದಯೆಧರ್ಮನುತ್ತಾಪುರುಷ ಸ್ವರಗೈಯಲು
[ ||೮೯||

ಭಿಕ್ಷುಕನ ನುಡಿಗೇಳಿ ನಡೆತಂದು ಮಾಯೆಘನ
ಭಿಕ್ಷುಕನ ಮುಖನೋಡಿ ಮುಗುಳ್ನಗೆಯ ಕಾಂತಿರಸ
ವೀಕ್ಷಿಸುತ ಹೃತ್ಕಮಲಮಧ್ಯದೊಳಗಾಗುತಂ ಉಕ್ಕುವಾ ಹರುಷಮಿಗಿಲು|
ತಕ್ಷಕನು ಕಾಳಕೂಟಂ ಹಾಳಾಹಳವೆನಿಪ
ಅಕ್ಷಯದ ಸಿಂಗಿ ಘನಸಿಂಗಿ ವಾಸುಕಿಯಾದ
ವತ್ಸನಾಭಕ ನೀಲಕಂಠ ಕರ್ಕಟಗಳನು ಕರ್ಕೋಳ ಮೊದಲಾದವ ||೯೦||

ಮೊಗೆದು ಮೂಗಂಡುಗದ ವಿಷಯನೆಲ್ಲವನೊಂದು
ಹಗೆಯದೊಳು ತುಂಬಿ ಬೈಚಿಟ್ಟು ಬಾಸಣಿಸಿದ್ದ
ಹಗೆಯಮುಸುಕಂ ತೆರೆಯಲು ಉರಿಗಿಚ್ಚು ಕರ್ಬೊಗೆಯು ಚಿಣಿಚಿಟಲ್
ಅಣುಮಾತ್ರ ಶಿವನೆನಹಿನಣಿಮಾದಿ ಸಿದ್ಧರನು [ ಚಿಟಿಲೆನುತಲಿ |
ಹಣಿಕವಾಡುವದ ಹಸನಂ ಕೆಡಿಸಿ ಮತ್ತವರ
ತೃಣಕೆ ಬಗೆಯದ ವಿಷವಸಟ್ಟುಕದಿತಾ ತಂದು ಉಣುಯೆನುತ ನೀಡು
[ ತಿರಲು ||೯೧||

ನೀಡುತಿರೆ ಭಿಕ್ಷವನು ಊಡುಕತಿಚಪ್ಪರಿದು
ನೀಡುಮತ್ತಂ ನೀಡು ಹಸನಾಯ್ತು ಭಿಕ್ಷವಿದ
ಮಾಡಿದವರಾರು ಕೂಡಿದದಾರು ಪೇಳಲಿದ ನೋಡಲಚ್ಚರಿವಡದುದು |
ಜೋಡಿಸಿದ ವಿಷವಿದುಂದಾವನಿಂದಾಯಿತೆಲೆ
ಗಾಡಿಕಾತಿಯೆ ಪೇಳು ಘೋರತರ ವಿಷವಿದನು
ಊಡಿದೆಲೆ ಕೇಡುಗಾಲವ ಬಯಿಸಿ ಬಂದು ನೀನೋಡು ನಮ್ಮಯ ಸತ್ವವ
[ ||೯೨||

ತುಂಬಿರ್ದ ವಿಷವನೆಲ್ಲವನೊಂದು ನಿಮಿಷಕಂ
ಶಂಭು ಸಿದ್ಧೇಶಸುರಿದನು ಗುರುವಿನಾಜ್ಞೆಯಿಂ
ದಂಬುಜಾನನೆ ನೀಡು ನೀಡು ಮಿಗಿಲಾದುದನು ಉಂಬೆನಿದ ದಣುವಿಲ್ಲದೆ||
ಅಂಬಿಕೆಯ ಮುಖನೋಡಿ ಶಂಭು ಸಿದ್ಧೇಶ್ವರನು
ಕಂಬುಗ್ರೀವನೆಯಾಗಿ ಕುಣಿದು ಕುಣಿದಾಡುತಲಿ
ತುಂಬಿಗರಿಯಾದ ಚಂಪಕಕೆಣೆಯ ನಾಸಿಕವ ಶಂಭು ಸಿದ್ಧೇಶನರಿದ ||೯೩||

ಮೂಗಕೊಯ್ದನು ಮಾಯನಾಗ ಸಿದ್ಧೇಶ್ವರನು
ಜೋಗಿಣಿಯರೆಲ್ಲ ಮುತ್ತಿತು ಮತ್ತೆ ಸೈವರಿದು
ಕೂಗಿ ಬೊಬ್ಬೆಯನಿಕ್ಕಿ ಜೋಳಿಪರಿದಾಡುತಿರೆ ಬೇಗ ಕರಟನಿಗುಸಿರಲು |
ಆಗ ನವನಾಥಸಿದ್ಧರುಗೂಡಿ ಕರಟನೆರೆ
ತಾಗಿ ಸಿದ್ಧೇಶನೊಳು ಯುದ್ಧವನು ಮಾಡುತಿರೆ
ಶ್ರೀಗುರು ನಿರೂಪಬಂದುದು ಮರುಳಸಿದ್ಧೇಶನಾಗ ಧ್ಯಾನಿಸಿದನಂದು||೧೪||

ಗುರುನಿರೂಪವನಾಂತು ಮರುಳಸಿದ್ಧೇಶ್ವರನು
ಕರಟನೊಳು ಯುದ್ಧವನು ಮಾಡಿ ಕರವಾಳ್ಗಳಿಂ
ಸುರಗಿಯಂ ಹೊಯ್ದಾಡಿ ಮಿಗಿಲುಕಾದುತಿರೆ ಸುರರು ಪೂಮಳೆಗರೆವುತ |
ಪರಿಪರಿಯ ಬಂಧದಿಂ ಪರಿಗಲುಬ್ಬಣದಿಂದ
ಕರಟಮರುಳರಪಾಡು ಪಂಥದಬ್ಬರದಿಂದ
ಉರಿಮುಸಗಿ ಕರ್ಬೊಗೆಯ ಕಿಡಿಸೂಸುತಿರೆ ಮೇಲೆ ಘರಿಲುಘರಿಲೆಂಬ
[ ಖಣೆಯಿಂ ||೧೫||

ಮತ್ತೆರಗಿ ಹೊಯ್ದಾಡಿ ಕತ್ತಿ ಕರವಾಳ್ಗಳಿಂ
ದಿತ್ತರದ ಪಯಪಾಡು ದಂತಿಯುಚ್ಚರಿಯೊಳಗೆ
ಬತ್ತೀಸಾಯುಧಗಳಲಿ ಪೊಯ್ದಾಡಿ ಮೇಲ್ಮೆಯಣ ಪುತ್ರಿಕೆಯೊಳ್ಮಣಿದು
ಡೊಕ್ಕರದೊಳೊಂದೂಗುತಂ ಅತ್ತಿತ್ತ ಪೊಗದೊಲೊದ [ ಕೂಡೆ |
ಗುತ್ತಲುಂ ಪೊಯ್ದಾಡಿ ಪರಿಪರಿಯ ಬಗೆಯಿಂದ
ಕಕ್ಕಸದ ಕದನಕಾರ್ಯಗಳಿಂದ ಕಡಿದಾಡಿ ಸೊಕ್ಕಳಿದು ನಿಂದು ಬೇಗ
[ ||೧೬||

ಆಯುಧಗಳು ತೀರಲೊದಗುತ ವಿಡಾಯದೊಳು
ಕಾಯಜಾಂತಕ ಕರಟರೊಳಪೊಕ್ಕು ತಿವಿದಾಡಿ
ಹಾಯೆನುತ ಹಾರಿ ಕರಟಂ ತಿವಿದ ಮುಷ್ಟಿಯನುಪಾಯದಿಂದ ಪರಿಹರಿ
ಮಾಯಾಕೋಳಾಹಳನು ಮರುಳಸಿದ್ಧೇಶ್ವರನು [ ಸುತ |
ನೋಯದೊಲು ನಸುತಿವಿಯೆ ಕರಟನಸುವಾಸರಿಸಿ
ಬಾಯೊಳುಕ್ಕುದು ರಕ್ತ ಶೋಣಿತಧಾರೆ ಪರಿದಾಯುಧಂ ಸರಿಸಿನೆಗೆಯೆ
[ ||೧೭||

ಮರುಳಸಿದ್ದೇಶ್ವರನ ಯುದ್ಧ ಕಂದತಿಮೆಚ್ಚಿ
ಸುರರು ಪೂಮಳೆಗರೆಯೆ ದುಂದುಭಿಗಳುಂ ಮೊರೆಯೆ
ಪರಿದು ಶಾಕಿನಿ ಡಾಕಿನೀ ಭೂತಗಳು ನೆರೆದು ಸುರಿದುರಕ್ತವನಾಗಳು ।
ಮರುಳನಂ ಕೊಂಡಾಡಿ ಪರಸುತಿರಲಾಮೇಲೆ
ಕರಟನಂ ಶಿರಕಾಲ್ಗಳರಿದು ಮಾಂಸಂಗಳಂ
ಪರಿಪರಿದು ಖಂಡದಿಂಡೆಯ ಕರುಳ್ಗಳೆಲ್ಲವಂ ಇರದುಚ್ಚಿತೆಗೆದು ಬಳಿಕ
[ ||೯೮||

ಶರೀರಮುಂ ದಿಂಡುಗೈಯುತ ಶುದ್ಧವಂ ಮಾಡಿ
ನರದ ಸೇಣುಗಳಿಂದ ಬಲಿದಾಯುತನಮಾಡಿ
ಕರದಲಿಹ ಕುಡುಗಳಿಂ ಕರಡೆಯಂ ಬಾರಿಸುತ ಮರುಳ್ಗಳಂ ಕುಣಿಸು
ಇರದಾದಿಶಕ್ತಿಯನು ತನ್ನಿವಾಸಕೆ ಕಳುಹಿ [ ತೊಡನೆ ।
ಪುರದ ಹೆಂಗಳ ಭಂಗಬಡಿಸಿ ಹಾಸ್ಯಾತುರದಿ
ಮರುಳ ತಿರುಗಿದನು ನವನಾಥಸಿದ್ಧರನೆಲ್ಲ ಕುರಿಮಾಡಿ ತಾ ಸೋವುತ
[ ||೯೯||

ಬೆನ್ನೆಲುವ ಕಿತ್ತು ವೀಣೆಯಕೋಲನನುಗೈದು
ನನ್ನಿಯಿಂ ಸ್ತನವೆರಡ ಕೊಯ್ದು ಕಾಯಂಬಲಿದು
ಕಿನ್ನರಿಯ ಮಟ್ಟಿಗಂ ಪಲ್ಗಳಂ ಸಮುಕಿಟ್ಟು ಇನ್ನು ನರತಂತಿವಿಡಿದು ।
ಚೆನ್ನಾದ ಸಪ್ತಸ್ವರವೀಣೆಯೊಳು ಕೈಗೂಡಿ
ಪನ್ನಗಾಭರಣ ಬಾಜಿಸುತ ಮೆಲ್ಲಡಿಯಿಡುತ
ತನ್ನಿವಾಸಕೆ ತಿರುಗಿ ಮರುಳಸಿದ್ಧೇಶ್ವರನು ಚೆನ್ನೆಯರು ಕೂಡಿ ಬಳಿಕ
[ ||೧೦೦||

ಕೈಯ ಕರಪಾತ್ರೆಗಂ ಮುಚ್ಚಿರ್ದ್ದ ಪಾವುಡೆಯ
ಸ್ತ್ರೀಯರಿಗೆ ಚಿಗಿಚಿಗಿದು ಉಡಿಯೆನುತ ಕೊಟ್ಟಾಗ
ಮಾಯದ ಬಲೆಯನಿಕ್ಕಿ ಮರುಳುಮಾಡುತ ಮೇಲೆ ನೋಯದೊಲು
ಕೈಯ ಕತ್ತಿಯನಲ್ಲಿ ಹಾಕಿ ಘನಲಿಂಗವನು [ ನಡೆಸುತಾಗ ।
ಪಾಯದಿಂ ಬಲಿದು ಕಾಳ್ಕುಜ್ಜುನೆಂದೆಸರಿಡುತ
ಮಾಯಕಾರನು ಮೆರದನಾಪುರದ ವರ್ಣನೆಯ ಪೇಳುವರದಾರಿಗಳವು
[ ||೧೦೧||

ಪಶ್ಚಿಮವು ವಾಯುದಿಗ್ದೆಸೆಯಲೊಪ್ಪುವವಾರ್ಧಿ
ಭತ್ಸ ರೌದ್ರಂ ಶಾಂತಿರಸವೆರದು ಘೂರ್ಮಿಸುತ
ಮತ್ಸ್ಯಕರಿಮಕರಕರ್ಕಟತಿಮಿಂಗಳು ಬಹಳ ನಿಶ್ಚಪರಿತಗುಳ್ದೀಳುವಾ |
ಕಚ್ಛಪ ಕಾರಂಡ ನಕ್ರಶೈವಲ ನಿಕರ
ದಾಶ್ಚರಿಯ ಭಂಗಂತರಂಗ ಕಿರುದೆರೆವಳಿಯೊ
ಳುಚ್ಚವಸುರತ್ನ ಜಲಕಣ ಬುದ್ಬುದಾಕರವನೆಚ್ಚರಿಸಿ ನದಿ ಮೆರೆದುದು
[ ||೧೦೨||

ಶರನದಿಯ ತೀರದೊಳು ಕಾಳ್ಕುಜ್ಜಿನಿಯು ವಪ್ಪೆ
ಪರಮತತ್ವದ ಕೋಟಿ ಪರಿಪೂರ್ಣತೆಯಿಂದ
ಪರಮಾರ್ಥದಾಳ್ವೇರಿ ಪರತರದ ವಳಯದಿಂ ನಿರುಪಮನಿತ್ಯವೆಸೆವ |
ಪರಮ ಆನಂದರಿರುತಿಹ ನಿತ್ಯದುಪ್ಪರಿಗೆ
ನಿರವಯರು ನಿಶ್ಚಿಂತ ನಿರ್ಲೇಪಲಿಂಗಕಂ
ಪರಿಣಾಮವೆಂಬ ಪ್ರಸಾದವಂ ಮೆರೆದನಂದು.................... ||೧೦೩||

ಕುಲಶೈಲದೊತ್ತೊತ್ತಿನಿಂದಲಾ ಜಲಪರಿವ
ಬಲುತಿಮಿರವಿಾನ್ಗಳುತ್ಕಳದಿಂದ ಧ್ವನಿಗೈವ
ಹೊಳೆವ ಭಾಸುರತೇಜ ಥಳಥಳಿಪಕಾಂತಿ ಮಿಗಿಲೆಳೆ ಮಿಾನಪಂಙ್ಕ್ತಿ
ಬಳಸುವ ಭಯಿತ್ರಮುಂಕೊಳಿಪ ದ್ರೋಣಿಗಳಿಂದ [ ಯಿಂದ |
ತಳೆದು ನಾನಾವಸ್ತುಸ್ತೋಮ ಸಕಲಾತಿಯನಂ
ಕೊಳುವ ಕೊಡುವ ಕ್ರಯದ ವಾಣಿಜರು ಜಲಧಿಮಧ್ಯದಲೊಪ್ಪಲು
[ ||೧೦೪||

ಜಲನಿಧಿಯ ಮಧ್ಯದೊಳು ಜಲಕನ್ನೆಯರುಗಳುಂ
ಜಲಕಂಬುಪಾತ್ರೆಯೊಳು ಎಳೆಮುತ್ತಿನಕ್ಷತೆಯು
ತಳಪುರತ್ನದ ಬೆಳಗು ಕಣ್ಗೆಡಿದ ಜೋತಿಯಂ ಬೆಳೆಗೆಸೆವಕಾಂತಿಯಿಂದ |
ನಳಿನಭವಸುರವರೇಣ್ಯಕಸೆ ಘನಪೂಜ್ಯನೆ
ಇಳೆಗಧಿಕವಾದಂತ ಏಕೋದೇವನೆ ತ್ರಾಹಿ
ಬಲವಂತ ಭಾಗ್ಯಸಿಧಿ ಶರಣುಶರಣಾಗು ನಿರ್ಮಳಮೂರ್ತಿ ಸಲಹೆಂದರು
[ ||೧೦೫||

ಶರನಿಧಿಯೊಳುಂ ಚರಿಪ ನೀರ್ಮನುಜರುಂ ಬಂದು
ಪುರಹರನ ಶ್ರೀಚರಣಮಂ ಪೂಜೆಗೆಯ್ದಾಗ
ವರಕಂಬುವಿಂ ನಾದ ಘೋಷರವಗೆಯ್ದಾಗ ಸ್ವರಸಮಾಹಿತದಿಂದಲು |
ಹರನೆ ಭವಹರ ದುರಿತಹರ ಚಿನ್ಮಯನೆ ಘೋರ
ಪರಮಪಾವನಮೂರ್ತಿಯೆ ಶರಣು ಶರಣಾರ್ತಿ
ನಿರುಪಮನೆ ನಿತ್ಯಕಾಳ್ಕುಜ್ಜಿನಿಯರಸಯೆಂದು ಶಂಖಧ್ವನಿರವ ಮೊಳಗಲು
[ ||೧೦೬||

ಇಂತೊಪ್ಪಿ ಕಾಳ್ಕುಜ್ಜಿನಿಯ ಪುರಂ ರಂಜಿಸಲು
ಶಾಂತಸಿದ್ಧೇಶ ಮಲ್ಲೇಶ ಲಿಂಗವನು ನೆರೆ
ನಿಂತಿರಿಸಿ ಮುಂತೆ ನಡೆದನು ಸಹಜನಂ ಸಹಿತ ಕಾಂತಾರವೆನಿಪೊನದೊಳು |
ಅಂತಕಾಂತಕನು ಮಾಯೆಯಪವಾಡವನು ನೆರೆ
ತಂತಿನಿಂ ಗೆಲಿದು ಕರಟನ ಮುರಿದು ಮತ್ತೆ ವರ
ಕಾಂತಾಜನವ ಕೂಡಿಕೊಂಡು ನಡೆದನು ಭವಹರ ಶಾಂತ ನಿಶ್ಚಿಂತನು
[ ||೧೦೭||

ರುಂಡಮಾಲಾಧರನಖಂಡಿತನು ಘನಕಳಾ
ಖಂಡೇಂದುಧರ ಕರುಣವಾರಿಧಿ ಕಪಾಲಧರ
ಪುಂಡರೀಕದಳನಯನ ಪೂಜಿತ ಪದದ್ವಯನಜಾಂಡಕತ್ಯಧಿಕಮಯನು |
ಪುಂಡರೀಕಾಕ್ಷಿ ಮಾಯೆಯ ವಿವಾದವ ಗೆಲಿದು
ಹಿಂಡುದಾನವರ ಮುರಿದು ಸುರಪಡೆಯಂ ಗೆಲಿದು
ಮಂಡಲವನೆಲ್ಲ ತಿರುಗಿದನು ಸಿದ್ಧೇಶ್ವರನುದ್ದಂಡಿಯೊಳು ಸಂಧಿಸಮಯ
[ ||೧೦೮||

## ಐದನೆಯ ಸಂಧಿ

ಅಗ್ಗಳವೆನಿಸುವ ಮಾಯೆಯ
ಕಗ್ಗವಗೆಲದಸುರಪಡೆಯ ಮುರಿದುಂ ಮತ್ತಾ
ಭರ್ಗನೆನಿಪತ್ಯತಿಷ್ಠನ
ಸಜ್ಜನರುಂ ಪೊಗಳೆ ಬಂದನುಜ್ಜನಿಪುರಕಂ ||

ಮಾಯೆವಿಲಾಸಮಂ ತೀರ್ಚಿ ದೈತೆಯರಂ ಮುರಿದು ಸಂಪ್ರೀತಿಯಿಂದನಿ
ಕಾಯ ನಿರುಪಮ ನಿತ್ಯಪುರತ್ರಯ ಹರಕಾಳ್ಕತಿಯಲಿಂಗವ ಪ್ರೀತಿಮಿಗೆ
ಪ್ರತಿಷ್ಠೆಯಂಮಾಡಿ ಗುರ್ವಾಜ್ಞೆಯಿಂದೊಲಿದು ಮಿಗೆ ಸ್ತ್ರೀಯರು ಸಹ
ತಿರುಗಿದನುಜ್ಜನಿಪುರಕಂ ಮಲ್ಲಿಕಾರ್ಜುನಾ ||

ಅಂತೆಸೆವ ಮುರುಳಲಿಂಗನು ಮಾಯಾವಿವಾದಮಂ ಗೆಲಿದು
ಅಸುರರ ಸಂಹರಿಸಿ ಮಹೋತ್ಸವದಿಂದ ನವನಾಥಸಿದ್ಧರ
ಕುರಿಗಳಮಾಡಿಕೊಂಡು ಕೇತನಹಳ್ಳಿಗಂ ಬಂದು ನೆಲಸಿದಂ ಮುರುಳ
[ಸಿದ್ಧೇಶ್ವರನು ||

ಕಾಲಹರ ಕರ್ಮಹರ ದುರಿತಹರ ಭವಹರಂ
ಜ್ವಾಲರವಿ ಶಶಿನೇತ್ರ ಕಾಲಕಂಧರ ಗರಳ
ಶೂಲಧರ ಕರದಕಪಾಲ ಭಸ್ಮಾಂಗಧರ ಬಾಲಶಶಿಮುಕುಟಜೂಟ |
ಪಾಲಿಸುವ ಭಕ್ತವತ್ಸಲ ಕೃಪಾಕರನಸ್ಥಿ
ಮಾಲೆಯಂ ಧರಿಸಿ ಮೆರೆವಂತ ಸರ್ವೇಶ್ವರನು
ಸೋಲದಲೆ ಮಾಯೆಗೆಲಿದಾ ಪವಾಡವ ಮೆರೆದುನಿಂದನುಜ್ಜನಿಯ
[ಪುರದೊಳು ||

ತೆಲುಗಬಾಳಿಗೆ ಬಂದು ನಲವಿಂದಲೊಕ್ಕಲಿಗ
ಸಲೆಸಿದ್ಧಗಂ ಕರುಣದಿಂದಿತ್ತು ಮುರುಮುದ್ರೆ
ಬಲವಂತನಾಗು ನೀನೆಂದರಿವೆಯನು ಸೀಳಿವಲದಿಂದ ಕೊಟ್ಟನಾಗ |
ಎಲೆ ಮಹಾದೇವ ನೀಪಾಲಿಸಿದೆ ಪರಿಣಾಮ
ದೊಳುವಸ್ತ್ರಮಂ ಬೆನ್ನೊಳವಧರಿಸಿ ಕಂಥೆಯನು
ಬಲುನಂಬುಗೆಯೊಳ್ವಾಂಗು ಭಲರೆಂದು ಹರಸುವೆವು ತೆಲುಗ ಬಾಳಿನ
[ಸಂತತಿ || ೧ ||

ಈ ಪರಿಯೊಳಿನೆ ತೆಲುಗಬಾಳವರಿಗಂ ವರವ
ಕಾಪಾಲಿಧರನು ಕರುಣದಿ ಕೊಟ್ಟು ಸತಿಜನದ
ರೂಪನಳಿದಾನಿರೂಪನು ಮಾಡಿ ಕುರಿಯೆಂದು ಶಾಪವೀಯಲು ಕುರಿಗಳು |
ಪಾಪವೆರೂಪಾದ ನವಸಿದ್ಧ ಸಂತತಿಯ
ರೂಪಳಿದು ನರಗುರಿಗಳಾಗಿ ಈ ಲೋಕದೊಳು
ಕೋಪ ತಾಮಸ ಕ್ರೋಧ ಹುಸಿ ಮತ್ಸರಗಳವರ್ಗೆ ಸ್ಥಾಪಿಸಿಯೆ
[ಅನುದಿನದಲಿ ||೨||

ಇರೆ ತೆಲುಗಬಾಳವರ ಪೈಕಕಂ ಹರತನ್ನ
ಪರಭಾಗವಾಮುದೆಸೆಯೊಳು ಮಠವನಿತ್ತೊಡನೆ
ಗುರುಕರುಣವಿತ್ತು ಗುರುಸೇವೆಯನು ಮಾಡಿರೆನುತ ಹರಸಿ
ಗುರುವರನು ರೇವಣ್ಣಸಿದ್ಧೇಶ್ವರನ ಕಂಡು [ನಿಜವರವನಿತ್ತು |
ಚರಣಕಭಿವಂದಿಸಿ ಸುಶಾಂತ ಮಲ್ಲೇಶ್ವರನ
ವರಪಡೆದು ಸಾಲು ಶಾಸನ ಲಿಂಗದೊಳು ಬೆರೆದ ಗುರುಮೂರ್ತಿ
[ಲಿಂಗಶರಣು || ೩ ||

ಕಗ್ಗಲ್ಲಪುರದ ಕೇತನಹಳ್ಳಿ ಮಧ್ಯದೊಳು
ಭರ್ಗನತ್ಯತಿಷ್ಠನಹ ಮರುಳನಿಗೆ ಮುನಂ
ಪೊಗ್ಗಿ ಈ ಸ್ಥಲಕಾಡು ತನಗೆ ಹಿತಕರವೆಂದು ನಿರ್ಗಮನನಿತ್ಯನಾಗಿ |
ಅಗ್ರಗಣ್ಯನು ಮಹಾಮಹಿಮ ಸಿದ್ಧೇಶ್ವರನು
ಸ್ವರ್ಗದರು ಪೂಮಳೆಯ ಕರೆವುತಿರಲಾಪುರದ
ಹೆಗ್ಗಡಿಗರ್ನೆಲದಲುದಿಪುದೆ ಸತ್ಯ ತನಗೆಂದು ಹಿಗ್ಗಿದನು ಮರುಳಲಿಂಗಾ
[ || ೪ ||

ಕೇದಾರವದು ಪುಣ್ಯಕ್ಷೇತ್ರವೆಂದೆನಿಸುವುದು
ಜಾತಿಸೂತಕವಳಿದಜಾತನಂ ಮಾಡಿ ಘನ
ಪ್ರೇತಪತಿ ಬರಹ ನಿಷ್ಪಾಪಕರಮಾಡುತಲಿ ಖ್ಯಾತಿವಡೆದಿಹ ಮಹಿಮೆಯ |
ಭೂತಪತಿ ಸ್ಥಿರವಿಡಿದ ಘನ ಮೃತ್ತಿಕೆಯ ತಂದು
ಪ್ರೀತಿಯಿಂದೀಸ್ಥಳದ ಸ್ಥಿರಮೃತ್ತಿಕೆಯನೆರಡ
ತಾ ತೂಗಿ ನೋಡೆ ಸರಿಯಾಗದಿರಲದ ನೋಡಿದಾತನುಂ ಮನಮೆಚ್ಚುತ
[ || ೫ ||

ವಾರಣಾಸಿಯ ಕ್ಷೇತ್ರ ವಾಸ ಶಿವಲಿಂಗಕ್ಕೆ
ತಾರತಮ್ಯದ ಶಿಲೆಗಳೆಲ್ಲ ಲಿಂಗಗಳಕ್ಕು
ದೂರವಿಲ್ಲಾ ಪಥವ ಸೇರಿ ತಪಗೈವರದರ್ಮೇರೆ ಪಂಚಾಕೋಶದಿಂ |
ಧಾರಿಣಿಯ ಸ್ಥಳದ ಮೃತ್ತಿಕೆ ಘನವದೆಂದಾಗ
ಮಾರಹರ ತರಿಸಿ ನೋಡಿದನದರ ಮಹಿಮೆಯಂ
ತೋರುವತಿತ್ರಾಸಿಂಗೆ ಸಮಗಾಣದಿರಲಾಗ ಧೀರ ನಿಂದನು ಆಗಳು ||೬||

ಕುರುಕ್ಷೇತ್ರ ಧರೆಮಣ್ಣ ತರಿಸಿ ನೋಡುತ ಮರುಳ
ನಿರೆ ತನ್ನ ಕ್ಷೇತ್ರದೊಳಗಣ ಮಣ್ಣ ಸರಿಯಿಡುತ
ಲೆರಡನುಂ ಸರಿಗಂಡು ತೂಗುತಿರೆ ಮೃತ್ತಿಕೆಯು ಸರಿಬಾರದಿರಲು ನೋಡಿ |
ಮರುಳಸಿದ್ಧೇಶ್ವರನು ಮನಹರುಷಮಂತಾಳಿ
ಹರಿಹರಮಹಾದೇವ ಈ ಕ್ಷೇತ್ರ ಘನವೆಂದು
ಸ್ಥಿರವಾಗಿ ನಿಂದನಾ ಪರಮಪಾವನರೂಪ ಗುರುಕರುಣವಿಡಿದಾಗಳು ||೭||

ರಾಮೇಶ್ವರಕ್ಷೇತ್ರ ಭೂಮಿಗದು ಪೊಸತೆನಿಸಿ
ಕಾಮಿತಾರ್ಥದ ಫಲವ ಕೊಡುವುದುಂ ಕೈಯೊಡನೆ
ರಾಮರತಿ ಪೂಜೆಮಾಡಿದರು ರಾಮೇಶ್ವರದ ರಾಮಲಿಂಗನ ಭಕ್ತಿಯಿಂ |
ಆ ಮಹಾತೀರ್ಥ ವಿಶೇಷವೆನುತ ಮೃತ್ತಿಕೆಯ
ಕಾಮಹರ ತರಿಸಿ ತೂಗಲು ತನ್ನ ಕ್ಷೇತ್ರಕತಿ
ಭೂಮಿ ಸರಿಯಾಗದಿರೆ ಕೊಂಡಾಡುತಂ ಸ್ಥಳವ ಪ್ರೇಮದಿಂ ಪೊಗಳ್ದನಂದು ||೮||

ಪರಮಪಾವನರೂಪ ಸ್ಥಿರಮನವ ಪಿಡಿದನೀ
ಪುರದ ಮೃತ್ತಿಕೆಗೆ ಸರಿಬಾರವೀ ನಾಲ್ಕುಪುರ
ದೆರೆಮಣ್ಣಳಿಡಿದ ಮೃತ್ತಿಕೆ ತೂಕಕೋಸರಿಸಿ ಸರಿಯಾಗದಿರಲು ನೋಡಿ |
ಮರುಳಸಿದ್ಧೇಶ್ವರನಿದೇ ತನಗೆ ಸ್ಥಳವೆಂದು
ಗುರುನಿರೂಪವನಾಂತು ಪುರದೊಡೆಯನಂ ಕರೆದ
ವರ ಕೈಯ್ಯಲಿಪ್ಪತ್ತುನಾಲ್ಕು ಚೌಕದ ಧರೆಯನುರೆಕೊಂಡು ಪಣವನಿತ್ತು ||೯||

ಪಣವನಿತ್ತವರಿಗಂ ಧರಣಿಯಂ ನೆರೆಕೊಂಡು
ತ್ರಿಣಯ ಮುಹೂರ್ತವನಿಕ್ಕಿ ದ್ವಾಪರದ ಕಡೆಯಾದಿ
ಗೆಣಸುತಿರೆ ಕಲಿಯುಗಾದಿಯ ಪ್ರಥಮದಾರಂಭಗಣವಾಗುತಿರಲು ನೋಡಿ|
ಅಣಿಮಾದಿ ಅಷ್ಟಸಿದ್ಧಿಯಮೀರಿ ಯೋಗದೊಳು
ಪ್ರಣಮುವನು ಹೃತ್ಕಮಲ ಕರ್ಣಿಕಾಮಧ್ಯದೊಳ
ಗಿರಿಸಿ ಪಂಚಾಕ್ಷರಿಯ ನಿತ್ಯಧ್ಯಾನದೊಳಾಗ ಮಣಿಪೂರಕದೊಳು ನಿಲಿಸಿ
[ ||೧೦||

ಆರು ಚಕ್ರಂಗಳನು ಮೀರುತ ಸುಷ್ಮ್ನಾನದೊಳು
ಮೂರುಮಾರ್ಗದ ಕೀಲ ಮುರಿದೊಂದುಗೂಡುತಲಿ
ಮೀರಿಯೆ ಸಹಸ್ರದಳ ಕಮಲದಲಿ ಸುಖಿಯಾಗಿ ಪರಿದಷ್ಟದಶಗ್ರಂಥಿಯ|
ಸೇರಿರುವ ಪ್ರಣವವಂ ಬೆರೆದು ನಿಶ್ಚಯವಿಡಿವು
ತೇರಿ ಶ್ರೀಗಿರಿ ಶಿಖರದಗ್ರಮಂ ಪರಮಋಷಿ
ಸಾರಸೌಖ್ಯದ ಸಮರಸವನುಂಡು ತೇಗಿದನು ಪೂರಿತಶರೀರವಿಡಿದು
[ ||೧೧||

ಮರುಳುಸಿದ್ಧೇಶ್ವರನು ವರಸಮಾಧಿಯನಾಂತು
ಧರಣಿಯೊಳು ನಿಕ್ಷೇಪ ವಿಡಿರೆಂದು ಪೇಳಲವ
ರ್ಮರುಳನಂ ಪೂಣೆ ಧರೆಬೆಳವುತ್ತಲಿರೆ ಮೇಲೆ ಧರೆಯನೂಳುವ ಪಥ
ಮರುಳುಗೊಂಡನು ಮಡಿಕೆಯಿಂದೂಳುತಿರೆ ಮೇಲೆ [ ದೊಳು |
ಶಿರಕೆ ಕುಳತಾಗಲೇರಿಯುವಡೆದು ಮರುಳನಾ
ಶರೀರ ಕುಪಹತಿಯಾಗೆ ವರಶಾಪವಿತ್ತನಾ ಪರಮಪಾತಕನಿಗಂದು ||೧೨||

ಕೋಪಮನದೊಳು ಪುಟ್ಟಿ ಮರುಳಸಿದ್ಧೇಶ್ವರನು
ಪಾಪರೂಪಿನ ಕರ್ಮಿಗಳು ಪೋಗಿ ನೀವೆನುತ
ಶಾಪವಿತ್ತನು ಭಾಪು ಪೌತ್ರಪರಂಪರೆಯೋಳ್ ಶಾಪದಿಂದುದಿಸಾಗಳು|
ಕಾಪಾಲಧರನು ಕರುಣಿಸಿಕೊಟ್ಟನವರಿಗಂ
ಶಾಪ ನಿಶ್ಯಾಪವಾಹದು ಪೋಗಿ ನೀವೆನುತ
ಲಾತಮಿಗೆ ನೆನೆದ ತನ್ನಯ ಪೂರ್ವಚರಿತವನುಮಾಪತಿಯೆ ಬಲ್ಲನದನು
[ ||೧೩||

ವಿಶ್ವತೋಮುಖ ವಿಶ್ವಬ್ರಹ್ಮಾಂಡದಲಿ ನಿಲಿಸಿ
ವಿಶ್ವದೊಳಗೊಂದು ದೇಗುಲ ತನಗೆ ಬೇಕೆಂದು
ವಿಶ್ವಕರ್ಮನಕರೆದು ನೇಮಿಸಿದ ಬಹುರೂಪು ವಿಸ್ತರದೊಳಾಗಲೆಂದು|
ಈಶ್ವರ ಶಿವಾಲಯವ ನಿರ್ಮಿಸಿಯೆ ಕ್ಷೇತ್ರದೊಳು
ಶಾಶ್ವತಪದವ ಪಡೆದು ಆ ನಿಳಯದೊತ್ತಿಲಿ ಮ
ಹೇಶ್ವರನ ಸನ್ನಿಧಿಯೊಳಿರುತಿರ್ದ ನಾಗಲವ ಭಾಸ್ಕರನ ತೇಜದಿಂದ || ೧೪ ||

ಜಕ್ಕಣಾಚಾರ್ಯರನು ಕರೆದು ನೇಮಿಸಿದನಾಗ
ಮುಕ್ಕಣ್ಣಹರನು ಕಲಿಯುಗದಾದಿ ಪುಗುತಲಿದೆ
ಮುಕ್ಕಾಲು ಮೂರು ಘಳಿಗೆಗೆ ದೇಗುಲಂ ಇದನು ಗಕ್ಕವನು ಗೈವು
ಆಕ್ಷಣವೆ ಹರನ ನೇಮವನಾಂತು ವಾಜನುಂ [ದೆಂದ ||
ಶಿಖ್ಖದ ಶಿವಾಲಯಂಗೈದುಮಾಚಾರಿಯುನ
ವತ್ತಿನ ವರವಪಡೆದು ನಿಂದ ಮಹಿಮೆಯ ನೋಡಿ ರಕ್ಷಿಸಿದ ಪರಮ
[ಯೋಗಿ ||೧೫||

ಕೋಣೆಯಲೊರವ ಪಡೆದು ನಿಂದನಾ ವೀರೇಶ
ಬಾಣಬಿಲು ಖಡ್ಗಹಲಗೆಯು ಪಿಡಿದು ಬಹುರೂಪಿ
ನ್ಜಾಣ ದೇವರದೇವ ಕಾಣಿಯ ಮನೋಹರನು ತ್ರಾಣಿಯೆನಿಸುವ
ಸ್ಥಾಣುವಿನ ರೌದ್ರರೂಪನು ತಾಳ್ದ ಗುಣಮಣಿಯು [ ಶರಭನು |
ಹೂಣಿ ಹೊಕ್ಕಾದಕ್ಷಮುಖವ ಕೆಡಿಸಿದ ರುದ್ರ
ಕೇಣಿಕಾರನು ದಕ್ಷಪಡೆಯ ಸಂಹರ ಮಾಡ್ದ ತ್ರಾಣಿ ವೀರೇಶನೆಸೆದ ||೧೬||

ಇತ್ತ ಸಿದ್ಧೇಶ್ವರನ ಶಿವಭವನ ಮೆರೆದುದು
ವೃತ್ತವಲಯದೊಳು ಷೋಡಶ ಕೋಣೆಯಾವರಿಯ
ಚಿತ್ರಗೆಲಸದ ತುಳುಕು ದಂಡಾವಳಿಯೊಳೆಸೆವ ಸುತ್ತುಲೋವೆಯ
ಮತ್ತ ಗಜಸಿಂಹ ಹಯ ಸ್ಥೂಲ ಸೂಕ್ಷ್ಮದೊಳೆಸೆವ [ ಪಂಙ್ಕ್ತಿಯಾ |
ವತ್ತಿನೊಳು ನೂರುಮಿಂಚಿನೊಲೆಸೆವ ಕಂಭಗಳು
ಬಿತ್ತರದ ಗಡಗೆಸೆವ ಹಲಗೆ ಬೋದಿಗೆ ಎತ್ತಿ ಪೊತ್ತ ತೊಲೆ ಮೆರೆದ
[ವಂದು ||೧೭||

ಕಾಮಹರ ಮರುಳ ಸಿದ್ಧೇಶ ದೇಗುಲದೊಳಗೆ
ಸೋಮಸಿಂಹಾಸನದ ಮಠಪತಿಗಳೊಪ್ಪಿರಲು
ಭೂಮಿಯೊಳು ಚರಿಸಿ ಚರಲಿಂಗಮೂರ್ತಿಗಳಾಗಿ ಕಾಮವನು ಕಡೆಗೊ
ನೇಮವಿಡಿದಾಚರಣೆಗಳದು ತ್ರಿಕಾಲದೊಳು [ ತ್ತುತ |
ಪ್ರೇಮದೊಳು ನಡೆಸುತ ಶಿವಾರ್ಚನೆಯ ಮಾಡುತ್ತ
ಲಾಮಹಾಮಹಿಮರಿರುತಿರ್ದ್ದರನುದಿನ ಸುಖದಿ ತಾಮಸವಳಿ
[ ದಾಗಲು ||೧೮||

ಸೂರ್ಯಸಿಂಹಾಸನದ ಮಠಪತಿಗಳೊಪ್ಪಿದರು
ಭಾರಿಯ ದಂಡ ಕಮಂಡಲ ಮೌಂಜಿದಾರವಿರಲು
ದಾರ್ಯಕಳವಳವಡೆದು ಜಡೆ ಮಕುಟ ಕುಂಡಲಾಪೂರಿತ ಸುಗಂಧ
ಕಾರ್ಯ ಕಾರ್ಯಾಂತರವನರಿದು ಕರಣಂಗಳೊಳು [ ವೆಸೆವ |
ತೂರ್ಯತೀತವನುಳಿದು ಮನರಾಗವೃತ್ತಿಯಲಿ
ಧೈರ್ಯವಿಡಿದಾಚರಿಸಿ ಮುಕ್ತಿಯಂ ಪಡವವರು ಶೌರ್ಯದಿಂದಿರು
[ ತಿರ್ದರು ||೧೯||

ಕಬ್ಬುನದಕಂತೆ ಬೆಳ್ಳಿಯಕಂತೆ ಚಿನ್ನದೊಳು
ವಬ್ಬುಳಿಯ ವಿಡಿದತಾಮ್ರವು ಕಂಬಳಿಯ ಕಂತೆ
ನಿರ್ಭರದ ನಿಡುಗಂತೆ ಚಿವರ್ಗಂತೆ ಮೊದಲಾಗಿ ರುದ್ರಾಕ್ಷಿಕಂತೆಯೆಸೆವ |
ಸರ್ಬ್ಬರ್ನ್ನರುಂ ಧರಿಸಿ ಚರಲಿಂಗ ಮೂರ್ತಿಗಳು
ಹಬ್ಬ ಹಬ್ಬಕೆ ಬಂದು ಮಹತ್ತುಪದ ಮೈದುವ
ರೊಬ್ಬರೊಬ್ಬರ ಸ್ಥಲವ ನಿರ್ಣಯಿಪ ಶಾಸ್ತ್ರದರು ಇದ್ದರಾಕ್ಷೇತ್ರದೊಳಗೆ
[ ||೨೦||

ಮರುಳ ಮಂಟೆಯುದವರು ಪರಭಾಗದೋಳ್ನಿಲಲು
ತುರುಗಾಹಿಗಳು ಕರದ ಕೋಲ್ಚಕ್ರ ಕಂಥೆಯಂ
ಶಿರಮಾಲೆಯನು ಕಟ್ಟಿ ಕರುವ ಸೋವುತಲಾಗ ಮರುಳಲಿಂಗನ ಪಾಡುತ |
ಪರಮಪದ ತಮಗೆಂದು ಪರಮಾರ್ಥವನುಪಾಡಿ
ಧರಣಿಯೊಳು ಚರಿಸಿ ಬಿಕ್ಷಾಟನಂ ಗೈದಾಗ
ಸ್ಥಿರವಿಡಿದು ಕರುಮರುಳರಿರುತಿರ್ದರಾಸ್ಥಳಂ ಮರುಳಮಂಟೆಯವ
[ ಪಡೆದು ||೨೧||

ಸಿದ್ಧರಾಮೇಶ್ವರನ ವರಕೃಪೆಯ ತಾಂ ಪಡೆದು
ಗದ್ದುಗೆಯ ಸ್ವಾಮಿತಂದೆಗಳ ಪರಭಾಗದೊಳು
ಸದ್ಯಫಲಪದವಿಡಿದು ರುದ್ರಸನ್ನಿಧಿಯೊಳು ನಿರ್ದೇಹ ನಿರತನಾಗಿ |
ಇದ್ದನಾ ಮರುಳಸಿದ್ಧೇಶ್ವರನಪರಭಾಗ
ವಿದ್ದೆಸೆಯೋಳ್ ತಾನೆರಡು ಪುತ್ರಪಾರಂಪರೆಯ
ಗದ್ದುಗೆಯ ಪದವಿಡಿವ ಸಿದ್ಧಿತನಗೆಂದಾಗ ಬುದ್ಧಿಪೂರ್ವಕದಿಂದಲಿ ||೨೨||

ಹಳೆಯಬೀಡಿಂ ಬಂದ ಬಳೆಗಾರ ಶರಣಗಂ
ನಿಳಯಪರಭಾಗದೊಳು ಸುಸ್ಥಲವನಿತ್ತೊಡನೆ
ಬಲವಂತ ಎಡವಂತವವರ ವರ್ಗವರಿತು ಕೊಟ್ಟು ಸಲೆಚೈತ್ರದೋಲಗ
ಕಳಸ ಮುಖದಿಂದ ನಡೆಸೆಂದವರ್ಗೆ ಸೂಚಿಸುತ [ವನು |
ಮಲಹರಂ ಮರುಳನವರಿಗೆ ವರವನಿತ್ತಾಗ
ಕಲಿಕಾಲದಾದಿಯೊಳು ಸಲೆನಿಂದು ಸಿದ್ಧೇಶ ಸಲಹುವನು ಮೂಜಗವನು
[ ||೨೩||

ಸೃಷ್ಟಿಗೀಶ್ವರ ಸಿದ್ಧೇಶ್ವರನು ಮಿಗಿಲು
ಜಟ್ಟಿಗನು ತನಗೆ ಕಾಪಿನ ಭೃತ್ಯನೆನುತೆಡದ
ಕಟ್ಟೆನೊಳು ಸ್ಥಳವಿತ್ತು ಮೊದಲ ಕಾಣಿಕೆ ಕಪ್ಪ ಮುಟ್ಟಲಿ ನಿನಗೆನುತಲೆ |
ಕಟ್ಟಳೆಯಮಾಡಿ ಕರುಣಾಕರನು ವರವಿತ್ತು
ಮುಟ್ಟಿಪೂಳಿಗವನೀವ್ಮಾಡುವುದುಯೆನುತಾಗ
ಜಟ್ಟಿಗನ ಸಂತೈಸಿ ಬಟ್ಟಬಯಲಾದಂತದೃಷ್ಟಮೂರುತಿಗೆ ಶರಣು ||೨೪||

ಪುರಹರನು ಮಲ್ಲಿಕಾರ್ಜುನನು ಶಿಖರಾಗ್ರದೊಳು
ಮೆರೆವರರುವತ್ತು ಮೂವರು ಪುರಾತನರುಗಳು
ಪರಮಭಕ್ತಿಯಲಿ ವಿರಚಿಸಿದೆ ಶರಣರು ಕೇಳಿ ಶರಣರೈಶ್ವರ್ಯ ಪದವ |
ಶರಣಮಾಹೇಶ್ವರ ಪ್ರಸಾದಿಲಿಂಗೈಕ್ಯರಿಂದ
ನಿರದಾಲಿಪುದು ಭಕ್ತಿರಸವೆನಿಪ ಚರಿತೆಯನು
ಮರುಳಲಿಂಗನ ಮಹಾಮಹಿಮೆಯಂ ಕೇಳ್ವರಿಗೆ ಪರಮಪದ ಸಾರ್ವು
[ ದರಿದೆ ||೨೫||

ತಿರುನೀಲಕಂಠ ಸಿಃಪಗೆಯಾಂಡ ನಿಳಯಾಂಡ
ವರಸೇದಿರಾಜ ಮೆರೆಮಿಂಡಮುರನೀತಿಗಳು
ಹರಶರಣನಂಬ್ಯಣ್ಣರಿರೆ ಭಕ್ತರೇಣಾಂಕರಿರೆ ಶಬರಕಣ್ಣಪ್ಪನು |
ವರಕೊಂಗುಲಿಯು ಮನಕಂಜಱಿರುವತ್ತಾಂಡ
ಪಿರಿಯನೈನಾರು ವಲಗಂಡಮೂರ್ತಿಗಳೆಸೆವ
ಮುರುಗರುರೆ ರುದ್ರಪಶುಪತಿಯು ತಿರುನಾಳ್ಪೋವರ್ನರದರ್ಹರವಳಯ
[ ದೊಳಗೆ ||೨೬||

ತಿರುಕುರುಪಿ ತೊಂಡ ಚಂಡೇಶ ವಾಗೀಶ್ವರನು
ಶರಣ ಕುಲಶ್ಚರಿಯ ಪೆರುಮಳಲಿಯ ಕುರುಂಬರು
ಕಾರಿಕಾಲಮ್ಮೆಯ ಸ್ಫೂರ್ತಿನಿಲನಕ್ಕರುಂ ತಿರುಜ್ಞಾನಿ ಕಲಿಕಾಮನು |
ತಿರುಮೂಲದಂಡಿ ಭಕ್ತನುವಚ್ಚುತ್ತೈಯ್ಯನು
ಇರಲು ಸೋಮಾಸೀಮರುಂ ಶಾಂತ್ಯಚಿರುಪುಲಿಯ
ಸಿಱಿಯಾಳ ಚಾರಮನು ಕಲಿಗಣನಾಥ ವೇಳ್ಕು ತರುಕರಿಯುರಚೋಳನು
[ ||೨೭||

ನರಸಿಂಗನತಿಭಕ್ತ ಕಲಿಕಂಭ ಕೊಂಗುಲಿಯು
ಕಱಚಿಪ್ಪ ತಂಡೆ ಸೈಯ್ಯುಡ ತಂದೆ ಕಣಬುಲ್ಲ
ಶರಣ ಕಡವೂರ ಕಲಿಯುರು ಪಾಂಡ್ಯನು ಮೆಸೆವ ವರ ವೋಹಿಲನು
ಹರನೊಳಂಕಂಗೊಡ ಕಲಿಕಂಭ ದೇವನುಂ [ ಮೆಸೆದನು |
ನರಸಿಂಗ ಕಳಚುಂಗನುಂ ಮಂಗಯುಕ್ಕರಸಿ
ಹರಣಸ್ಯೆನಾರು ಪೆರುಚಂಗಮಳೆಯರುಂ ತಿರುನೀಲಕಂಠರೆಸೆಯೆ ||೨೮||

ವಲಿವಾಂತ ಜಡೆಯನ್ಸೈನಾರು ಯನ್ಸ್ಯಜ್ಞಾನಿ
ಕಲಿಕಾಲ ಚೋಳಸಹ ಅರುವತ್ತು ಮೂವರುಂ
ಸಲೆದ್ವಾದಶರು ಷೋಡಶರು ತೇರಸರು ಮೆನಿಪ ಬಲುಗಣಂಗಳು
ಮಲಹರನು ಮರುಳಸಿದ್ಧೇಶ್ವರನ ಶಿಖರಾಗ್ರ [ ನೆರವಿಯಿಂ |
ವಳಯದೊಳು ನಿಂದು ಹರಸುತ್ತ ಪ್ರಾರ್ಥನೆಯಿಂದ
ಕಳೆಗೊಂಡುನಿಂದ ಮಹಿಮಾಶರಣಱಿಂತಿವರ ಬಲಗೊಂಬೆ ಹರುಷದಿಂದ
[ ||೨೯||

ಮೂರುಲಿಂಗಂ ಮೂರವಿಾರಿ ತೋರುವ ಲಿಂಗ
ಆರುಲಿಂಗಂ ಆರವಿಾರಿಹ ಮಹಾಲಿಂಗ
ಸಾರುತಿಹ ವೇದಶ್ರುತಿಗಳಿಗೆ ನಿಲುಕದಲಿಂಗ ಮೂರುವಾಸಂಗಳೊಳಗೆ |
ಬೇರೆನಿಸಿತೋರಿ ತನ್ನೊಳ್ಬೆರೆದ ಘನಲಿಂಗ
ತೋರುವ್ಯೆಲಿಂಗ ವೇಕೋದೇವನಹ ಲಿಂಗ
ಮೂರುವಾಸಂಗಳೊಳು ನೆಲಸಿರ್ಪ ಘನಲಿಂಗ ಮರುಳಸಿದ್ಧೇಶಲಿಂಗ
[ ||೩೦||

ಸುಣ್ಣದ ಪವಾಡವನು ಗೆಲಿದ ಸಿದ್ಧೇಶ್ವರಂ
ತಣ್ಣಗಾಗಲಿಯೆಂದು ವರುಷಕಾಲಂಗಳೊಳು
ಎಣ್ಣೆಯನು ಶಿಖರದ ಶಿರಾಗ್ರದೊಳು ತಂದೆರೆದು ಓಂನಮೋನಮೋ
ಚೆಣ್ಣಸ್ಸರ್ತಿಸಹ ಬಂದು ಶಿವಭಕ್ತರಾದವರು [ ಎನುತಲಿ |
ಹುಣ್ಣಿಮೆಯ ದಿವಸ ಗುಡಿಗಂ ಬಂದು ಹರಕೆಯಲಿ
ಪುಣ್ಯಕುಂಡಲ ಪಾಕದೊಳಗರೆದು ಕಲಸಿಟ್ಟು ಕಣ್ತುಂಬ ನೋಡುತಿಹರು
[ ||೩೧||

ಇಂತುಪರಿ ಲೀಲೆಗಳ ನಟಿಸುತ ಸಕಲದೇಶ
ತಾಂತಿರುಗಿ ಬಂದು ತರಳ್ಬಾಳಸಿದ್ಧಯ್ಯನನು
ಮುಂತೆ ತನ್ನಂತೆ ಲೀಲೆಯ ನಟಿಸಿಬಾಳೆಂದು ಶಾಂತನಪ್ಪಣೆಯನಿತ್ತು |
ನಿಂತಸುಜ್ಜನಿಪುರದಿ ನಿಜವ ಸರ್ವರಿಗರುಹಿ
ಕಂತೆಯುಳಿದುದ್ಭವಿಸಿ ಕರುಣಿಸುತ ಸರ್ವರಿಗೆ
ಶಾಂತಮರುಳೇಶ ಮಹಿಮೆಯು ಮೆರವುತಿರಲಲ್ಲಿಗಾಯಿತ್ತೈದನೆಯ ಸಂಧಿ
[ ||೩೨||

---

## ಆರನೆಯ ಸಂಧಿ

ಗಿರಿಜೆಯ ವಿವಾಡಗಳನತಿ
ತರಳತ್ವದಿ ಗೆಲಿದು ಲಿಂಗವಿಸ್ತಾರಮುಮಂ
ಸ್ಥಿರವಿಡಿದುನಿಂದನುಜ್ಜನಿ
ಪುರದೊಳು ಸಿದ್ಧೇಶಲಿಂಗ ಶರಣರ್ಸಂಗಾ ।

ತಾರಾದ್ರಿಯೋಳ್ ವಿವಾದ ಬರಲೀಶ್ವರ ಮುದದಿಂದಲ್
ಧಾರುಣಿಗೈತಂದು ಮಾಯಾಮಹೋನ್ನತಿಯಂ ಗೆಲಿದ ಸುರರ ಮುರಿದು
ವಾರವಧುಗಳಂ ಕುರಿಮಾಡಿ ನವನಾಥರ ನಾರಕಬಾಧ್ಯರ ಮಾಡಿ
[ ಮಹಿಮೆಯಿಂ
ಮಾರಾರಿಯುಪ ಮರುಳಸಿದ್ಧೇಶ್ವರ ಶರಣರ್ಗೀವ ನಿಷ್ಟಸಿದ್ಧಿಯಾ ॥

ಇಂತೆಸೆವ ಮರುಳಸಿದ್ಧೇಶ್ವರನು ಜೇತೂರು ಕುರಡಿ
ಆನಗೋಡಸಗೋಡು ಬಲ್ಲೂರು ಕುಂಬಳೂರೆಂಬ ಸಾಲು ಶಾಸನ
ಉಜ್ಜನಿ ಪುರದೊಳು ನಿಂತನದೆಂತೆನೆ । [ ಲಿಂಗವಾಗಿ ಮೆರೆದು

ಮರುಳಸಿದ್ಧೇಶ್ವರನು ಗಿರಿಜಾವಿವಾದವನು
ತರಳತ್ವದಾಟ ಸೌರಂಭದಲಿ ಪರಿಹರಿಸಿ
ಸ್ಥಿರವಿದಂ ತಳುಗೆಂದು ಉಜ್ಜನೀಪುರದೊಳುಂ ಗುರುಮೂರ್ತಿ
[ ಲಿಂಗ ಮೆರೆದ ।

ಭುವನದೋಳ್ ಖ್ಯಾತಿವಡದಪ್ರತಿಮುತರದೇಶ
ಶಿವಭಕ್ತಿ ಪಥಮಾರ್ಗಮಂ ಪಡೆವ ಸಂತೋಷ
ಕವಿಗಮಕಿವಾದಿವಾಗ್ಮಿಕರಿಗಗಣಿತವಾಸ ಸವಿನುಡಿಯ ಸಾರಸರಸ ।
ಕವಿತೇಜವುಗುವೊಲು ಪೆಚ್ಚಿಪ ಕರನ್ಯಾಸ
ಯುವತಿಯರ ಕಳೆಯೊಪ್ಪವಡೆದ ಕಾರುಣ್ಯರಸ
ವವನಿಯೊಳು ಕೇಳ್ವರಿಗೆ ಕೊಟ್ಟು ರಾಜಿಸುತಿಪ್ಪನವದೇಶ ಮೆರೆವದರೊಳು
[ ॥೧॥

ಉಜ್ಜನಿಯ ಪುರವವರ್ಣಿಸುವೆನಾ ಘನಸೌಖ್ಯ
ಸಜ್ಜನರು ಶರಣಸದ್ಭಕ್ತರದರಲ್ಲಿರಲು
ಕಜ್ಜವಡೆದಷ್ಟವರ್ಣಗಳ ಸಮುಪಂಙ್ಕ್ತಿಯಿಂದೂರ್ಜಿತಾಶ್ರಮ ಘನವನು
ಅಬ್ಜಭವನೊಲಿದು ನಿರ್ಮಿಸಿದನಿದನೆಂಬಂತೆ
ದುರ್ಜನರು ದುರ್ನೀತಿ ಕಳವು ಪರದಾರವನು
ವರ್ಜಿಸುತ ಪರಮಗುರುಲಿಂಗಜಂಗಮವಿರುವ ವೂರ್ಜಿತವದೇಂ
[ ಪೊಗಳುವೆ ||೨||

ಅಷ್ಟದಳ ಕಮಲ ತನುವೆಸೆದೊಪ್ಪುದಾ ಪುರದೊ
ಳಿಷ್ಟಲಿಂಗಂ ಘನಾಘನಮಹಿಮ ಪರಮಾತ್ಮ
ಸೃಷ್ಟಿಯರಿಯಲು ಮರುಳ್ಗಳೊಡನಾಡಿ ಮರುಳಗಂ ದೃಷ್ಟಮಂತೋರಿ
ನಿಷ್ಠೆಯಿಂಭಜಿಸುವರಿಗಿಷ್ಟಾರ್ಥವನು ಸಲಿಸಿ [ ತನ್ನ |
ದುಷ್ಟದಾನವರ ಖಂಡಿಸ್ಸಿಮಾಯೆ ಘನತರದ
ಶ್ರೇಷ್ಠತ್ವವಂ ಕಳಸುತ ಕರುಣವೀವುತಲಿ ನೈಷ್ಠೆಯಿಂ ಪುರದೊಳೆಸೆದ ||೩||

ಪುರವೆಸೆದುದಿಂದ್ರಿಯರಿವರ್ಗಂಗಳಳವಳಿದು
ಪುರವೆಸೆದುದಬ್ಜಭವ ನಗರಿಯನ್ನೇಳಿಸುತ
ಪುರವೆಸೆದುದಾನವಾಂತಕ ಪುರವನಗುವೊಲಾ ಪುರಹರ ಮಿಗಿಲ್ವೃದ್ಧಿಯು |
ಪುರವೆಸೆದುದೀರೇಳುಭುವನಕಧಿಪತಿಯಾದ
ಪುರವೆಸೆದುದಭವ ಮಲ್ಲೇಶನೊಪ್ಪಿಹವಾಸ
ಹರನಿರುವ ಕೈಲಾಸವೆಂದು ಪೇಳುವೆನಿದನು ಸ್ಮರಧೀರರಾಲಿಸುವುದು ||೪||

ಮಣಿಮಾಡದಿಂದೊಪ್ಪುತಿರೆ ಸತ್ಯಸಮತೆಯಿಂ
ಗಣಕುಲದ ತಿಂಥಿಣಿಯ ಪಂಙ್ಕ್ತಿ ಶೋಕೆಯೊಳೊಲ್ದು
ಪ್ರಣವಪಂಚಾಕ್ಷರಿಯ ನಿತ್ಯಧ್ಯಾನದೊಳಾಗಲೆಣಿಸುತಾ ಪರತತ್ವವಾ |
ಅಣಿಮಾದಿ ಸಿದ್ಧಿಗಳ ಪಡೆವ ಮುನಿಗಳ ಮೊತ್ತ
ತ್ರಿಣಯನಂ ಹೃತ್ಕಮಲದೋಳ್ಜ್ಞಾನಿಪರ ಚಿತ್ತ
ವೆಣಿಕೆಗೊಳ್ಳುವ ದೇವನಿಕರವೆಸೆದೊಪ್ಪಲವ ಫಣಿಪತಿಗೆ ಹೊಗಳಲರಿದು
[ ||೫||

ಈರೇಳು ನಿಲಯ ಚೌಭಾರದುಪ್ಪರಿಗೆಗಳ
ಸೇರಿಭದ್ರದಸ್ರ್ಯಾಭಂಜಿಕೆಗಳೋವರಿಯ
ತಾರೇಶನಂ ನಗುವಲೋವೆ ಚೀರಣಗೆಲಸ ಚಾರುವೇದಿಕೆಗಳಿಂದ |
ವಾರಣದೊಲೊಪ್ಪೆ ನವರತ್ನಮಂ ಸರಗೊಳಿಸಿ
ತೋರಣದಲೆಸೆವವಾನಿಳೆಯ ಪಾಸಂಗಳೊಳು
ಚಾರುತರ ಮಂಟಪಗಳೆಸದು ರಂಜಿಸುತಿಹವು ಮಾರಹರ ಭವನದಲ್ಲಿ || ೬ ||

ಮುದದಿಂದ ಮುಂದಣಿಸಲೆಸೆವ ಗಣಿಕಾಜನದ
ಸದನ ಚೌಕಗಳೋವರಿಯ ಭದ್ರಸಾಲೆಯೊಳು
ಮದದಂತಿಕಾಯ್ವುವೆತ್ತಾದ್ವಾರಗೇಹ ಮೃಗಮುದದ ಸಾರಣೆಗಳಿಂದ |
ವದಗಿ ಕಣ್ಗಡ್ಡವಹ ರಂಗವಲಿ ಪನ್ನೀರ
ಹದಗೊಳಿಪ ಚಂದನ ಜವ್ವಾದಿ ಸಾದುಗಳಿಂದ
ಚದುರೆಸೆವ ಗಣಿಕಾಜನದ ಕೇರಿಯಸದತ್ತು ಮದನಹರಸಾಜ್ಞೆಯಿಂದ
[ || ೭ ||

ಹುರುಡಿಗಂತದುವಾಸ ಹೋರಟೆಗೆಯುದುವೆ ಸ್ಥಳ
ಸರಸದ ನಿವೇಶ ಮತ್ಸರಿಸುವರ ಸದ್ಮವಂ
ಹರಟೆಯಾಲಯುವೆತ್ತದುರುತಮುದ ಕೃತ್ರಿಮಂ ನಿರಸದಾಗರಗಳೆಸೆವಾ
ಕರುಣದುಬ್ಬಟೆಯು ಸಿಂಗರದ ಜಾಣೆನಭೂಮಿ
ಇರದೆ ಟಕ್ಕಿನಗೃಹಂ ತ್ವರಿತದಾಲಯುವೆಸವ
ಗುರುವಿಕೆಯ ಸಾಲುಮನೆ ಗುರುಕುಜೆಯರಾಟಗಳ ಪರಿಯಾಯು
[ಕೇರಿಯುಸೆಯೆ || ೮ ||

ಮುಗಿಲ್ಗೆಸವ ಮಂಟಪದ ಬಾಗಿಲ್ಗಳ್ವಳಯುದಿಂ
ಜಗುಲಿ ಚಪ್ಪರ ಚೌಕವೆಸವ ಮಾಡಂಗಳಿಂ
ತೆಗೆದಮೃತಕಾಸಾರ ಉಪವನದ ಪಂಜ್ಕ್ತಿಯಿಂ ಖಗರುಚಿಯುಸಾರ
ಸೊಗಯಿಸುವ ಶುಕ ಪಿಕ ಮಯೂರ ಚಾಳಾಂಕಿಗಳೋ [ಮಯದ
ಳೊಗೆದ ಮೃದುನಾದಮಂಕುರಿಸೆ ಹರುಷಂಬಡೆವ
ಸುಗುಣ ಸಂಪನ್ನೆಯರು ಜಾರಭವನದೊಳಾಗ ಬಗೆಗೊಳಿಸಿ ಮೆರೆದರಂದು
[ ||೯||

ಸರಸಿರುಹ ವದನ ಕುಟಿಲಾಳಕಂಗಳುವೆತ್ತ
ಪೆರೆನೊಸಲ ಬಿಣ್ಪು ನಯನೋತ್ಪಲ ಸಮಾಕರಂ
ತರದಂತ ಪಂಜ್ಕ್ತಿ ಫಲಪಕ್ವ ಬಿಂಬಾಧರದ ಕಿರುನಗೆಯ ಮಂದಸ್ಮಿತ |
ಮೆರೆದ ಗಂಡಸ್ಥಲಂಗಳ ಶಂಖದುರುಕೊರಳ
ಗುರುಕುಚದ ಬಲ್ಪು ನಾಭಿಯ ತಂಪು ಕೃಶಮಧ್ಯ
ವರಲತೆಯ ತನು ಮತ್ತಗಜಗಮನಗತಿವೆತ್ತ ತರಳೆಯರ ಕೇರಿಯೆಸೆಯೆ
[ ||೧೦||

ಪರಿಕಿಸಲು ಸುರಕನ್ನೆಯರ ಮೊತ್ತಮೋಯೆನಲು
ಗುರುಪಯೋಧರಿಯರಾರತಿರೂಪವೆತ್ತಾಗ
ಸರಸಿಜಾನನ ಚಿತ್ರವರರೂಪುವಡದಾಗ ವರರುಚಿಯನಿಂತೆಗಳುವ |
ತರಳೆಯರದ್ವೈತರಲನಂತಕಾಂತಿಯನ್ವೈದಿ
ನೆರೆದುನಿಂತಿರಲು ಸೌಧಾಗ್ರಮಂದಿರದೊಳಗೆ
ವರಶುಕಬಕಂ ವಸಂತನ ಬಯುಸುವಂತಾಗ ಪರಸಿದರು ಪ್ರೌಢಜನರ
[ ||೧೧||

ಹಾಸುಮಂಚದ ಮೇಲೆ ಅರಳುಮಲ್ಲಿಗೆಗಳುಂ
ಲೇಸುತಲೆಗಿಂಬು ಮೃದುವಾಸಿಕೆಯ ಗದ್ದುಗೆಯು
ಬಾಸಣಿಪ ಕನ್ನಡಿಯು ಕುಂಚಕಾಳಂಚಿಯೊಳ್ವಾಸವಹ ಸ್ಥಳಮೆರದುದು||
ಬೀಸಣಿಕೆ ಗಿಂಡಿ ತಂಬುಗೆವೆರೆದ ಪಾನಪೀ
ಯೂಷವೆನಿಸುವ ಸದೃಶವಡೆದಂತಚಿಪ್ಪುವಿ
ಳಾಸದಿ ವಿಚಿತ್ರತರವೆಸೆದು ಮೆರದಿರಲುಂ ವಿಳಾಸಿನೀಭವನವಂದು ||೧೨||

ಜಾಣೆಯರ ನಿಳಯ ನಿಳಯಂಗಳಾವಾಸದೊಳು
ವಾಣದೀವಿಗೆ ಮಂಗಳಾರತಿ ಚಂದನವೆರೆವ
ಸಾಣೆಕಲ್ಲನು ಲೇಪನವತೇಯ್ದು ಘಟಿಗಳು ತಾಣಂಗಳೊಳುರಂಜಿಸೆ||
ಕೋಣೆಚೌಕಂಗಳೊಳು ನೆಲವಾಸು ಸುಪ್ಪತ್ತಿಗೆ
ವೀಣೆಕಿನ್ನರಿವಾಸು ಸ್ವರಮಂಡಲಗಳನಿತು
ಹೂಣಿಸುವ ವಸ್ತ್ರವಾಭರಣವಿಡುವಾಕೋಣೆ ತಾನೆಸೆದುದಾಲಯದೊಳು
[ ||೧೩||

ತರಳಲೋಚನೆಯುರುಪ್ಪಡದ ಮೇಲ್ವಾಸಿನೊಳು
ಪರಿಮಳಂಗಳನಾಂತು ಪುಷ್ಪೋಪಚಯವೆರಸಿ
ಸರಕಟ್ಟೆ ಜಾಜಿಮಲ್ಲಿಗೆಮೊಲ್ಲೆ ಪರಿಪರಿಯ ಪರಿಮಳಂ ಬೀರುವರಲಂ ||
ಬೆರೆದಲಾಮಂಚ ಮುಡಿವಾಳ ಬಿಜ್ಜಣಿಗೆ ಬಡಿ
ಸಿರಿಗಂಧ ಕಸ್ತೂರಿ ಜವ್ವಾದಿಗಳ ಚಿಪ್ಪು
ಭರಣಿ ಉಪಕರಣವಟ್ಟುಲುಪಡುಗ ವಡ್ಡಣಿಗೆ ಮೆರೆಯಲ್ಕೆಟ್ಟುವಪಾವುಗೆ
[ ||೧೪||

ಎಳೆವೆಣ್ಗಳಿಪ್ಪ ಮೃದುವಾಸು ಪರಿರಂಜಿಸಲು
ಕಳಹಂಸತೂಳತಳ್ಪದವಾಸು ಗೆಲದೂಳುಂ
ಯಲೆ ದಟ್ಟೆಯಿಂ ಹೊಳೆವ ಭರಣಿ ಸುಣ್ಣನಕಾಯಿ ಫಲಪಕ್ವರಸದಚಿಪ್ಪು ||
ಬಿಳಿಯಶಲ್ಲೆಯದಲ್ಲಿ ಮುಖಪಾವುಡದವಸ್ತ್ರ
ಸುಳಿವ ತಂಗಾಳಿ ಸೂಸುವ ಗವಾಕ್ಷಿಗಳಿಂದ
ಸೆಳೆಮಂಚ ಮೇಲುವಾಸಿನೊಳಾಡುವರೆವೆಣ್ಣನಿಳೆಯು ಕರ ಮೆರದು
[ ದೊಂದು ||೧೫||

ನಡೆವ ನಟನೆಯನೋಡಿ ಕಳಹಂಸ ಪರಿದೋಡೆ
ನುಡಿವ ಚದುರಿಂಗೆ ಗಿಳಿಸ್ವರವಡೆದು ಕುಗ್ಗಿದವು
ಮುಡಿದ ಮುಡಿಯುಂ ಕಂಡು ನವಿಲಭರವಶತಗ್ಗಿ ಜಡಿವಕ್ಕಿರವಸ
ಇಡಿದಿದ್ರ್ದ ಕುಚಗ ಸಂಭ್ರಮುವಳಿದ ವೆಣೆಯುಕ್ಕಿ [ ಮುಗಿಯೆ ||
ನಡುಮಧ್ಯಕಂ ತೊಲಗುತೆಡೆಯಾದ ವಕ್ಷಶಿಸು
ಮಡದಿಯರ ಭಾವವಂಕುರಿಸೆ ಬಡವಾದವಿವು ಕಡುಚಾಣರಂತಾಗಲು
[ ||೧೬||

ಅಳಿಗಳಂ ಪಳಿವುತಿಹ ಕುಟಿಲಾಳಕಗಳಿಂದು
ಕಳಿಗಳಂ ನಗುವೊಲಾ ಮೊಗರಸದ ಕಾಂತಿಯು
ತ್ಪಲದಳಗಳಂ ಹಾಸ್ಯಗೆಯ್ವ ಕುಡಿಗಂಗಳತಿಸಲೆ ಕಾಂತಿಯ ನೊಸಲಿನ ||
ಎಳೆಲತೆಯ ನೇಳಿಸುತ್ತಿಪ್ಪ ನಳಿತೋಳ್ಗಳಂ
ಜಳವರ್ತಮಂ ಮಿಗುವ ಸುಳಿನಾಭಿ ಕಂಗಳೊಳು
ಎಳೆವಾಳೆಶಶಿಯುಲ್ಲ ಕಳೆಯಾಂತದುರುವೆತ್ತಯಳೆವೆಂಗಳಿಂತೆಸೆದರು ||೧೭||

ಮಡದಿಯರ ಬಲವೊಡ್ಡಿನಿಂದುದಾರಾಜಿಯೊಳು
ನಡೆವನಟನೆಯೆವಾಜಿ ಜಘನವೇರ್ಮತ್ತಗಜ
ಬಡನಡು ರಣಾಹಿ ಮೇಲ್ವುರುಬು ಪೊಂಗೋಟೆಯಿಂ ಕುಡಿಉರ್ಬ್ಬುರ
ಇಡಿಕಿರಿದ ಕುಚರಥಪಥಂಕರಣ ಪರಿಘಮುಂ [ಕಣ್ಸಾರಳಿನಾ ||
ಡಿಡುವ ಚಕ್ರಂಗಳುಂ ಕರ್ಣಪತ್ರಂ ಪೊಳೆವ
ಗಡಿಸಿಡುವ ಪೆಟವು ಮೂಗಿನ ಮುತ್ತುವಿನಲೊಡ್ಡಿ ಪಡೆ ನಡೆದುದೇಂ
[ವಣ್ಣಿಪೆಂ ||೧೮||

ಬಳಿಕ ಹೆಂಗಳ ಚೆಲ್ವ ವರ್ಪಾವಳಿಯ ನೊರೆವೆ
ತಳವುಗಂಗಳು ಮಿಂಬುಸುಳಿವ ಸುಯಿಲ್ವೆರ್ಗಾಳಿ
ನಳಿಪುರ್ಬು ಸುರಚಾಪ ಪವಳಕಾರ್ಮುಗಿಲುಗಳ ಧ್ವನಿಗಳೆತ್ತಮೊಳಗು ||
ವಳಿತ್ರಯಂ ನೀರ್ಗದಿರು ಜಳದಸಿತಗಮ್ಯದಿಂ
ಕಳೆವೆತ್ತ ಮುಖಕಾಂತಿ ಸೂರ್ಯೇಂದು ಮಂಡಲಂ
ಒಳುನುಡಿಯ ಸೊಬಗಿನುನ್ನತ ಸೋನೆಗರದರಾ ಜಲಜಾಕ್ಷಿಯುರ್ಪಟರ
[ ನೋಲತೆ ||೧೯||

ಮುತ್ತಿನ ಸರಗಳಂ ಧರಿಸಿ ಮೈಯ್ಯೊಳಗೆ ಕಳೆ
ವೆತ್ತ ಚಂದನದ ಸಿರಿಗಂಪಾವರಿಸಿ ಕರ್ಣ
ಪತ್ರದೊಳು ಬಿಳಿಯಮುತ್ತಡಸಿದೋಲೆಯನಿಕ್ಕಿ ವಸ್ತ್ರಬಿಳಿದುಡಿಯನುಟ್ಟು ||
ಮುಸುಕದೂಳುಂ ಮಲ್ಲಿಗೆಯಸರವ ತುರುಬಿಯಂ
ತಿತ್ತ ಸುಲಿಪಲ್ಲುಕಂಗಳ ಬೆಳಗುರಂಜಿಸಲು
ವೃತ್ತಕುಚೆಯರು ಮುತ್ತಿಗೊರದ ಪುತ್ಥಳಿಯಂತೆ ವರ್ತಿಸಿದರೆಲ್ಲೆಡೆ
[ ಯೊಳು ||೨೦||

ಮುಡಿಯುರಳಭಾರಕಂ ಕೊರಳುನುಸಿದಾಡೆ ಪೊಂ
ದೊಡಿಗೆ ಕುಚಭಾರಕಂ ನಡುಮಧ್ಯೆ ಬಡವಾಗೆ
ಉಡಿಯಕಾಂಚಿಯದಾಮ ಜಘನಭರಕಂ ಕಾಲುನಡೆಗೆಟ್ಟವತಿಭರದಲಿ ||
ಕಡೆಗಣ್ಣನೋಟಕತಿ ಪರಿಜನದ ಕಣ್ಮನಂ
ವೊಡನೆ ಬಸವಳಿವು ಕಳವಳಿದವೆನೆ ಹೆಂಗಳಿಗೆ
ಪೊಡೆಯುರಲ ವಕ್ಷನಜಮುಖ ಸಾವಿರಾಲಿಯನುಪಡೆದಸುರನದೆಂತುಟೋ
[ ||೨೧||

ಕಾಳಿಯಂ ನೆರೆ ಕಳೆದು ಕಳಹಂಸಗಮನೆಯರು
ನೀಲಿಯಂಬರವುಟ್ಟು ನಿಲುವುಗನ್ನಡಿನೋಡಿ
ನೀಲಮಣಿರತ್ನಸರವಂತಳೆದು ಕಣ್ಗಳೊಳು ಕಾಳುಕಾಡಿಗೆಯನಚ್ಚಿ ||
ಕಾಳಾಹಿವೇಣಿಯರು ಕಸ್ತುರಿಯ ತಿಲಕವನು
ಮೇಳದವಿಟರ್ಗಂಡು ಕುಡಿಪುರ್ಬನಲುಗುತಂ
ಕಾಳಗತ್ತಲೆವೆರಸಿಬಾರೆಂಬ ಪ್ರೌಢೆಯರ ಮೇಳವೊಂದೆಯೆಸದುದು ||೨೨||

ತೊಡೆತೋಳು ಬೆರಳು ಕೊರಳಿನಿತು ಕೋಮಲಗಾತ್ರ
ಮಡಕಾಲು ಕಟಿಯೆಂಬ ವಲ್ಪಾಕರಗಳಿನಿತು
ನಡು ಕಪೋಲಂ ಭಾಳ ಕುಚಗಳಿನಿತುಂ ತೋರಪಡೆದರತಿಲಾಲ್ಯವೆನಿತು ||
ನುಡಿಬೇಟವಾಗೆಸೆವ ಕಮಲಾನನದ
ಜಡಮತಿಯ ನುಳಿದದಾ ನಾಮೋದ ಸತಿಯರಂ
ಎಡೆವಿಡದ ಹಸ್ತಿನಿಯಜಾತಿ ಸ್ತ್ರೀಯರು ನಿಂತ ರೊಡನೊಡನೆ ವೀಧಿಯೊಳಗೆ
[ ||೨೪||

ಅಳಕನಯನಂಗುಲಿಯು ಜಂಘೆ ಕೋಮಲವಿನಿತು
ಮೊಲೆಬಟುವು ಕಂಗಳು ಕರಂ ಕಂಕುಳಂ ಕುಣಿಯು
ತೆಳುಕವಲ್ಪಸರ್ವಮನಗೊಳಿಸುವ ನಿತಂಬದಿಂದಳಲು ಬಿಟ್ಟಿತುವದನದಿಂ ||
ಕಳೆಯಾಂತ ಸತಿಯುರುಂ ವರಹಗತಿಯಿಂದೈದಿ
ಬಳಿಸಂದು ನಿಂದರಾ ನಿಂಬ ಮೋದವನ್ನೈದಿ
ವಳನುಡಿಗಳಲಿ ವಿಟರನಲೆವ ಚಿತ್ತಿನಿಯರುಂ ಸಲೆಸಂದು ಕೂಡುತ್ತಿಹರು
[ ||೨೫||

ನಳಿತೋಳು ಜೆಲ್ವುವಿಗೆ ಕಳೆಯುಳ್ಳ ಜಘನದಿಂ
ದೆಳೆವೆರೆಯನಾಂತಧರ ಮುಖವಳಕ ಕಾಂತಿಯುಂ
ತಳಿತ ಪೂವತಿರಾಗ ಗೌರವದ ವರ್ಣ ಪಿಂಗಳ ನೇತ್ರ ಕಳೆಯೇರುವಾ ||
ಸೆಳೆಯಾಂತ ಗುರುಮಧ್ಯ ವಲ್ಪ ನೀಲಂರೋಮ
ವಳೆಯಾಂತ ಜಂಘೆ ಪದತಳದಿಂದ ಮೆರೆದರಾ
ತಿಳಿಮೋದ ಪಾಂತಾಗಲೊಳನುಡಿಯ ಶಂಕಿನಿಯರಲಿ ನೆಲೆಯ ಮಾಡ
[ ದೊಳಗೆ || ೨೬ ||

ಬಿಂಬಾಧರದ ಮೀನಲೋಚನದ ಗುರುಕುಚದ
ರಂಬುಜಾನನ ವಬುಜಗಂಧಿ ಪಿಡಿನಡು ಮಧ್ಯೆ
ತುಂಬೆಗುರುಳಿನ ನಿಬಿಡ ಕುಂಭ ಶ್ರೇಣಿಯ ನಾಂತ ಅಂಬುಗಣೆಯು
ಅಂಬುಜ ದರಳ್ತಳಿರ್ದಳವಾಂತ ಪದತಳದ [ ನುಣ್ಗೊಡೆಗಳ ||
ಮುಂಬರಿವ ಪಿಪ್ಪಲ ದಳವ ಪೋಲ್ವ ಗುಹ್ಯವೆಸೆ
ದಿಂಬುವಡೆದಿರ್ದ ಪದ್ಮಿನಿಯರೆಸೆದಿರ್ದರಾ ಕಂಬುಕಂದರ ನಿದಿರೊಳು
[ || ೨೬ ||

ಇರೆ ಸತಿಯರ್ಕಳೆ ಶುಕ್ಲ ಪಕ್ಷ ಪಾಡ್ಯಮಿಯಾದಿ
ಪಿರಿದು ಬೆರಳಡಿ ಗುಲ್ಫಜಾನು ಜಘನಂಗಳಿಂ
ತಿರಲು ಸುಳಿಹೊಕ್ಕುಳುರುಳುತಳ ಪಯೋಧರ ಭುಜಂ ಕೊರಳೊತ್ತು
ಅರೆವೆರೆಯ ಪೋಲ್ವಧರ ಕಣ್ನೊಸಲು ಶಿರವಾಂತು [ ಕದಪಿಂದಲು ||
ಸರಸಿಜಾನನೆಯರುಂ ಷೋಡಶದ ಭಾಗದೊಳು
ಚರಿಸುವಾ ಕಳೆಯರಿತು ಕೂಡುವ ವಿದಗ್ಧರುಂ ಬೆರಸಿ ಸುಖವೆಯ್ದು
[ ತಿಹರು || ೨೭ ||

ಉಗುರಲತೆ ಗರೆವೆರೆಯ ನಖ ತಾರೆಯುಂಬಿವಂ
ಜಗುಳ್ದು ಸೂಸುವ ಸುಯಿಲು ಮಾರುತನ ನೇಳಿಸುತ
ನೆಗದೊಗೆವ ಪದ ಮೂಡಗಿರಿಯು ಮೆಟ್ಟುವೊಲು ವಾಗಸವನ್ನು
ಮುಗುಳಂಬ ಸ್ವೈಸರಲ ಬೀರವಂ ಪಾಡುತಲಿ [ ಅಡರ್ವಂದದಿ ||
ಮೃಗಧರನು ಕ್ಷಯರೋಗಿ ಕಳೆಗೊಟ್ಟನಮರರ್ಗೆ
ಮಿಗಿಲಾದ ಕಳೆ ತನ್ನದೆಂದು ಮೋದೊದವುತಂ ನೆಗೆದೊದೆದಳುಯ್ಯಲೆ
[ ಯನೂ ||೨೮||

ನೆರೆದ ಸತಿಯರು ರಾಟಳವ ಪೋಲ್ವ ಘನಚೆಲ್ವ
ವರಸ್ತಂಭ ಮೇರು ಸ್ತ್ರೀಯರತಂಡ ತಾರೆಯೆನೆ
ಭರಣಿ ಕುಚೆಯರುಂ ಘನಚಿತ್ರ ಹಸ್ತಿಯರು ತಿರುಪಶ್ವ ವೇದವದಗಿ ||
ಕರಿಗಮನೆಯರು ನಿಂಬದಳವಾಂತ ಪುರ್ಬಮುಗೆ
ಸರಸಿಜಾತೆಯರು ರೋಹಿಣಿಯ ಕಳೆಗೊಂಡಂತೆ
ತಿರುಗಿದರು ರಾಟಳದ ಸುತ್ತುವಳಯದೊಳಾಗತಿರುಮನಕ್ಷದಂತೆ || ೨೯ ||

ಸೊಗಸು ಮಿಗಿಲೆಳೆವಾಳೆ ಕಳೆಯಾಂತ ಗುರುಗಂಭ
ನೆಗೆದೊಡೆವಳಡಿ ಜಘನವಿಂತೊಪ್ಪಿತೋರುತಿರೆ
ಮಿಗೆಭಾಷೆ ಕುಚೆಯಾಸ್ಯ ಸೊಗಸಿಂದ ಸರಪಳಿಯ ಪಿಡಿದಂಬರದೊಳಾ
ಖಗವಾರಿ ಲಾವುಕೆಗಳ್ ಗಿಳಿಕೋಗಿಲಿಂಚರದ [ ಡುತಾ ||
ಮುಗುಳಂಬ ನೈಸರಲ ಬೀರಮಂ ಪಾಡುತಲಿ
ಮೃಗಧರನ ಕಳೆಗಳಂ ಮಿಗುತುಯ್ಯಾಲಾಡುವರು ಸುಗುಣತರದಿಂ
[ ಮೆರೆವರು || ೩೦

ನಸಿದ ನಾಸಿಕ ಸಿಳ್ಳ ಗಣ್ಣು ಬತ್ತಿದ ಗಲ್ಲ
ರಸವರತ ತುಟಿ ಬೆಳ್ಳುವಾಯಿ ಗಂಟೆದ್ದ ಹಣೆ
ಕುಸಿದ ಕೊರಳುಂ ಬತ್ತುಮೊಲೆ ಬೆನ್ನುಬಾಗಿ ತಂಬಿಸಿಲೊಳುಂ ಬಾಗಿ
ಮುಸಿಗಪ್ಪಡಮನುಟ್ಟು ಕೆಕ್ಕರಿಸಿ ಕೆಮ್ಮುತಂ [ ಲೊಳಗೆ ||
ಶಶಿಕಳಗೆ ಮರಪಿಟ್ಟು ಬಾಗಿಲೊಳು ನಿಂತಾಗ
ಪೊಸ ಶೂಲೆಯುಪಟಳಕೆ ನರಳ್ವ ಜಾತಿಯರಾಗಲೆಸೆದರಾ ವೀಧಿ
[ ಯೊಳಗೆ || ೩೧ ||

ಬಿದ್ದಮೊಲೆಯಂ ಎತ್ತಿ ಬಿಗಿದು ರವಕೆಯ ಕಟ್ಟಿ
ಗುದ್ದುಗಣ್ಣಿನ ಘೋರಸೊರಸಿ ಮುಸಿಯಂ ತೊಡದು
ದೊಡ್ಡೆಗುರುಳಿಗೆ ನುಂಪ ಕೊಡದೆಣ್ಣೆ ಗಂಟಿಕ್ಕಿ ವೃದ್ಧತ್ವ ಕಾಣಿಸಮೊಲು||
ತದ್ದು ತುಟಿಯಂ ಕೆರೆವುತಾ ಪುರಜನಕೆ ಹಳೆಯ
ಸುದ್ದಿಯಂ ಹೇಳುತ್ತ ಮುದಿಸೂಳೆ ಬಾಗಿಲೊಳ
ಗಿದ್ದಳಾ ಸೂಡರ ಪಿಂದಿಕ್ಕಿ ಮುಂದೆಸೆಯೊಳಾ ಅರ್ಧರಾತ್ರೆಯು
[ ಸಮಯದಿ || ೩೨ ||

ಕೋಲಾಟದುರುತರದ ಬಾಲೆಯರ ಸಂಭ್ರಮಂ
ಕಾಲಪಟ ತರಚಳಕ ತಳಿರೆಸೆವ ಕೊರಳ್ಗಳಂ
ತೋಳ ಸಮವೆತ್ತ ಸರಸದ ಕೊರಲ್ಗಳಳವಡಿಕೆ ಮೇಲು ಭಾಷೆಯ
ಕಾಳುಮತಿಗಳ ನುಳಿವದಾ ಕಪಟತರ ಕೋಲ [ ಕೋಲ್ಗಳ ||
ನೀಲೋತ್ಪಲವ ತಳೆದಲೋಲ ಕಣ್ಗಡೆಗೋಲ
ಬಾಲೆಯರು ಮುಡಿದ ಪೂಸರಗೋಲ್ಗಳಲ್ಲಾಡೆ ಮೇಲುರಂಜಿಪ
[ಕೋಲ್ಗಳ ||೩೩||

ಚಂಡನಾಡುವ ಸತಿಯರುರುಗಳ್ದಂಡಿಕರಮೊಸೆಯೆ
ಮುಂಡೆದೊಂಗಲು ಗುರುಳ್ಗಲ್ಲಾಡೆ ಪುಟಚಂಡ
ಪುಂಡರೀಕಾಕ್ಷಿ ಕಣ್ಣುಡಿಪರಿವ ಹರಿಚಂಡ ತಂದಿಡುವ ವರಸತಿಯರ ||
ಮಿಂಡಿಯರು ಪರಿದಾಡೆ ವಕ್ಷರುಹಪಿಡಿಚಂಡ
ಕಂಡುತೇಪರಿವ ಪರಿದಾಟಮುಡಕೋಲ್ಕಂಡ
ನಂಡಲೆದು ಬಿಡದಪ್ಪುವರ ಲಗ್ಗೆಯರ್ಚಂಡ ದಂಡಿಯೆಸೆದುದು
[ನೋಳ್ಪರ ||೩೪||

ಬಲ್ಲಹರಬಲ್ಲಹಂ ಯೆಂದೊಲಿದೆ ಮುಗಳೆಯುವ
ಕಲ್ಲಿಯೊಳಗಣನೆಲ್ಲಿ ಖಚರ ಪಥದಾಳಾಪ
ಮಲ್ಲಿಗೆಯದಂಡೆ ಮುಂಡೆಯೊಳಿಟ್ಟು ವನಭವ್ಯಹುಲ್ಲಮೇಲಣಮುಂಬಿನಿ ||
ಕಲ್ಲಮೇಲಣಪುವ್ವು ಕಳೆಹೀನಶಶಿಯಂತೆ
ಪುಲ್ಲವಿಕಸಿತಮಾದಯುಲವದನುರದೊಲವನು
ನಲ್ಲೆ ಮಾತಾಡಿವರ ಪರಿಯಾಯ ಗತಿಯೊಳಂತುಲ್ಲಾಸವಡೆವನಿವನು
[ ||೩೫||

ಅಂಬುಜದಳವಪೋಲ್ವ ಮೃದುನೇತ್ರೆ ನೀನವನ
ನಂಬದಿರು ನಂಬಿದರೆಯಾಡಂಬರದವಿಟನು
ತುಂಬಿದಂಬುಧಿಯೊಳಹ ಗಂಭೀರಸ್ವರದಂತೆ ನಿಂಬಫಲವಣ್ಣಳಂತೆ ||
ಅಂಬರದೊಳಭ್ರಛಾಯುಂನೆರದು ಹರದಂತೆ
ಕುಂಭಿಸವಿದೊಡೆಯದಿಹ ಬೆಳಲ ಪಣ್ಣಂಕವನು
ಜಂಬುನೇರಿಲ ಪಣ್ಣಿನಂತಿರೆಯ ಮೋಹದನ ನಂಬದಿರು ನಾಸಾರಿದೆ||೩೬||

ವಿನಯ ಪೋದವಬಾರದೇತಕೆ ತಡದನು ಕೆಳದಿ
ಮನವಲರಿಚಿಗಿತು ಬೆಂಬಲವಾದುದರಿಂದ
ತನುತಕ್ಕೆ ಸುರತಕಾತುರವಾಂತ ತವಕದಿಂಸೊನೆ ಬೆವರುಗದ್ಗದಿಸುವ
ಘನತಾಪವಡೆದು ಸುಶ್ರನೆ ಸುಯ್ದು ಚಿಂತಾಬ್ಧಿ
ವನಧಿಯೊಳು ತೇಂಕಾಡಿ ತಾಪವಡದಳವಿರಹ
ಘನಮೇಘ ತೋರದವಗ್ರಾಹಿಯಂತಾದರೆಲೆ ಮನಪ್ರಿಯ್ಯನುಳಿಯ
[ಲೆಂತೋ ||೩೭||

ಸ್ಮರಕೇಳಿ ಯುಳಿದೋರ್ವ ವಿರಹವಾದಂಗನೆಗೆ
ಪರಪುಟಂನಳಿಗಿಳಿಂಚರಂ ಪಿಂಚರಂ
ಮರವಿಂದ ಮಾಂದಳಿರದಳ ವಾಸು ಜಳವಾಸು ಸಿರಿಗಂಧಯುರಿಗಂಧವು ||
ಪರಿಮಳದಳಂಗಳಂ ಪರಿದೆಯ್ದು ವಿಂಗಳಂ
ಮರುತತಂಪುಂಕೆಂಪು ಮಲಯಜವು ಪೊಸಜವಂ
ಕರಿಗುಬಿಳಿದುಂ ಸಣ್ಣ ವಿರಹವೇದನೆಯುವಳು ಯಿರುತಿರ್ದಳೊಂದೆಸೆಯೊಳು
[ ||೩೮||

ಕರಕರವತಾಪದಿಂದುರಿವ ವಾರ್ಧಿಯೊಳಮೃತ
ಕಿರಣನೆರೆಯೆ ಪರಿದಾನಂವೆಯ್ದು ವ್ರೊಲು
ಮರವಿಂದ ತರಣಿಕಿರಣಕೆಸೂಸಿ ನಗುವ್ರೊಲುಂವಿರಹವಾಂತ ಚಕೋರಿಗೆ ||
ನೆರೆವಶಶಿಕಿರಣದಿಂದುರಿತಾಪವಡದಿರ್ದ
ತರಳೆಗಂ ರವಿಶಶಿಯೊಲವಡೆದ ಪ್ರಾಣೇಶ
ಪರಿತಂದು ಸುರತಕಳೆಯಿತ್ತುಮನ್ನಿಸುವವರು ಇರುತಿರ್ದರೊಂದೆಸೆಯೊಳು
[ ||೩೯||

ನೋಡುವನು ನಗೆನೋಟ ಕಡೆಗಣ್ಣ ಪರಿದಾಟ
ನೋಡಿ ಬೆರಸುವಮನಂ ಮನವನಿಕ್ಕುವಘನಂ
ಕೂಡುವಿಂದ್ರಿಯ ತವಕ ತವಕವುಬ್ಬುವಕೃತಕಜೋಡಿಸುವತನುತನು
ಬೇಡಿ ಪಣವಂ ಪರಿವ ಪರಿವಮುದೊಳು ತೆರವ [ ವನು ||
ನೋಡಿಮನಸಿಕ್ಕಿದೆನು ಸಿಕ್ಕವಳ ವಸ್ತುವನು
ಗಾಡಿಯಿಂ ಮಿಗೆತೆಗೆವ ನಾರಿಯುರು ಮಿಗಿಲಾಗಿ ಆಡಿದರು ವೀಧಿಯೊಳಗೆ
[ ||೪೦||

ಬಾಲೆಯುರು ನಿಂದಿರಲು ಮೇಲು ಮಣಿಭದ್ರದೊಳು
ಕಾಲಕಿರುಮಿಂಚು ಮಂಟಿಕೆಯುಪೆಂಡೆಯುವೆಸೆವ
ಕೀಲಲುಳಿಘಂಟೆ ಸರಪಳಿ ವೀರ ಮುದ್ರಿಕೆಯನಾಲಿಂಗಿಸುವತನುವನ||
ತೋಳಬಂದಿಯ ಕಡಗಕಂಕಣದ ಭಾಪುರಿಯ
ನೀಲರತ್ನದ ಹಾರದೊಳಗೆಸೆವ ನವರತ್ನ
ದೋಲೆ ಚಿಂತಾಕ ಮೂಗುತಿ ತಿಲಕವೆಸೆವವರು ಮೇಲುಮಾಡದೊಳಿ
[ ರ್ದರು ||೪೧||

ಸ್ವರ್ಣವಳಿವರ್ಣವಳಿಯುಳಿಗಾವಿ ತೊಳಿಗಾವಿ
ವರ್ಣಸಂಪಗೆಗಾವಿ ಹಳದಿಬಿಳಿದಿಂದೆಸೆವ
ಪೂರ್ಣಚಂದ್ರನತೊಳಪ ಕಳಿವೆತ್ತಕಾವಿಯನು ವರ್ಣವೆಸವತಿಕಾವಿಯಾ ||
ಕರ್ಣಪತ್ರವ ಮಿಗುವ ಹರಿಹರಿಣಶಾರ್ದೂಲ
ವರ್ಣತನುಪಡೆವ ಹೊಂಬರಹ ಚಿತ್ರಗಳೆಸೆವ
ವರ್ಣವರ್ಣದ ಪಾರಿಪಟ್ಟೆಯುಟ್ಟೆಸೆದವರು ವರ್ಣಿಸಿದರೆಲ್ಲೆಡೆಯೊಳು
[ ||೪೨||

ನಿಡುಸುಯ್ಲನಾರಿಯರು ಕಡಿಗೊತ್ತನಿಕ್ಕುತಲಿ
ಕಡೆಗಿಳಿದು ಬೆಚ್ಚುತಡಿಯಿಡುತ ಮೆಲ್ಲಡಿಯೊಳುಂ
ತಡಿಕೆಯಂ ಪಿಡಿದು ಜೀಕೆಡದೊಲುಂ ತೆಗೆದು ಮುಂದೆಡೆಯಾಡುವರ
ನಡುಗುತಂ ನಡೆದು ಗೋಡೆಯ ಮರೆಯ ಸಾರ್ದೊಡನೆ [ನೋಡುತ ||
ನುಡಿಯೊಳಂ ನಡೆಯೊಳಂ ಗುಡಿಗಳಿಟ್ಟೆಡೆಯೊಳಗೆ
ವಡಗೂಡಿತೊಡೆಗಂಡೆಯಿಂ ಜಾರೆ ಜಾರವಮುಂಗೋಡೆಯ ಮರೆಯೋಳ್ನಿರ
[ ದರು ||೪೩||

ಇರೆಬೆಳ್ಳಿಪಟ್ಟಲೊಳು ಸುರೆಗುಡಿಯುವಳ ಭಾವ
ತರಸೀಪಿಪಿಡಿದಡಿಸಿ ಪಾತ್ರೆಯಂ ಚಪ್ಪರಿದು
ಹರಿವ ಹಕ್ಕಿಗೆ ಮುದ್ದುಗೊಡುತ ಶಿರವಲ್ಲಾಡೆ ಕುರುಳ್ಬುಚ್ಚೆ ಮಡ
ಉರಗಾಕೃತಿಯ ತಾಳ್ದು ಮುಖ ಚಂದ್ರಮಂಡಲವ [ ಕಲೆಯು ||
ತುರಿಸಿ ಕೇತುಗ್ರಹಣವರಿದ ವೊಲಾದುದಾ
ತರಳೆಯರು ಮದ್ಯಪಾನವ ಸೇವಿಸುವ ಚಿತ್ರತರವೆಂತು ಕಣ್ಗೆಸೆದುದೋ
[ || ೪೪ ||

ಬಿಡುಮುಡಿಯುದಲ್ಲಾಡೆ ಕುರುಳು ಕುಣಿದಾಡಲಾ
ಕಡೆಗಣ್ಣಕಾಂತಿ ಚಪಲತೆ ಕೋಡಿವರಿದು ತಂ
ನುಡಿಬೆಟ್ಕತಾಗಿ ಹಾರವ ಪರಿದು ಸೂಸುತಂ ನಡೆವವರ ಮೇಲುಗುಳುತ ||
ನಡೆಗೆಟ್ಟು ಮದ್ಯ ತಲೆಗೇರಿ ನಡು ಮಿಳಿರಲಾ
ಉಡಿಯ ಕಾಂಚೀದಾಮ ಸರಿಯಲಂತನಿತಕ್ಕೆ
ಮಡದಿ ಚಿತ್ರಭ್ರಮಣವಾಗಿ ಹುಡಿಯೋಳ್ ಹೊರಳಿ ಗಡಣಿಸುವ ಭಾವ
[ವೆಂತೋ || ೪೫ ||

ಬೆರಗಾಗಿ ನೋಡಲದು ಚಿಂತೆಕರಮೂಡಲುಂ
ಸುರಸುಯ್ಯಲದು ಮೂರು ಜ್ವರ ಪುಟ್ಟಲದು ನಾಲ್ಕು
ಶರೀರ ಬಡವಾಗಲೂಟವ ಬಿಡಲದಾರು ಮುಂಮರವು ವಿಕಳತೆಯದೇಳು ||
ಕರಿಗಟ್ಟಿ ಕಡುಮೌನವಡದ ಮಾನಿನಿಗೆಂಟು
ಬೆರಗಡರಿ ಮೂರ್ಛೆಗೈಯಲು ನವಮುವಸ್ಥೆಯಿದು
ಶರೀರ ತ್ಯಾಗಮುದಾಗೆ ದಶವಸ್ಥೆಯುಂಬಿವಂ ಅರಿವರೊಂದೆಸೆಯೊಳಿರಲು
[ || ೪೬ ||

ಪೆರಸಾರಲೊಂದು ಮೆಲ್ಲಡಿಯಿಡಲದೆರಡು ಮಿಗಿ
ಲಿರುತ ಮೊಗದೆಗೆಯೆ ಮೂರುಂ ಮುಳಿಯಲುಂ ನಾಲ್ಕು
ಕರೆಯೆ ಕೇಳದವೊಲಿರಲಯಿದು ನಿಜಮರ್ಮಮುಂತುರಿಪಿಡಿಲದಾರು
ಬರಿಮಾತಿನೊಳಗೇಳು ನಿದ್ರೆಯೆಂಟರೊಳಿರಲು [ ಬರಿಯ ||
ಗುರುತಿಡಲದೊಂಬತ್ತು ದ್ರವರತಿಯೊಳಿಂಮಿಗಿಲು
ಯಿರೆ ಪೂತ್ತಿಲುಂ ಪೋದನಲ್ಮೆಯುಂದೊರೆದಳಾ ವರಸುತೆಗೆ ಮಾತೆ
[ಯುಂದು ||೪೭ ||

ಮಗಳೆ ನಿನ್ನಯ ಮುಖಂತಿದುವೆರೆಯ ಚಂಪಕಂ
ಮೃಗನೇತ್ರೆ ನಿನ್ನದನ ಕೈರವಾಕ್ಷಿಯ ಸದನ
ಸುಗುಣ ನಿಧಿ ನಿನ್ನಾಸ್ಯ ತಾವರೆಯ ಮುಂದಾಸ್ಯಮಿಗೆ ಕರ್ಣಶಿಖರ
ಮುಗುಳ್ಮೊಲೆಯ ಕಾಂತಿ ನೀರಜ ಕುಟ್ಮಳಕೆ ಶಾಂತಿ [ವರ್ಣ ||
ಸೊಗಸೀವ ನಿನ್ನಧರವತಿಬಿಂಬಕಾಧರಂ
ಮುಗುದೆ ನಿನ್ನಯ ಶರೀರ ಲತೆವಲ್ಲಿಯಾಕರಂ ತನ್ಮಗಳ ಹೊಗಳದ
[ ಳೋರ್ವಳು || ೪೮ ||

ಕದಳಿ ಹರಿ ಕರಿಯೊಂದಿ ಸಾಮುವಂನುಳಿದಾಗ
ವಿದು ಪದ್ಮಕಳೆಗೊಂಡ ಕದನ ಸುಸ್ಥಿರರಾಗಿ
ಮಧು ಚಂಪಕದೊಲೊದಗಿ ಸ್ನೇಹಮುಂ ಬಲಿದಾಗ ಯುದ್ರುವಕ್ಕಿ ಕಳೆ
ಹೆದರಿಸುತ ಕುಮುದಗಳ್ಮಧುರ ವಚನದೊಳೊಂದಿ [ ಯೊಳೊದಾಗಿ ||
ಉದಧಿ ಚರಕರಿ ಹಕ್ಕಿ ಕಲತು ಮುಂದಸ್ಮಿತದಿ
ಮುದನಶರ ಮುದವೊಂದಿ ಸುದತಿಯೋಳ್ಮೆರೆಯಲಾ ಚದುರೆ ಮಗಳಂ
[ ಪೊಗಳ್ದಳು || ೪೯ ||

ಎಲೆಯನೊಡೆಯಡಕೆಯಿಂ ಘಳಿಸು ಸುಣ್ಣವನಿಕ್ಕು
ಮಲಯಜವಸುಡು ಕರ್ಪೂರವ ಲೇಪನಗೆಯ್ಯಿ
ಕಲೆಯರಿತು ಬಿಡು ವಿಟನ ಕೂಡು ನೀ ಹರುಷದಿಂ ತಲೆಹಿಕ್ಕನೊಡೆ
ಚಲದೊಳು ಮುಳುಗು ವಿರಹಾಗ್ನಿಯಂ ಕುಡಿನೀನು [ ಯೆನುತಲಿ ||
ಬಳೆಯ ನೋಡ ಬಳೆಯಂ ಕೈಗಿಕ್ಕು ನೀನೆನುತ
ಕಳವಳಸಿ ಕರೆದು ಹವ್ವನೆ ಹಾರಿ ಮರುಗುತ ಳಳವಳಿದಳೇಂವಗಳ್ವೆನು
[ || ೫೦ ||

ಕಣ್ಣಕಾಡಿಗೆಯನು ಸುಡು ಬಣ್ಣವುಂ ಹಚ್ಚೊಡನೆ
ಸಣ್ಣ ಮಲ್ಲಿಗೆಯ ಸುದ್ಧೂಪವುಂ ಮುಡಿಯೆನುತ
ತಣ್ಣೀರ ಹಾಸು ಗದ್ದುಗೆಯ ಕುಡಿ ನೀಸೆನುತ ಮಣ್ಣನವಳೊಳು
ಕಣ್ಣೆಯನು ಕಡೆ ನೀನು ಬೆಣ್ಣೆಯನು ಕಟ್ಟೊಡನೆ [ ಪೊಯ್ಯನೆ ||
ಚಿಣ್ಣನಂ ಕೊಡುನೀನು ಹೊನ್ನ ಸಲಹೆನುತಲಾ
ಹೆಣ್ಣ ವಿಕಳತೆಯಿಂದ ನುಡಿದಳಾ ದೂತೆಯೊಳು ಬಣ್ಣಿಸಲದೇಂವಗಳ್ವೆನು
[ || ೫೧ ||

ನಡೆನೋಟ ಶೃಂಗಾರ ಮೃದುನುಡಿಯು ಕರುಣರಸ
ಬಿಡದಲೆವನೊಳು ಹಾಸ್ಯ ವಿದ್ರು ಗಾಣಲದು ವೀರ
ಕಡೆಗಣಿಸಲದ್ಭುತ ನುಡಿಗೇಳದಿರಲು ಭಯ ಮುಡಿಗಿಕ್ಕಲಾ ಭೀಭತ್ಸ ||
ಮಡದಿಯರ ಮೇಳದಿಂದಿರುತಿರಲು ರೌದ್ರವಾ
ಕೊಡುವ ಕೊಂಬೆಡೆಯಬೇಡಿದ ಸೀಯೆ ಶಾಂತರಸ
ಪಿಡಿದು ಮೆರೆದರು ಹೆಂಗಳಾ ನವರಸಂಗಳಿಂ ಮೃಡನಿದಿರ ವೀಧಿಯೊಳಗೆ
[ || ೫೨ ||

ಬಾಲಮುಗ್ಧೆಯು ಪ್ರೌಢ ಲೋಲೆ ಯೆಂದೆಸಿಸುವರ
ಕಾಲೋಚಿತದಿ ಕೂರ್ತು ಕೂಡುತಿಹ ವಿಟನಿಕರ
ಬಾಲೆಗತಿ ಫಲಪುಷ್ಪ ಪ್ರಿಯವಸ್ತುವಿನೊಳೊಲಿಸಿ ಗೆಲವಿತ್ತು ರತಿಗೆಯ್ವುತ ||
ಮೇಲೆ ಮುಗುದೆಗೆ ವಸ್ತ್ರಾಭರಣಲೇಪನ ಮಿಂದ್ರ
ಜಾಲದಿಂದಾ ಪ್ರೌಢಕಲೆ ಕೇಳಿಯೊಳು ಕೂಡಿ
ಜ್ವಾಲೆಗುಂದುತ್ತೆಡರ ಪರಿವ ವಿಟರೊಬ್ಬುಳಿಯು ಜಾಲವಿರಲೊಂದೆಸೆ
[ ಯೊಳು || ೫೩ ||

ಗುಡುಗು ಮೊಳಗುಂ ಪೊಡೆವ ಭರಸಿಡಿಲಿಸೇಳ್ಗೆಯಿಂ
ದಡರಿ ಮಿಂಚುವ ತಳಪು ಗಾಢ ಘರ್ಜನೆಯಿಂದ
ಜಡಿವ ಕಗ್ಗತ್ತಲೆಯು ಕಾಳಗತ್ತಲೆಗಳಿವು ಬಡವನಿಯು ಮಿಡುಕುವನಿಯು||
ಒಡನೆ ಬಿಡದಲೆವ ಘಾಳಿಯ ಶೈತ್ಯ ಮಾಂದ್ಯವ
ವಡಸಿ ಭೋರಿಡುತಲಿರೆ ಗುಳಿತಿವರ್ಗಳೆನ್ನದಾ
ಮುಡದಿ ವಿರಹಾತುರದಿ ಮನಃಪ್ರಿಯನಿದ್ದೆಡೆಗೆ ನಡೆದು ಬರಲೇಂ
[ ವಗಳ್ವೆನು ||೫೪||

ಕನಸು ಸುಷುಪ್ತಿ ಜಾಗರವಡಸಿದೆಡೆಯೊಳುಂ
ಮನಃಪ್ರಿಯನಂ ನೆನೆದು ಸುಖಿಯಾದೆನೆಂಬರಾ
ವನಿತೆಯರು ಸೌಭಾಗ್ಯ ಪುಣ್ಯಮತಿವಂತೆಯರು ಮನಸಿಜನ ಪ್ರಿಯು
ಅನಿತಿರಲು ಘನವಿಯೋಗದೊಳೋರ್ವ ಸಖಿ ತನ್ನ [ ದಾಳ್ಗಳು ||
ಮನಃಪ್ರಿಯನಂ ನೆನೆದು ಜಾನಿಸುತಲಿರಲಾಗ
ಕನಸುಜಾಗರವಿಲ್ಲ ಕೂಟದನುಭವವಿಲ್ಲದಾವನಿತೆ ಬಿಸುಸುಯ್ದಳು ||೫೫||

ಸ್ಮರಕೇಳಿಯುಳಿದೋರ್ವ ವಿರಹದಳಲ್ನ ಸತಿಗೆ
ಶರೀರ ತಿದಿ ಸುಯಿಲಾಳಿ ವದನವಲೆ ನಾಸಿಕಂ
ಸ್ಮರಕೆಂಡದುರಿತಾಪದೊಬ್ಬುಳಿಕೆ ಪುರ್ವಿನಿಂ ಕರದಿಕ್ಕುಳಿನ ಕೈತವಾ ||
ಕರವಿಡಿದು ಸ್ಮರ ಕಾರ್ಮುಕಂ ಅಕ್ಷಿಬಾಣಮಾಂ
ತಿರೆ ತಿದ್ದಿಕಾಸಿ ಸತಿಯುರ ಭಾಷ್ಪಗಳ ನೀರ
ನೆರೆದೂಡಿ ಪತಿಕರಿಸಿದಂ ರತಿಯ ವಿರಹಮುಂ ಪರಿಕಿಸುವಡರಿದಾರಿಗೂ
[ ||೫೬||

ಮಲಯಜದಳಂ ಪೆಚ್ಚಿದುರಿತಾಪದಳಲಿನಿಂ
ಕುಳಿರ್ವ ತಳಿರ್ವನದೊಳುಂ ಸುಳಿದಾಡುತೊಳಪೊಕ್ಕು
ಮಳಲ ತಂಪಿನೊಳು ನಡೆಪಾಡಿ ಪರಿದಾಡುತಂ ತೆಳುಗಾಳಿಗೈದೋರುತ ||
ಜಲಧಿಯೊಳಪೊಕ್ಕು ತೀರದೆ ತಳಿರು ಹಾಸಿನೊಳು
ಮಲಗಿ ಮರವಿಂದಾಲವಟ್ಟದಿಂ ಬೀಸುತಿರೆ
ಲಲನೆಗಂ ವಿರಹಾನಲಂ ಬೆಚ್ಚುತಿರಲಾಗ ಬಲಿದುರಿಯ ತಾಪವೆಂತೊ
[||೫೭||

ಸತಿಪತಿಯು ವಿರಹಾತುರಂವೆರಸಿ ನಿಂದರಾ
ಮತಿಯು ಮಂಟಪದ ಚೀತ್ಕೃತಿವೆರೆದ ಗಳರವಂ
ಅತಿಶಯಾಲಿಂಗನ ಸುಚುಂಬನಂ ಸತ್ಕೃತಿಯು ಮತಿವಡೆದಲಲ್ಲೆರವ ದ ||
ನುತಿವಡದ ಶಕುನಿ ಪ್ರತಾನ ಕುಹಕೋತ್ಕೃತಂ
ಚತುರ್ವಡದ ಸಮುಪಾದ ಹೂಂಕೃತಂ ಚೀತ್ಕೃತದ
ಪ್ರತಿವಡದ ಪಾರಿವದರವ ಕಿಂಕಿಣೀರವದ ಗತಿಯೊಳುಂ ಕೂಟವದಗೆ
||೨೮||

ಆಲಿಂಗನದ ಸೊಬಗು ಚುಂಬನಂಗಳ ಸವಿಯು
ಮೇಲುದಂತಾಕ್ಷ ನಖಹತಿಯ ಖೇದಂಗಳನು
ಸಾಲುವಿಡಿದುಂಗುಟಾದಿಯ ಕಲೆಯುತೀವ್ರತಲು ಗೆಲಸೋಲದಿಂದ
ಕಾಲೋಚಿತದೊಳು ತರ್ಜನತಾಡನಂಗಳಿವ [ ರತಿಯ ||
ಕೀಲು ತೊಡಿಸಿದೊಲು ಸೌಗಂಧ ಬಂಧುರವಿಡಿದು
ತೋಳೊಳುಂ ತೋಳು ಬಲಿದಾಲಿ ಸಮುದೃಷ್ಟಿಯೊಳುಮಿಗೆ ಸಮು
[ ಯೋಗದಿ ||೨೯||

ಮಂದಮಾರುತನಂತೆ ಸೋಂಕು ತ್ರೈಗುಣದೊಳಗೆ
ಚಂದ್ರಕಾಂತದ ಶಿಲೆಯುನಲೆವಕಿರಣಗಳಂತೆ
ಬಂಧಿಸುತಲುರುಗಸೊಲೊಂದಿ ಮೃದುಗಿಳಿನುಡಿಯೊಳಿಂದು ಪಾರಿವ
ಸಿಂಧೂರ ಕೃತಿಯ ತನುವೂಟ ಬಾಯೂಟ ನಲ [ ರವದೊಳು ||
ಎಂದ ಕಲಹಂಸಕಲರವ ಲಾವುಕೆಯೊಳೊಂದಿ
ಮಂದಗಮನೆಯರೊಲಿದು ಚದುರರವಶಕೆ ಸಂದು ಕುಂದುಗಾಣಿಸ
[ ದಿರ್ದರು ||೬೦||

ತರುಲತೆಯುಬಂಧ ಗೋವೃಷಭ ಶಶಕರಣವಾ
ಹರಿಣಿಮೃಗಬಂಧ ವಾರಣಬಂಧ ಮಕರ ನಾ
ಗರಿಕ ಕರಣಂಗಳುಪರತಿ ತಂತ್ರ ಖೇದದೊಳು ವಿರಚಿಸುತ
ಸ್ಮರನುಗ್ರತಂತ್ರವನು ಪತಿಕರಿಸಿ ಖೇದವನು [ ಲೊಂದೊಂದನು ||
ಬೆರದರತಿತಂತ್ರ ಸಮಯೋಗ ಸಂಪ್ರೀತಿಯೋಳ್
ಕುರಿತು ಷೋಡಶಕಳೆಯ ಸರ್ವೋಪಚಾರದೊಳು ನೆರೆದರಂದೇಂ
[ ವೊಗಳ್ವೆನು ||೬೧||

ಸೆರೆದಿರ್ದಬೆಮರು ಬೆಂಬಲ್ಗುರುಳು ನಸುತಿಲಕ
ಮುಗಿದಿರ್ದನಯನ ಮೂಡುವ ಪುಳಕ ತನುಕಂಪು
ಬಿಗುಹುಕುಂದದ ಕುಚಂ ಬೀರುತಿಹ ನಿಡುಸುಯ್ಲು ಮಗಮಗಿಪ
ತೆಗೆದು ಕಡೆಗಂ ತೊಲಗದಾಲಿಂಗನದ ಸೊಬಗು [ ಸೌಗಂಧದ ||
ಸೊಗಸ ಬೀರುವ ಸುರತಕೇಳಿಯೊಳು ಮೂರ್ಛೆಯಂ
ಮಿಗೆತಳೆದು ತದ್ಭಾವ ಭಾವದೊಳು ಮುಳುಗಿದರು ಸುಗುಣದಾನಂದ
[ ದೊಳಗೆ ||೬೨||

ಲೀಲೆಮಿಗೆ ಕಾಲಹರ ಕರ್ಮಹರ ಸಿದ್ಧೇಶ
ನೋಲಗಂಗೊಟ್ಟು ಶರಣಾಳಿ ಸಮುತಿಯೊಳಿರಲು
ವೋಲಗದ ವೇಳೆಗಳಸರಿತು ಮಗುಳ್ದೈತಂದು ಪೇಳಲಾ ಕೇರಿಯೊಳಗೆ ||
ಕೇಳುತಂ ಬಾಲೆಯರು ಶೃಂಗರಂಗೆಯ್ದೊಡನೆ
ಮೇಳವಿಸಿ ವಿನಿಯೋಗದಾಳಿಯರು ಸಹಿತಲಾ
ತಾಳದಂಡಿಗೆ ವೀಣೆ ಮೇಲುವಾಲುಜೆ ಶೃತಿಯ ಜೋಳಿ ಸಮವೇತ್ರ
[ ಬರಲು ||೬೩||

ಬಂದಬಾಲೆಯು ಚೆಲ್ವೆಸೆದುದದರಂದವನು
ಮುಂದೆಪೇಳ್ವೆನು ಪರಿಪರಿಯ ಪಟ್ಟೆಯುಟ್ಟವರು
ಚಂದ್ರಗಾವಿಯು ಹಳದಿ ಹಸುರು ಬಿಳಿದುಟ್ಟವರು ಕುಂದದಾ ಗುಳ್ಳೆ
ಗಂಧಗಾವಿಯು ಸೀರೆ ಚಿತ್ರಬರಹಗಳೆಸೆವ [ ಯೆಸೆವ ||
ಸೌಂದರ್ಯವಾದ ವಸ್ತ್ರವನುಟ್ಟು ಸತಿಜನಗ
ಳಿಂದುಕಳೆಯಂ ಕಳೆದು ಮಿಗಿಲು ಪೂರ್ವವನ್ನೈದಿ ಬಂದರಾ ವೇಳೆ
[ ಯರಿತು ||೬೪||

ಕಾಲಪೆಂಡೆಯುದ ಗೆಜ್ಜೆಯ ಕಿಂಕಿಣಿಯರವದ
ಕೀಲಲುಳಿ ಘಂಟೆ ಸರಪಳಿಯ ಝೇಂಕೃತನಾದ
ಮೇಲು ಕಾಂಚಿಯದಾಮವಡಸಿ ಬಿಗಿದ ದೃಢದ ಜೋಡುಸರಗಳ
ತೋಳಬಂದಿಯು ಕಡಗ ಕಂಕಣದ ಮೇಲುಲಿಯ [ ರವದೊಳು ||
ನೀಲಮುತ್ತಿನಹಾರವೆಳಗು ಕಂಗೊಳಿಸುತಿರೆ
ವೋಲೆ ಚಿಂತಾಕು ಮೂಕುತಿವೆಳಗು ತಳಪೆಸೆವ ಬಾಲೆಯರು ನಿಂದರಾಗ
[ ||೬೫||

ಧಿಮಿಧಿಮಿಕೆಂದು ಬಾಜಿಪ ಮೃದಂಗದ ರವಂ
ಕ್ರಮುವರಿತು ತತ್ತಾಕರದ ತಾಳರವಗೂಡಿ
ಗಮಪದನಿಸರಿಯೆಂದುದಾಳಾಪಸ್ವರಗೈಯೆ ಟಮುಕೆಂದು ಪ್ರತಿ
ಸಮುವೆತ್ತು ತಂತಿವಾದ್ಯದ ಕಟ್ಟಳೆಯು ಕೂಡಿ [ ವಾಲುಜಾ ||
ರಮಣೀಯವಾಗಿರಂಜಿಸೆ ನಾಟ್ಯರಂಗದೊಳು
ಹಿಮರುಚಿಯ ಕಳೆವೆರದ ಸಂಮುಖದೊಳುಂ ನಿಂದರಮುಮು ಲಾಸ್ಯಾನು
[ ಭವಕೆ ||೬೬||

ಆಳಾಪಚಾರಿಯಂ ಸ್ವರಗೊಳಿಸಿ ನಿಂದರೆಲೆ
ತಾಳಗತಿ ವಾದ್ಯರವ ವೀಣೆ ಕಿನ್ನರಿಗತಿಯು
ಮೇಳ ನಾನಾಗತಿಯ ನಾಟ್ಯಗಡಣಗಳಿಂದ ತಾಳಸಮುಗೂಡಿನಿಲಲು ||
ಮೇಳವಿಸಿನಿಂದ ಸತಿಯರ ಭಾವವಳವಡಲು
ಕೋಲಚಾರಿಯೊಲ್ಸುರಿವ ವರುಷ ಪರಿಯಿಂ ನಿಲಲು
ಕಾಲನಟನೆಯ ಚೌಕ ಶುದ್ಧ ದೇಶಿಯಲೊದಗಿ ಬಾಲೆಯರ ನೃತ್ಯನಿಲಲು
||೬೭||

ಕೆಲರು ನೃತ್ಯಾದಿ ಗೀತವ ಪಾಡುತಿರೆ ಮೇಲೆ
ಕೆಲರು ವಚನಗಳ ಕಟ್ಟಳೆಗೊಳಿಸಿ ನಿಂತರಾ
ಕೆಲರು ದೇಶಿಯ ಕಟ್ಟಳೆಯ ಭಾವವಳವಟ್ಟುನಿಲಲು ತಾಂಡವ
ಕೆಲರು ರೂಪಾದಿ ರೇಖೆಯ ಚಿತ್ರನೋಟವಿರೆ [ ನಟನೆಯು ||
ಕೆಲರು ಹಸ್ತಾದಿ ಪಾದವ ಕಾಲಮಾನವಿರೆ
ಕೆಲರು ಶುದ್ಧಾತಿ ರೂಪು ನೇರು ಚೌಕವಕೊಳುತ ಲಲನೆಯರು
[ ಮೆರೆದರಂದು ||೬೮||

ಶಂಭು ಸಿದ್ದೇಶ್ವರನ ಓಲಗದ ಕನ್ನೆಯರು
ರಂಭೆ ಯೂರ್ವಸಿಯು ಮೇನಕಿಯು ತಿಲೋತ್ತಮೆಯು
ಅಂಬುಜಾನನೆ ಪದ್ಮಗಂಧಿ ಕಮಲಾಕ್ಷಿಯರು ನಿಂಬನೀರಜಮುಖಿಯರು ||
ಶಂಭು ಷಣ್ಮುಖಿ ಚಂದ್ರವದನೆ ನುತಗುಣಚರಿತೆ
ರಂಭೆಯುಂಬಿಕೆ ಶಾಂತೆ ಬಳಿಕ ಯೋಜನಗಂಧಿ
ಯಂಬುಜಾಸನ ಶಿರಂವಿಡಿದಾತನೋಲಗದಿ ನಿಂದು ಮೆರೆದರು ಸಂತತ
[ ||೬೯||

ಭೋಗಿಭೂಷಣ ಭಾಳನೇತ್ರ ಶೀತಾಂಶುಧರ
ನಾಗುಹೋಗಿಲ್ಲದಪ್ರತಿಮ ಘನಚಿನ್ಮಯನು
ನಾಗವಾಸಾಧಿಪರನೊಲಿದು ಮನ್ನಿಸುತ ನೆರೆರಾಗಮಿಗೆ ಸಂತೈಸುತ ||
ತ್ಯಾಗಮನ್ನಿತ್ತುವರ ತನ್ನಿವಾಸಕೆ ಕಳುಹಿ
ನಾಗನರಸುರರ ಪಾಲಿಸುತ ಸುಖದಿಂದಿರುತ
ಯೋಗಮಾರ್ಗದೊಳು ಪುರವರದೊಳೊಪ್ಪಿದನಂದು ಯೋಗಿಜನಮನಃ
ಪ್ರಿಯನು ||೭೦||

ವರ್ಗದೊಳು ಹೊರಗುಳಿದ ನಗಣಿತಾನಂದಮಯ
ದೀರ್ಘಾಯು ಸೋಮರುಂ ತಪನಿಗತ್ಯಧಿಕ ಘನ
ಭೂರ್ಗಗನ ಭೂತಾದಿಗಳಿಗಗೋಚರ ಕಾವ ಕೂರ್ಗಣೆಗೆ ಮೈದೋರದ ||
ಭರ್ಗನೆನಿಸುವ ನತ್ಯತಿಷ್ಠದ್ದಶಾಂಗುಲನು
ನಿರ್ಗಮನ ನಿತ್ಯತೃಪ್ತಂ ಸತ್ಯನನುಪಮನು
ದುರ್ಗಿಯ ವಿವಾದದಿಂ ನರಲೋಕಮಂ ಚರಿಸುತೂರ್ಜಿತದ ಮರುಳನೆ
[ ಸದ ||೭೧||

ಮರುಳನೆಂಬುದು ಮಾಯೆಮರುಳುಮಾಡಿದ ತರಳ
ಮರುಳನೆನಲಸುರರನು ಮರುಳುಗುರಿಮಾಡಿದಂ
ಮರುಳ ಕರಟಾಸುರನ ಕೊಂದಾಗ ಕರಡೆಯನು ಮರುಳ ಬಾಜಿಪ
ಮರುಳ ತಂಡಗಳು ಪರಿದಾಡಿ ಕುಣಿದಾಡುತಂ [ ರವದೊಳು ||
ಮರುಳನಂ ಪರಸಿ ಸುಖ ಸಂತಸದಲಿರಲಾಗ
ಮರುಳ ಸಿದ್ಧೇಶ್ವರನ ಓಲಗವು ಒಪ್ಪುತಿರೆ ಮರುಳನೆಸದಂ ಪುರದೊಳು
[ ||೭೨||

ಧರೆ ಶರ ವಡಭ ಮರುತ ಮಾರುತಪತನ್ನತ್ರ
ವರಚಂದ್ರ ತಪನ ವಸುಧರ ಪರಮ ಪರತತ್ತ್ವ
ಪರಮಗುರು ನಗತನೂಭವ ದೂಶನಂಶನಂ ವರಮಾತ್ಯ ಚರದ
ದರಹಾಸಮಂ ತಳೆದು ಮರುಳು ಮಹತಂತಳೆದು [ ಘನವ ||
ವರವತ್ಸಗಳ ಹಸರವಿಡಿದು ಪುರವರದತ್ತ
ವರ ಮುಹೂರ್ತವಡದ ಮರುಳನು ವರದ ಪರಮಾರ್ಥತರದ ವರದತ್ತನ
[ ಭವ ||೭೩||

ಧರೆಯ ಗುಣವಂ ಧರಿಸಿ ಮರುಳನೆಂದೆನಿಸಿದಂ
ವರುಣನಂ ಧರಿಸಿ ವಾರಣವೈರಿಯಾದ ಹರ
ನಿರದಗ್ನಿಯಂ ನೊಸಲೊಳು ಧರಿಸಿ ಶಿವನಾದ ಮರುತನಂ ನಾಶಿಕದೊಳು||
ಧರಿಸಿ ಶರಪಥದೊಳುಂ ನಿರ್ವಯಲ ನೆಯ್ದಿದಂ
ತರಣಿ ಶಶಿಯಂ ಧರಿಸಿ ಧರನಾದ ಪರಮಾರ್ಥ
ವರದ ವಸುಮೂರ್ತಿ ಶರಣಾಗತಜನರಕೀರ್ತಿ ಮರುಳ ಸಿದ್ಧೇಶ್ವರ
[ ಶರಣು ||೭೪||

ವಿಷಧರಾಧರದೇವ ಶಶಿಧರಾಧರಭಾವ
ವಿಷಧರಾಧರೆಯನುಂ ಧರಿಸಿದ ಮಹಾದೇವ
ವಿಷಧರಾಧರನಾಥ ವಿಷಮುದ್ರ್ರಗುವೆತ್ರಾತ ಬಿಸಿಗಣ್ಣೊಳೆಸೆವ ಮೂರ್ತಿ ||
ವಿಷಧರಾಹಿತಗಮನ ಪಶುಪತೀಶ್ವರರೂಪ
ವಿಷಧರಾಧರಸಾಮ್ಯ ವಿಷಧರ ಮಹಾಮಹಿಮ
ಋಷಿಜನಸುಸೇವಿತನೆ ವಿಷಗೊರಳ ಪರಮಾತ್ಮ ವಿಷಮೂರ್ತಿ
[ ಸಿದ್ಧೇಶ್ವರ ||೭೫||

ಹರಹರ ಮಹಾದೇವ ನಿರುತ ನಿತ್ಯಾನಂದ
ಹರಹರ ಮಹಾದೇವ ಪರತರಂ ಪರಮಾತ್ಮ
ಹರಹರ ಮಹಾದೇವ ನಿರ್ಗುಣ ನಿರಾಭಾರಿ ಶರಣು ಶರಣಾರ್ತಿ ಶರಣು ||
ಹರಹರ ಮಹಾದೇವ ದುರಿತ ದುಷ್ಕೃತನಾಶ
ಹರಹರ ಮಹಾದೇವ ಗಿರಿಜೇಶ ಭವನಾಶ
ಹರಹರ ಮಹಾದೇವ ಕರಿಚರ್ಮಧರಭಾವ ಮರುಳ ಸಿದ್ಧೇಶ ಶರಣು
[ ||೭೬||

ಶಿವಶಿವ ಮಹಾದೇವ ಶೀಲಗುಣ ಸಂಪನ್ನ
ಶಿವಶಿವ ಮಹಾದೇವ ಸಿದ್ಧಿಫಲದಾಯಕನೆ
ಶಿವಶಿವ ಮಹಾದೇವ ಭವಬಂಧಮಂ ಪರಿವ ಶಿವಕೃಪೆಯನೀವ ಭವನೆ ||
ಶಿವಶಿವ ಮಹಾದೇವ ಸಿರಿಯರಸ ಪೂಜಿತನೆ
ಶಿವಶಿವ ಮಹಾದೇವ ಶ್ರೀಶೈಲ ನೆಲೆವಾಸ
ಶಿವಶಿವ ಮಹಾದೇವ ಸ್ಥಿರವಾಸ ಸಿದ್ಧೇಶ ಶಿವ ಮರುಳ ಸಲಹುಗೆಮ್ಮ
[ ||೭೭||

ಭವಹರನೆ ಭವರೋಗವೈದ್ಯ ಮಾತಾಪಿತನೆ
ಭವಹರನೆ ಕಾಲಹರ ಕರ್ಮದುರಿತವಿನಾಶ
ಭವಹರನೆ ಭಾಗಿರಥಿ ಸಿಂಧುವಂ ಧರಿಸಿದನೆ ಭವವಾಲೆಯುತ್ತರಿಸುವ ||
ಭವಹರನೆ ಭಸ್ಮಾಂಗಧರ ತ್ರಿಪುರಮರ್ದನನೆ
ಭವಹರನೆ ಭಜಕರ ಬಂಧು ನಿರ್ಮಳರೂಪ
ಭವಹರನೆ ಭಕ್ತವತ್ಸಲ ಕೃಪಾಕರ ನಿತ್ಯ ಭವಸಿದ್ಧಲಿಂಗ ಶರಣು ||೭೮||

ಆದಿಪುರಾಣಂಗಳನುಗೆಟ್ಟು ಬೆದರಿದವು
ವಾದತರ್ಕಗಳು ಭೇದಿಸದೆ ಬೆಂಬಲವಾಗಿ
ಸಾಧಿಸುವ ಶಾಸ್ತ್ರ ಸನ್ಮತದೊಳರಿಯದೆ ತಾವು ಹೋದಗಾದೆಯ ಮಾತಿನ ||
ವೇದನಾಲ್ಕುಂ ಲಿಂಗದಾದಿಯನು ಮುನ್ನರಿಯ
ವಾದಿಸುವ ಹರಿಯಜರು ಪಾದಶಿರವರಿಯದಾ
ಮಾದಾರ ಚೆನ್ನನಲಿ ಶಿವನುಂಡಕಾರಣದಿ ಮಾಧವನ ಮರೆ ಹೊಕ್ಕವು
[ ||೭೯||

ಸರ್ವದೇವರದೇವ ಶಶಿಯಸೂಡಿದನೆ ನೀ
ಸರ್ವದೇವರದೇವ ಶಾಂತಮಲ್ಲೇಶ್ವರನೆ
ಸರ್ವದೇವರದೇವ ಮರುಳ ಸಿದ್ಧೇಶ್ವರನೆ ಕಾಳ್ಕುಜ್ಜಿನಿಯರಸನೆ ||
ಸರ್ವದೇವರದೇವ ಸರಸಿಜಾಕ್ಷ ತ್ರಿನಯನನೆ
ಸರ್ವದೇವರದೇವ ಶಂಬರಾಹಿತ ಹರನೆ
ಸರ್ವದೇವರದೇವ ಷಣ್ಮುಖ ಗಣರ ತಾತ ಶರ್ವ ಸಿದ್ಧೇಶ ಶರಣು ||೮೦||

**ಕವಿತೆಯಂ ಕರ್ಣಾಟ ಭಾಷೆಯಿಂದುಸುರ್ವೆನಾಂ**
**ನವರಸಂಗಳ ಭಾವ ಭರಿತ ಸದ್ಭಕ್ತಿಯಿಂ**
**ಯುವತಿಯರ್ಕಳೆ ಭೇದಗಳ ಚತುರ್ವರ್ಣ ಪೊಸಪೂಮಾಲೆ ರಸಕದಂಬ ||**
**ನವರತ್ನಮುಂ ಸ್ವರ್ಣದೊಳು ಸಮುಂಬೆಸದವೊಲು**
**ನವಗ್ರಹಂ ತತ್ತ್ರಸ್ಥಾನದೊಳ್ನಿಂದವೆಂಬಂತೆ**
**ಅವಿರಳ ಪರಬ್ರಹ್ಮ ಸಿದ್ಧಲಿಂಗಕೃತಿಯ ಹವಣಿಸಿದೆ ಸನ್ಮತಿಯಲಿ ||೮೧||**

ಪೇಳಿದನು ದೇವಸುತ ಪೇಳೆನುತಲೀಕೃತಿಯ
ಶಾಲಿವಾಹನ ಶಕಂ ಸಾಗುತಿರೆ ಸಾವಿರದ
ಮೇಲೆ ಐನೂರು ಒಂಭತ್ತನೆಯ ಸರ್ವಜಿತು ಸಂವತ್ಸರೆಂದೆನಿಸುವ
ಕಾಲದೊಳು ವೈಶಾಖ ಶುದ್ಧ ಪೌರ್ಣಮಿಯೊಳಗಾ
ವೇಳೆಯೊಳು ಜೀವವಾರ ಶುಭತಿಥಿಯೊಳಗೆ
ಬಾಲಶಶಿಧರ ಮರುಳ ಸಿದ್ಧೇಶ್ವರನ ಕೃತಿಯ ಕೇಳಿ ಶರಣರು ಸಂತತ
[ ||೨೨||

ಈಕೃತಿಯು ಮರುಳ ಸಿದ್ಧೇಶಚರಿತಂ ಇದನ
ವ್ಯಾಕುಲದಿ ಕೇಳ್ದ ಶಿವಭಕ್ತಜನಕಂ ಅಭವ
ತಾ ಕೊಡುವ ಚತುರ್ಪದವ ವಿಾರಿದೈಶ್ವರ್ಯವನು ಈ ಕಲಿಯುಗ
ನಾಲ್ಕು ಯುಗಕಂ ಇದೆಯಾದಿ ಚಾರ್ವಾಕರಿದ [ ದೊಳವರಿಗೆ ||
ನೂತನೆನ್ನಲು ನಾಯಕಂ ನರಕ ತಪ್ಪದೀ
ನೀತಿ ಶಾಸ್ತ್ರಕ್ಕಾರು ಪೀಠಿಕೆ ಸಮಸ್ತಪದ ನಾನುರೆಂಭತ್ತು ನಾಲ್ಕು ||೮೩||

ತಪ್ಪಂಬರೆದಾತ ಕಡುಜಡ
ನಪ್ಪಾತಂ ಬರೆದನೆಂದು ಬಯ್ಯಲ್ಬೇಡಿ ||
ತಪ್ಪಕ್ಕು ಶುದ್ಧಮಕ್ಕುಂ
ತಪ್ಪಿದ್ದರೆ ತಿದ್ದಿಕೊಳ್ಳಿರುತ್ತುಮ ಪುರುಷರ್ ||

ವರಕೃತಿಯೊಳ್ಬರೆದ ತಪ್ಪಂ
ಪರಿಹರಿಸುವುದೋದಿ ಕೇಳ್ದ ಸಜ್ಜನರೆಲ್ಲಂ ||
ಹೆರೆಗೆ ಕಳೆಹೀನವಾದರೆ
ಹರಧರಿಸನೆ ಮುಕುಟದಲ್ಲಿ ಯದಕಿದುಸಹಜಂ ||

---

# ಮರುಳಸಿದ್ಧ ಕಾವ್ಯ

## ಶಬ್ದಕೋಶ

### ಅ

| | | |
|---|---|---|
| ಅಡಗು | ೨-೩೨ | ಮಾಂಸ |

### ಆ

| | | |
|---|---|---|
| ಆರತಿ | ೪-೪೧ | ತೋಟ |

### ಇ

| | | |
|---|---|---|
| ಇಕ್ಷುಕೋದಂಡ | ೨-೧೩ | ಕಾಮ |

### ಉ

| | | |
|---|---|---|
| ಉಪಹತಿ | ೫-೧೨ | ತೊಂದರೆ, ಪೀಡೆ |

### ಕ

| | | |
|---|---|---|
| ಕಕ್ಕರ | ೧-೨೯ | ಕೊಕ್ಕರಿ |
| ಕದಂಬ | ೪-೮೮ | ಸಮೂಹ |
| ಕೇಣಿಕಾರ | ೫-೧೬ | ಚತುರ, ಬುದ್ಧಿವಂತ |

### ಗ

| | | |
|---|---|---|
| ಗರಳ | ೧-೬ | ವಿಷ |
| ಗುಲ್ಮ | ೧-೨೦ | ಪೊದರು |

### ಜ

| | | |
|---|---|---|
| ಜಜ್ಜುಗಂಧೆ | ೨-೫೨ | ಚಿಂದಿ ಬೊಂತೆ, (ಹರಕಲು ಬೊಂತೆ) |
| ಜಿಷ್ಣು | ೨-೬೮ | ಇಂದ್ರ |

### ತ

| | | |
|---|---|---|
| ತದುಕ | ೩-೭೪ | ಸಲ್ಲಕಿ ವೃಕ್ಷ, ಆನೆಬೇಲದ ಮರ |
| ತಡಸು | ೧-೨೬ | ತಡಸಿನ ಗಿಡ |
| ತರುವಲಿ | ೩-೬ | ತಂದೆತಾಯಿಗಳಾರೆಂದು ತಿಳಿಯದ ಹಸುಳೆ |
| ತಂಡಸ | ೧-೨೬ | ತಂಡಸ ಗಿಡ |
| ತಿಂಥಿಣಿ | ೬-೫ | ಗುಂಪು, ಸಮೂಹ |

ತೂಪಿರಿ ೨-೬೨ ದೃಷ್ಟಿದೋಷವನ್ನು ಪರಿಹರಿಸು

ತೋಮರ ೧-೨೫ ಬಾಣ, ಮುದ್ಗರ; ಈಟಿ

ದ

ದಾವಾನಲ ೧-೬ ಸಮುದ್ರದಲ್ಲಿನ ಬೆಂಕಿ

ಪತಿಕರಿಸು ೬-೬೧ ಮೆಚ್ಚು, ದಯೆದೋರು, ಒಲಿ

ಪಯಿಕ ೨-೫೩ ವಿಷಯ, ಕೆಲಸ (?)

ಪವುಸೆ ೧-೨೯ ಪಕ್ಷಿವಿಶೇಷ

ಪಿಪ್ಪಲದಳ ೬-೨೬ ಅರಳಿ ಎಲೆ

ಬ

ಬಾಸಣಿಸು ೪-೯೧ ಮುಚ್ಚುವುದು

ಬೆಂಚೆ ೨-೩೫ ಸಣ್ಣ ಸರೋವರ

ಬೆಳಕಿಗೆ ೪-೮೩ ಬಿಳುಪಾದ, ಹೊಳಪಾದ

ಮ

ಮುಸಲಿ ೧-೨೮ ಮೊಸಳೆ

ಲ

ಲಾಕುಳ ೪-೮೯ ಯೋಗದಂಡ

ಲಾಮಂಚ ೬-೧೪ ಒಂದು ಬಗೆಯು ಸುಗಂಧದ ಬೇರು
ಬಾಳವ ಬೇರು

ಸ

ಸರಟ ೧-೨೮ ಓತಿಕ್ಯಾತ

ಸಿಂಗಿ ೪-೯೦ ಸಿಂಹ

ಸುಮ್ಮಾನ ೩-೫೩ ಆನಂದ, ಸಂತೋಷ

ಹ

ಹರಡೆ ೧-೨೯ ಕೊಕ್ಕರೆ, ಕಂಕಪಕ್ಷಿ

ಹೋಟಿ ೩-೧೫ ಡೊಗರು, ಪೊಟರೆ

ಹೋರಟೆ ೨-೪೧ ಜಗಳ, ಹೊಡೆದಾಟ

---

# ಶುದ್ಧಾಶುದ್ಧ

| ಅಶುದ್ಧ | | ಶುದ್ಧ |
|---|---|---|
| ಸಲೆಹೆಮ್ಮನು | ೧-೮ | ಸಲಹೆಮ್ಮನು |
| ಪಕ್ಕಿಮೃಗ | ೧-೧೮ | ಪಕ್ಷಿಮೃಗ |
| ಮಾದವಿ | ೧-೨೬ | ಮಾಧವಿ |
| ಗಿಡದಲೆ | ೧-೩೫ | ಗಿಡದೆಲೆ |
| ಮುನಿಶ್ರೇಷ್ಟನುಂ | ೧-೩೬ | ಮುನಿಶ್ರೇಷ್ಠನುಂ |
| ನೀನೀಗೆ | ೧-೪೧ | ನೀನೀಗ |
| ಸ್ತಾನ | ೨-೩ | ಸ್ಥಾನ |
| ನುಡಿದಗಳಾಗಿರಿಜಾತೆ | ೨-೨೩ | ನುಡಿದಳಾಗಿರಿಜಾತೆ |
| ತ್ರಿರೇಕಾಳಿ | ೨-೩೧ | ತ್ರಿರೇಖಾಳಿ |
| ವೀದಿ ವೀದಿ | ೨-೩೫ | ವೀಥಿ ವೀಥಿ |
| ಮಧ್ಯವೀದಿ | ೨-೩೭ | ಮಧ್ಯವೀಥಿ |
| ಮರುಳುಸಿದ್ದೇಶ್ವರನು | ೨-೫೦ | ಮರುಳುಸಿದ್ಧೇಶ್ವರನು |
| ನಿರ್ಗಮರ | ೨-೫೨ | ನಿರ್ಗಮನ |
| ಕಮುಸಹರ | ೩-೧ | ತಮುಸಹರ |
| ಭಕ್ತಪತ್ಸಲ | ೩-೧ | ಭಕ್ತವತ್ಸಲ |
| ವ್ಯೆಯೋಳ್ಕಿಂದು | ೩-೨ | ವ್ಯೆಯ್ಯೊಳ್ಕಿಂದು |
| ತರಣಗಂ | ೩-೩ | ತರುಣಗಂ |
| ಶಿಖಿ | ೩-೩ | ಸಖಿ |
| ಕೊಂಡು | ೩-೨೮ | ಕೊಂದು |
| ಮಧ್ಯಕವರೆಯ್ತಂದು | ೩-೨೯ | ಮಧ್ಯಕವರ್ಕೆಯ್ತಂದು |
| ಮಾತೊರ್ಡಹಲುಂ | ೩-೪೨ | ಮಾಕೊರ್ಡಹಲುಂ |
| ದಿಂಡಿಮಿಕು ದಿಮಿಕೆಂದು | ೩-೫೪ | ದಿಂದಿಮಿಕು ದಿಮಿಕೆಂದು |
| ನಿರ್ಘರ | ೩-೬೦ | ನಿರ್ಭರ |
| ಪಲ್ಲಿತ್ತು | ೩-೬೧ | ಪಲ್ಗಿತ್ತು |
| ನೈಮಿಶಾರಣ್ಯದಂತೆ | ೩-೭೨ | ನೈಮಿಷಾರಣ್ಯದಂತೆ |

| ಶುದ್ಧ | | ಅಶುದ್ಧ |
|---|---|---|
| ಚಂಪಕಾರುಣ್ಯ | ೩-೭೨ | ಚಂಪಕಾರಣ್ಯ |
| ಜಾದಗೆ | ೩-೭೪ | ಚಾದಗೆ |
| ಸಿದ್ದಸಾಧಕರು | ೩-೭೫ | ಸಿದ್ಧಸಾಧಕರು |
| ಪರಕಿಸಲು | ೩-೮೨ | ಪರಿಕಿಸಲು |
| ಬ್ರಾಹ್ಮರ್ನಮಿಸುತಿರಲ್ | ೩-೯೪ | ಬ್ರಾಹ್ಮಣರ್ನಮಿಸುತಿರಲ್ |
| ಹೃದಯುದಾ | ೩-೯೪ | ಹೃದಯುದಾ |
| ಕರ್ತವೆನಿಸುವ | ೩-೧೦೩ | ಕರ್ತೃವೆನಿಸುವ |
| ಗೋವರಳೊಬ್ಬ | ೩-೧೦೭ | ಗೋವರಳೊಬ್ಬ |
| ನಾಣ್ಣುಡಿ | ೩-೧೦೯ | ನಾಣ್ಕುಡಿ |
| ಸಲ್ಲಿಲಿತ | ೩-೧೧೦ | ಸಲ್ಲಲಿತ |
| ಪಿಂಗದೆಲೆಸವೆವುತಿರಲು | ೩-೧೧೬ | ಪಿಂಗದಲೆಸೆವೃತಿರಲು |
| ಮೂರ್ಖತನಪೇನು | ೩-೧೧೭ | ಮೂರ್ಖತನವೇನು |
| ಹರಿಗಳರುತರ | ೪-೨ | ಹರಿಗಳುರುತರ |
| ಶಿಷ್ರೂಷೆಯನು | ೪-೧೬ | ಶುಶ್ರೂಷೆಯನು |
| ಮರುಳಸಿದ್ದೇಶ್ವರನು | ೪-೨೦ | ಮರುಳಸಿದ್ಧೇಶ್ವರನು |
| ಮರುಳಸಿದೇಶ್ವರನ | ೪-೭೩ | ಮರುಳಸಿದ್ಧೇಶ್ವರನ |
| ಮರುಳಸಿದ್ದೇಶ್ವರನ | ೪-೯೮ | ಮರುಳಸಿದ್ಧೇಶ್ವರನ |
| ಯುದ್ದ | ೪-೯೮ | ಯುದ್ಧ |
| ಜಘನದಿ | ೬-೨೫ | ಜಘನದಿಂ |
| ಕಂಬುಕಂದರ | ೬-೨೬ | ಕಂಬುಕಂಧರ |
| ಭಾಷ್ಪ | ೬-೫೬ | ಬಾಷ್ಪ |
| ಸಿದ್ದೇಶ್ವರನ | ೬-೬೯ | ಸಿದ್ಧೇಶ್ವರನ |
| ವಡಭ | ೬-೭೩ | ವಡಬ |

# ಅ. ನ. ಕೃಷ್ಣರಾಯರ ಗ್ರಂಥಗಳು

---

**ಕಥೆ**

ಕಣ್ಣುಮುಚ್ಚಾಲೆ
ಪಾಪ-ಪುಣ್ಯ
*ಕಾಮನ ಸೋಲು
*ಜಾತಿಹೀನನ ಮನೆಯ ಜ್ಯೋತಿ
*ಕಿಡಿ
*ಮಿಂಚು

**ಕಾದಂಬರಿ**

*ಜೀವನಯಾತ್ರೆ
ಉದಯರಾಗ
ಸಂಧ್ಯಾರಾಗ
*ಮಂಗಳಸೂತ್ರ
ಸಾಹಿತ್ಯರತ್ನ
ನಟ ಸಾರ್ವಭೌಮ

**ಜೀವನ ಚರಿತ್ರೆ**

*ಬಸವಣ್ಣನವರ ಅಮೃತವಾಣಿ
ಸ್ವಾಮಿ ವಿವೇಕಾನಂದ

**ಸಂಪಾದಿತ**

ಮರುಳು ಸಿದ್ಧೇಶ್ವರ ಕಾವ್ಯ

**ಪ್ರಬಂಧ**

*ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
ಹೊಸ ಹುಟ್ಟು
ರಾಜಾ ರವಿವರ್ಮ
ಸಾಹಿತ್ಯ ಮತ್ತು ಜೀವನ

**ನಾಟಕ**

*ಮದುವೆಯೋ – ಮನೆ ಹಾಳೋ
*ಆಹುತಿ
*ಆದದ್ದೇನು
*ಗೋಮುಖ ವ್ಯಾಘ್ರ
ಎರಡು ನಾಟಕಗಳು
ಬಣ್ಣದ ಬೀಸಣಿಗೆ

**ಸಂಕಲನ**

*ಪ್ರಣಯ ಗೀತಗಳು
ರಸಋಷಿ
*ಕಾಮನ ಬಿಲ್ಲು
ಭಾರತೀಯ ಕಥಾಸಾಹಿತ್ಯ
ಪ್ರಗತಿಶೀಲ ಸಾಹಿತ್ಯ
ಮ್ಯಾಕ್ಸಿಂ ಗಾರ್ಕಿ

**ಇತರ**

ನನ್ನನ್ನು ನಾನೇ ಕಂಡೆ

**ಅಚ್ಚಿನಲ್ಲಿ**

ಕರುಳಿನ ಕೂಗು (ಕಾದಂಬರಿ)
ಯುಗಪುರುಷ ಲೆನಿನ್ (ಜೀವನ ಚರಿತ್ರೆ)
ಭಗವದ್ಗೀತಾರ್ಥಸಾರ (ಸಂಪಾದಿತ)

---